# ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೪



## ಶ್ರೀ ವರಾಹತಿಮ್ಮಪ್ಪ ಹಾಗೂ ಇತರ ದಕ್ಷಿಣ ಕನ್ನಡದವರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೪

# ಶ್ರೀ ವರಾಹತಿಮ್ಮಪ್ಪ
# ಹಾಗೂ ಇತರ
# ದಕ್ಷಿಣ ಕನ್ನಡದವರ ಕೀರ್ತನೆಗಳು


*ಸಂಪಾದಕರು*

ದಿ. ಪ್ರೊ. ಎಂ. ರಾಜಗೋಪಾಲಾಚಾರ್ಯ

ಡಾ. ಶ್ರೀನಿವಾಸ ಹಾವನೂರ



ಕರ್ನಾಟಕ ಸರ್ಕಾರ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಬೆಂಗಳೂರು

**SAMAGRA DASA SAHITYA VOLUME - 24**
*Sri Varahathimmappa Haagu Ithara Dakshina Kannadadavara Keerthanegalu.* Edited by Late Prof. M. Rajagopalacharya and Dr. Shrinivasa Havanur. Published by Sri.Y. K.Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 83 + ೪೭೨


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨

ಮುದ್ರಕರು :

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

### ಕಾರ್ಯನಿರ್ವಾಹಕ ಸಂಪಾದಕರು

ಡಾ. ಶ್ರೀನಿವಾಸ ಹಾವನೂರ

ಡಾ. ಟಿ. ಎನ್. ನಾಗರತ್ನ

ಪ್ರೊ. ವಸಂತ ಕುಷ್ಟಗಿ

### ಸದಸ್ಯರು

ಡಾ. ಎಂ. ಎಂ. ಕಲಬುರ್ಗಿ

ಪ್ರೊ. ಎಂ. ರಾಜಗೋಪಾಲಾಚಾರ್ಯ (ಫೆಬ್ರವರಿ '೯೮ ರವರೆಗೆ)

ಡಾ. ಕೃಷ್ಣ ಕೊಲ್ಹಾರಕುಲಕರ್ಣಿ

ಡಾ. ಮಂದಾಕಿನಿ

ಪ್ರೊ. ಸುಧಾಕರ

ಡಾ. ಬಸವರಾಜ ಸಬರದ

### ಸದಸ್ಯ ಕಾರ್ಯದರ್ಶಿ

ನಿರ್ದೇಶಕರು

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯಮಯ ವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಆವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮೂವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ.ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೇ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾ ನಿಲಯುವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು– ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವಕ್ಕೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ಡಾ. ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾಲ್ಟಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

ಒಂದೆರಡು ಶತಮಾನಗಳ ಮೊದಲು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶನಿವಾರ ಭಜನೆ, ಭಜನಾ ಸಪ್ತಾಹ, ಏಕಾದಶಿ ಜಾಗರದಲ್ಲಿ ಹರಿಕೀರ್ತನೆ, ಹರಿಕಥಾ ಕಾಲಕ್ಷೇಪ, ಯಕ್ಷಗಾನ, ಬಯಲಾಟ, ತಾಳಮದ್ದಲೆಕೂಟ, ಪುರಾಣವಾಚನ ಇವೆಲ್ಲಾ ತೀರ ಲವಲವಿಕೆಯಿಂದ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಗಳಾಗಿದ್ದುವು. ಇವುಗಳಲ್ಲದೆ ಅಲ್ಲಲ್ಲಿ ಹಳ್ಳಿಯಲ್ಲಿ ದಕ್ಕೆಬಲಿ, ಬೂತದ ಕೋಲ ಮುಂತಾದ ಜಾನಪದ ನೃತ್ಯಗಳೂ ಇದ್ದವು. ನಾಗಮಂಡಲ ತುಂಬ ಹೆಸರಾದ ಕಾರ್ಯಕ್ರಮ. ಭಜನೆ ಮತ್ತು ಹರಿಕೀರ್ತನೆಗಳು ತೀರ ಸಾಮಾನ್ಯ, ಇವುಗಳಲ್ಲಿ ಹರಿದಾಸರ ಹಾಡುಗಳನ್ನು ತಲ್ಲೀನರಾಗಿ ಹಾಡುತ್ತಿದ್ದರು. ಈ ಕಾರ್ಯಕ್ರಮಗಳಿಂದಾಗಿ ಜನರಲ್ಲಿ ಒಂದು ತರದ ಸಾಹಿತ್ಯದ ಸಂಸ್ಕಾರ ಬೆಳೆದು ಬಂದಿತ್ತು. ಮದುವೆ ಮುಂಜಿಗಳಲ್ಲಿ ಮುತ್ತೈದೆಯರು ಹಾಡುವ ಹಸೆಯ ಹಾಡುಗಳನ್ನು ಇಲ್ಲಿಯ ಹಲವು ಕವಿಗಳು ರಚಿಸಿದ್ದರು. ಹರಿದಾಸರ ಕೀರ್ತನೆಗಳನ್ನು ಹೋಲುವ ಹಾಡುಗಳನ್ನು ರಚಿಸಿ ಹಾಡುವ ಆಶು ಕವಿಗಳು ಇದ್ದರು. ಕೆಲವು ಹಸೆಯ ಹಾಡುಗಳು ನಾಟಕ ಮಟ್ಟುಗಳ ಹಾಗೆ, ಹಲವು ಸಿನಿಮಾ ಗೀತೆಗಳ ಹಾಗೂ ಇದ್ದದ್ದು ಉಂಟು. ಹರಿಕಥಾ ಕಾರ್ಯಕ್ರಮದಲ್ಲಿ ಕೀರ್ತನಕಾರರು ಕೆಲವು ವೇಳೆ ಸ್ಫೂರ್ತಿ ಬಂದು ಸ್ಥಳದಲ್ಲೆ ತುಂಡು ಪದ್ಯಗಳನ್ನು ಹೊಸೆದು ಹಾಡುತ್ತಿದ್ದದ್ದೂ ಇದೆ. ಹಾಸ್ಯಭರಿತವೂ ವಿಡಂಬನಾತ್ಮಕವೂ ಆದ ಹಾಡುಗಳಿಗೂ ಕೊರತೆ ಇದ್ದಿಲ್ಲ. 'ಕೊಳಕ್ ಅಕ್ಕಳೆ ಪಾನಕ ತಕ್ಕೊಳ್ಳಿ ಗಂಗೋದಕ' ಎಂಬಂಥ ವಿಡಂಬನಾತ್ಮಕವಾದ ಹಾಡುಗಳು ಇತರ ಆಶು ಕವಿತ್ವಕ್ಕೆ ಉದಾಹರಣೆ. ಇವರೆಲ್ಲಾ ಬಹಳ ಓದಿದವರಲ್ಲ. ಐಗಳಮಠದಲ್ಲೊ, ಹೆಚ್ಚೆಂದರೆ ಪ್ರಾಥಮಿಕ ಶಾಲೆಗಳಲ್ಲಿ ಮಾತ್ರ ಓದಿದವರು. ಆದರೆ ಕುಮಾರವ್ಯಾಸ, ಜೈಮಿನಿ ಮುಂತಾದ ಹಳಗನ್ನಡ ಕಾವ್ಯಗಳನ್ನು

ಪುರಾಣವಾಗಿ ಓದಿ ಪ್ರವಚನ ಮಾಡುವಷ್ಟು ಪ್ರಗಲ್ಭರಾಗಿದ್ದರು. ಒಟ್ಟಿನಲ್ಲಿ ಇಲ್ಲಿ ಹೆಚ್ಚಿನ ಮಂದಿ 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣಿತಮತಿಗಳೇ' ಆಗಿದ್ದರು.

ಇಲ್ಲಿ ವ್ಯಾಸಕೂಟ ಮತ್ತು ದಾಸಕೂಟಗಳಲ್ಲಿ ತುಂಬ ಪ್ರಸಿದ್ಧರಾದವರು ಶ್ರೀ ವಾದಿರಾಜಸ್ವಾಮಿಗಳು. ಹರಿದಾಸ ಸಾಹಿತ್ಯಕ್ಕೆ ವಾದಿರಾಜರ ಕಾಲವೊಂದು ಸುವರ್ಣಯುಗ. ವಾದಿರಾಜರ ಶಾಸ್ತ್ರ ಗ್ರಂಥಗಳು ಎಷ್ಟು ಪ್ರೌಢವೋ ಅಷ್ಟೇ ಸರಳ ಇವರ ಕನ್ನಡದ ಹಾಡುಗಳು. ಯತಿಗಳಾಗಿದ್ದು ದಾಸಸಾಹಿತ್ಯವನ್ನು ತಾವೇ ರಚಿಸಿದ್ದಲ್ಲದೆ, ಇತರ ಹರಿದಾಸರನ್ನು ತಾವು ಅಭಿಮಾನದಿಂದ ನೋಡಿದರು. ಇವರ ಕಾಲದಲ್ಲಿ ಪುರಂದರದಾಸರು, ಕನಕ ಮೊದಲಾದ ದಾಸರು ಉಡುಪಿಗೆ ಬಂದು ಕಡಗೋಲು ಕೃಷ್ಣನನ್ನು ಕಣ್ಣಾರೆ ಕಂಡು ಧನ್ಯರಾದರು. ಹೀಗಾಗಿ ಹರಿದಾಸ ಪಂಥದವರಿಗೆ ಪಂಡರಪುರ, ತಿರುಪತಿ ಇವುಗಳ ಹಾಗೆ ಉಡುಪಿ ಒಂದು ಆರಾಧನಾ ಕೇಂದ್ರವೆನಿಸಿತು. ಪಂಡರಪುರದ ವಿಠಲ ನಾದಬ್ರಹ್ಮನಾದರೆ, ತಿರುಪತಿಯ ಶ್ರೀನಿವಾಸ ಕಾಂಚನಬ್ರಹ್ಮ, ಹಾಗೆ ಉಡುಪಿ ಅನ್ನಬ್ರಹ್ಮನ ದೇಗುಲ ವೆಂದೇ ಪ್ರಸಿದ್ಧವಾದ ಯಾತ್ರಾ ಕೇಂದ್ರವಾಯಿತು. ಈಗ ಹೆಚ್ಚಿನ ದೇವಾಲಯಗಳಲ್ಲಿ ಮಧ್ಯಾಹ್ನದ ಹೊತ್ತು ಬಂದವರಿಗೆ ಊಟದ ವ್ಯವಸ್ಥೆ ಇದ್ದರೂ ಆಗ ಉಡುಪಿ ಅನ್ನಸಂತರ್ಪಣೆಯಿಂದಲೂ ಪ್ರಸಿದ್ಧವಾಗಿತ್ತು.

ಶ್ರೀವಾದಿರಾಜರ ಕಾಲದಲ್ಲಿ ದೇವರ ಪೂಜೆಯ ಅಂಗವಾಗಿ ಭಜನೆ ಸಂಕೀರ್ತನೆಗಳು ರೂಢಿಗೆ ಬಂದಿರಬೇಕು. ಸಮಸ್ತ ರಾಜೋಪಚಾರವನ್ನು ಛತ್ರ, ಚಾಮರ, ಭಜನ ಸೇವೆ ಇತ್ಯಾದಿಗಳನ್ನು ಸ್ವಾಮಿಗಳೇ ಮಾಡುವ ಸಂಪ್ರದಾಯ ಬಂದಿತು. ನಾದಲೋಲನಾದ ಕೃಷ್ಣ ಮಂತ್ರ ತಂತ್ರಗಳಿಗೆ ವಶ್ಯನಾದ ಹಾಗೆ ಭಜನೆ ಸಂಕೀರ್ತನೆಗಳಿಂದ ತೃಪ್ತನಾಗುತ್ತಾನೆ ಎಂಬ ಭಾವನೆ ಇತ್ತು. ಶ್ರೀ ವಾದಿರಾಜರು ಹಾಡುಗಳಿಂದಲೇ ಪೂಜೆಯನ್ನು ಸಲ್ಲಿಸಲು ಸಾಧ್ಯವಾಗುವ (ನೈವೇದ್ಯ, ತಾಂಬೂಲ, ಫಲ ಸಮರ್ಪಣೆ) ಆರತಿ, ಕೀರ್ತನೆಗಳನ್ನು ಬರೆದಿದ್ದರು. ಭಜನೆ ಎಂಬುದು ಬರೇ ಕಾಲಕ್ಷೇಪವಲ್ಲ, ಅದೂ ಪೂಜಾ ವಿಧಾನ, ಹರಿಕೀರ್ತನೆ, ನೃತ್ಯ ಇವೂ ಪೂಜಾಂಗಗಳೆಂದೇ ಪರಿಗಣಿತವಾಯಿತು.

ಆ ಕಾಲದಲ್ಲಿ ದೀಕ್ಷೆ ಪಡೆದು ಹರಿದಾಸರಾಗಿ ಹಾಡುಗಳನ್ನು ಬರೆದ ದಾಸರು ಅಲ್ಲಲ್ಲಿ ಇದ್ದರು. ಇವರು ತಮ್ಮ ಗುರುಗಳಿಂದ ಅಂಕಿತವನ್ನು ಪಡೆದು, ತಾಳ ತಂಬೂರಿ ಹಿಡಿದು, ಭಿಕ್ಷಾಟನದಿಂದಲೇ ಬದುಕುತ್ತಿದ್ದರು. ವೈರಾಗ್ಯ ಹೊಂದಿ ಪ್ರಾಪಂಚಿಕ ವಿಷಯ ವಿಮುಖರಾಗಿದ್ದು ಲೋಕಕಲ್ಯಾಣವನ್ನೇ ಗುರಿಯಾಗಿಟ್ಟು-ಕೊಂಡ ಇವರ ಬದುಕು ಇತರರಿಗೆ ಅನುಕರಣೀಯವಾಗಿದ್ದಿತು. ಹರಿದಾಸರ ಸಾಹಿತ್ಯ ಕೃತಿಗಳಿಂದ ಪ್ರಚೋದಿತರಾದ ಹಲವರು ಆ ಮಾದರಿಯಲ್ಲಿ ತಾವೂ ಹಾಡುಗಳನ್ನು ರಚಿಸಿ, ಕಾಲಿಗೆ ಗೆಜ್ಜೆ ಕಟ್ಟಿ ಹಾಡಿದರು, ಕುಣಿದರು, ಮೈಮರೆತು ಭಜನೆ ಮಾಡಿದರು. ಹೀಗಾಗಿ ಈ ಜಿಲ್ಲೆಯಲ್ಲಿ ದಾಸಸಾಹಿತ್ಯದ ಕೃಷಿ ಬೇರೆ ಬೇರೆ ಮಜಲುಗಳಲ್ಲಿ ನಡೆಯಿತು. ಆದರೆ ಹಾಗೆ ರಚಿತವಾದ ಹಾಡುಗಳೆಲ್ಲವೂ ಉತ್ಕೃಷ್ಟ ಕಾವ್ಯ ಗುಣವುಳ್ಳವೆನ್ನಲಾಗುವುದಿಲ್ಲ. ತೀರ ಸಾಮಾನ್ಯವೆನ್ನಬಹುದಾದವೂ ಇದ್ದುವು. ಅಂತು ದಾಸರ ಹಾಡುಗಳ ಮಾದರಿಯಲ್ಲಿ ಅದೇ ರಾಗ ತಾಳ ಮತ್ತು ಧಾಟಿಗಳಲ್ಲಿ ಹಲವು ರಚನೆಗಳು ಬಂದವು. ಎಷ್ಟೋ ಹಾಡುಗಳು ದ್ವಿಪ್ರತಿಗಳಂತೆ ಕಂಡರೂ ತಪ್ಪಲ್ಲ.

ಹರಿದಾಸರಾಗಬೇಕಾದವರು ಹಿರಿಯ ದಾಸರೊಬ್ಬರನ್ನು ಗುರುವಾಗಿ ಅಂಗೀಕರಿಸಿ, ಅವರಿಂದ ದಾಸ ದೀಕ್ಷೆ ಪಡೆದು, ಅಂಕಿತವನ್ನೂ ಸಂಪಾದಿಸಿಕೊಂಡು, ಬಿಂಬೋಪಾಸನೆ ಮಾಡುತ್ತಾ, (ತಮ್ಮ ಅಂತರ್ಯಾಮಿಯಾದ ಭಗವಂತನ ಸ್ವರೂಪವನ್ನು ಆರಾಧಿಸುತ್ತಾ) ಉಂಛವೃತ್ತಿಯಿಂದ ಜೀವಿಸಿಕೊಂಡು ಸಾಮಾನ್ಯ ಜನರನ್ನು ತಿದ್ದಿ ಮಾರ್ಗದರ್ಶನ ಮಾಡುತ್ತಿದ್ದರು. ಅವರು ತಮ್ಮ ಕೀರ್ತನೆಗಳಿಂದ ಜನರಲ್ಲಿ ಒಂದು ತರದ ಸಂಸ್ಕಾರವನ್ನು ಬೆಳೆಸುವ ಕೆಲಸ ಮಾಡುತ್ತಿದ್ದರು. ಈ ಶತಮಾನದ ಮೊದಲಿನ ದಶಕದವರೆಗೂ ಅಂತಹ ದಾಸರಿದ್ದರು. ಮುಂದಿನವರು ದೀಕ್ಷೆ ತೆಗೆದುಕೊಂಡೇ ದಾಸರಾಗಿಲ್ಲ. ತಾವೇ 'ಸ್ವಾಂತ ಸುಖಾಯ' ಹಾಡುಗಳನ್ನು ಬರೆದು, ತಮಗೆ ತೋರಿದ ಅಂಕಿತವನ್ನು ತಾವೇ ಹಾಕಿಕೊಂಡು, ಹಾಡಿದರು, ನಲಿದರು. ಹರಿಕಥೆ ಮಾಡುತ್ತಾ, ದಾಸಸಾಹಿತ್ಯವನ್ನು ರಚಿಸಿದವರಲ್ಲಿ ಹಂಡೆ ಶ್ರೀಪಾದದಾಸರು (೨೦ನೆಯ ಶತ.) ಇಲ್ಲಿ ಕೊನೆಯ ಕೊಂಡಿಯೆನ್ನಬಹುದು. ಇವರಿಗೆ ಪುತ್ತಿಗೆ ಮಠದ ಶತಾಯು, ಶ್ರೀ ಸುಧೀಂದ್ರತೀರ್ಥ ಸ್ವಾಮಿಗಳು 'ಹನುಮನಯ್ಯ' ಎಂಬ

ಮುದ್ರಿಕೆಯನ್ನು ಅನುಗ್ರಹಿಸಿದ್ದರಂತೆ. ಇವರ ಹಾಡುಗಳು ಸಂಕಲನ ರೂಪದಲ್ಲಿ ಬಂದಿಲ್ಲ. ಯಾವುದೂ ಈಗ ಉಪಲಭ್ಯವಿಲ್ಲ.

ಹರಿದಾಸ ಸಾಹಿತ್ಯದಲ್ಲಿ ಕೃಷಿ ಮಾಡಿದ ಇತರ ಮಹನೀಯರೆಂದರೆ ಶ್ರೀ ತುಪಾಕಿ ವೆಂಕಟರಮಣಾಚಾರ್ಯರು, ಪಾವಂಜೆ ಲಕ್ಷ್ಮೀನಾರಣಪ್ಪಯ್ಯ, ವೆಂಕಣ್ಣ ಕವಿ, ಮಟ್ಟಿವಾಸುದೇವ ಪ್ರಭು, ಶೇಷ ಪ್ರಭು, ನಾರಾಯಣ ಕಾಮತ್, ವಾಸುದೇವಯ್ಯ, ರಾಮಕೃಷ್ಣ ವಾಸುದೇವ ಶ್ಯಾನುಭೋಗ, ರಾಮ ಐಗಳು, ಬೆಳ್ಳೆದಾಸಪ್ಪಯ್ಯ, ದೇವಣ್ಣ ಮುಂತಾದವರು ಹಲವು ಮಂದಿ ಇದ್ದರು. ಇವರಲ್ಲಿ ಹಲವರ ಹಾಡುಗಳು ಸಂಗ್ರಹ ರೂಪದಲ್ಲಿ ಉಪಲಬ್ಧವಾಗಿಲ್ಲ.

ಈ ಸಂಗ್ರಹದಲ್ಲಿ ಸೋದೆಮಠದ ಶ್ರೀ ವಿಶ್ವೇಂದ್ರ ತೀರ್ಥಸ್ವಾಮಿಗಳು, ನೆಕ್ಕಾರಿನ ಕೃಷ್ಣದಾಸರು, ಪಣಂಬೂರು ಸದಾನಂದರು, ಬೆಳ್ಳೆ ದಾಸಪ್ಪಯ್ಯನವರು ಮತ್ತು ಮೈರ್ಮಾಡಿ ಗೋವಿಂದ ಗೋಳೇರರು ಇವರ ಹಾಡುಗಳನ್ನು ಆಯ್ದು ಕೊಡಲಾಗಿದೆ. ಸಂಗ್ರಹ ರೂಪದಲ್ಲಿ ಉಪಲಬ್ಧವಿಲ್ಲದ ವೆಂಕಣ್ಣಕವಿ, ಮಟ್ಟಿ ವಾಸುದೇವ ಪ್ರಭು, ಶೇಷ ಪ್ರಭು, ಕವಿ ರಾಮಕೃಷ್ಣ, ವಾಸುದೇವ ಶಾನಭಾಗ, ಬಂಗ್ಲೆ ನಾರಾಯಣ ಕಾಮತ, ಬೋಳಾರ ವಾಸುದೇವಯ್ಯ ಇವರ ಎರಡೆರಡು ಹಾಡುಗಳನ್ನು (ಸಿಕ್ಕಿದ್ದು ಅಷ್ಟೇನೆ) ಇಲ್ಲಿ ಸೇರಿಸಲಾಗಿದೆ.

ಕೊನೆಯಲ್ಲಿ 'ರಘುಪತಿ' ಮುದ್ರಿಕೆಯ ಎರಡು ಅಪೂರ್ವ ಹಾಡುಗಳಿವೆ. ಅದನ್ನು ರಚಿಸಿದವರು ಪಲಿಮಾರು ಮಠದ ಶ್ರೀ ರಘುವರ್ಯಸ್ವಾಮಿಗಳು.

ಇನ್ನೀಗ ಪ್ರಮುಖರಾದ ಕೆಲವು ಹರಿದಾಸರ ಜೀವನ ಚರಿತ್ರೆಯನ್ನು ಕೊಡಬೇಕೆಂದಿದೆ.

## ೧. ಸೋದೆ ಶ್ರೀ ವಾದಿರಾಜ ಮಠದ ವಿಶ್ವೇಂದ್ರತೀರ್ಥರು

ಉಡುಪಿಯ ಅಷ್ಟ ಮಠಗಳಲ್ಲಿ ಸೋದೆ ಮಠವೂ ಒಂದು. ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಸಹೋದರರಾದ ಶ್ರೀ ವಿಷ್ಣುತೀರ್ಥರೇ ಈ ಮಠದ ಮೂಲ ಗುರುಗಳು. ಈ ಪರಂಪರೆಯಲ್ಲಿ ಬಂದ ವ್ಯಾಸ-ದಾಸಕೂಟಗಳಲ್ಲಿ

ವಿಖ್ಯಾತರಾದ ಭಾವಿಸಮೀರ ಶ್ರೀ ವಾದಿರಾಜಸ್ವಾಮಿಗಳು ಭಾರತದ ಉದ್ದಗಲಕ್ಕೂ ಸಂಚರಿಸಿ, ಮಹಾತಪಸ್ವಿಗಳೆನಿಸಿ, ಆಗಿನ ವಿಜಯನಗರದ ಅರಸರಿಂದ 'ಪ್ರಸಂಗಾಭರಣತೀರ್ಥ'ರೆಂಬ ಬಿರುದನ್ನು ಪಡೆದವರು. ಅಲ್ಲದೆ ಉಡುಪಿಯಲ್ಲಿ ಹಲವಾರು ಸುಧಾರಣೆಗಳನ್ನು ಮಾಡಿದರು. ಈ ಪರಂಪರೆಯ ೩೨ನೇ ಗುರುಗಳು ಶ್ರೀಮದ್ವಿಶ್ವಾಧೀಶತೀರ್ಥರು. ಇವರು ತಮ್ಮ ಪೂರ್ವಾಶ್ರಮದ ಅಣ್ಣನಾದ ಶ್ರೀ ವೆಂಕಟರಮಣಾಚಾರ್ಯರ ಪುತ್ರ ಲಕ್ಷ್ಮೀನಾರಯಣನಿಗೆ ೧೮೯೨ ನೇ ಇಸವಿಯಲ್ಲಿ (ಹೇಮಲಂಬಿ ಸಂ|ವೈಶಾಖ. ಶು.೫ನೆಯ ದಿನ) ಸಂನ್ಯಾಸಾಶ್ರಮ ದೀಕ್ಷೆಯನ್ನು ಅನುಗ್ರಹಿಸಿ ಶ್ರೀ ವಿಶ್ವೇಂದ್ರತೀರ್ಥರೆಂಬ ಅಭಿದಾನದಿಂದ ತಮ್ಮ ಸಂಸ್ಥಾನದ ಉತ್ತರಾಧಿಕಾರಿ ಶಿಷ್ಯನನ್ನಾಗಿ ಮಾಡಿಕೊಂಡರು.

ವಿಶ್ವೇಂದ್ರತೀರ್ಥರು ನಿಷ್ಠಾವಂತರೂ ವಿದ್ವಾಂಸರೂ ಆಗಿದ್ದು ಸ್ವಾಶ್ರಮೋಚಿತ ಕರ್ಮಾನುಷ್ಠಾನದಲ್ಲಿ ನಿಯುಕ್ತರಾಗಿ, ಆದರ್ಶ ಯೋಗಿಗಳಾಗಿದ್ದರು. ೧೯೦೦ ರಿಂದ ೧೯೦೨ ರವರೆಗೆ ಇವರ ಮೊದಲ ಪರ್ಯಾಯ. ಆಗ ಗುರುಗಳಾದ ವಿಶ್ವಾಧೀಶತೀರ್ಥರು ದೈಹಿಕವಾಗಿ ದುರ್ಬಲರಾಗಿದ್ದುದರಿಂದ ಇವರೇ ಪರ್ಯಾಯ ದೀಕ್ಷೆಯನ್ನು ವಹಿಸಬೇಕಾಯಿತು. ವಿಶ್ವೇಂದ್ರತೀರ್ಥರು ಅದಮಾರು ಮಠದ ಶ್ರೀ ವಿಬುಧಪ್ರಿಯತೀರ್ಥ ಶ್ರೀಪಾದರಲ್ಲಿ ಹಲವು ಕಾಲ ಶಾಸ್ತ್ರಾಭ್ಯಾಸವನ್ನು ಮಾಡಿದರು. ೧೯೧೬ರಲ್ಲಿ ಇವರ ಎರಡನೇ ಪರ್ಯಾಯ ಕಾಲ. ಅದನ್ನೂ ವಿಜೃಂಭಣೆಯಿಂದ ನೆರವೇರಿಸಿದರು. ೧೯೨೬ ರಲ್ಲಿ ಶ್ರೀಗಳವರು ದ್ವೈತ ಸಿದ್ಧಾಂತದ ಪ್ರಚಾರಕ್ಕಾಗಿ ಉತ್ತರದ ಪವಿತ್ರ ತೀರ್ಥಗಳನ್ನು ಸಂದರ್ಶಿಸಿ ವಿದ್ವಾಂಸರಿಂದ ಮನ್ನಣೆಯನ್ನು ಪಡೆದರು. ೧೯೨೮ ರಲ್ಲಿ ಕೊಚ್ಚಿಯ ರಾಮವರ್ಮ ಮಹಾರಾಜರಿಂದ ಆಮಂತ್ರಿತರಾಗಿ ಅಲ್ಲಿ ಅರಮನೆಯನ್ನು ಸಂದರ್ಶಿಸಿ, ರಾಜ ಪರಿವಾರದವರನ್ನು ಆಶೀರ್ವದಿಸಿದರು. ಉತ್ತರ ಕನ್ನಡ ಜಿಲ್ಲೆಯ ಶ್ರೀ ಸೋದಾ ಕ್ಷೇತ್ರದಲ್ಲಿ ಶ್ರೀ ವಾದಿರಾಜರ ವೃಂದಾವನವಿದೆ. ಇದೊಂದು ಸಿದ್ಧಿ ಕ್ಷೇತ್ರ. ಸಾವಿರಾರು ಮಂದಿ ಭಕ್ತರು ಇಲ್ಲಿ ಬಂದು ಹೋಗುತ್ತಿರುವ ಮಹಾ ಪುಣ್ಯ ಸ್ಥಳ. ವಿಶ್ವೇಂದ್ರತೀರ್ಥ ಶ್ರೀಗಳವರು ಇಲ್ಲಿರುವ ಕಟ್ಟಡಗಳನ್ನು ಶಿಲಾಮಯವನ್ನಾಗಿ ಮಾಡಿಸಿ ಜೀರ್ಣೋದ್ಧಾರ ಮಾಡಿ ಭಕ್ತ ಜನರಿಗೆ ಅನುಕೂಲಕರವಾದ ಸೌಕರ್ಯವನ್ನು ಒದಗಿಸಿಕೊಟ್ಟರು. ೧೯೨೯ ರಿಂದ ೧೯೩೪ ರವರೆಗೆ ಇವರ ಮೂರನೆಯ ಪರ್ಯಾಯವೂ ಅತಿ ವಿಜೃಂಭಣೆಯಿಂದ ನಡೆಯಿತು.

ಇವರಿಗೆ ವೈದ್ಯ ವಿದ್ಯೆಯಲ್ಲೂ ಪರಿಶ್ರಮವಿತ್ತು. ಅನೇಕ ಜನರ ಕಾಹಿಲೆಗಳನ್ನು ಧರ್ಮಾರ್ಥ ಔಷಧ ಕೊಟ್ಟು ಪರಿಹರಿಸಿರುವರು. ಪುತ್ತಿಗೆ ಮಠದ ಶತಾಯು ಶ್ರೀ ಸುಧೀಂದ್ರತೀರ್ಥರಿಗೂ ಔಷಧೋಪಚಾರಗಳನ್ನು ನಡೆಸಿ ಅವರನ್ನು ದೃಢಕಾಯರನ್ನಾಗಿ ಮಾಡಿದ್ದರು.

ಪ್ರತಿ ವರ್ಷ ಮಾಘಮಾಸದಲ್ಲಿ ಹುಣ್ಣಿಮೆ ವರೆಗೆ ಉಡುಪಿಯ ಶ್ರೀ ಅನಂತೇಶ್ವರ ದೇವಾಲಯದಲ್ಲಿ 'ಶ್ರೀಮಧ್ವಸಿದ್ಧಾಂತ ಬೋಧಿನೀ' ಎಂಬ ಯುಕ್ತಿ ಮಲ್ಲಿಕಾ ಉಪನ್ಯಾಸ ಸಭೆಯನ್ನು ಏರ್ಪಡಿಸಿ ಸ್ಥಳೀಯ ವಿದ್ವಾಂಸರನ್ನೂ, ಹೊರಗಿನ ವಿದ್ವಾಂಸರನ್ನು ಗೌರವಿಸಿ ಅನುಗ್ರಹಿಸುವ ಸಂಪ್ರದಾಯವನ್ನೂ ಹಾಕಿದರು. ಮೈಸೂರು ಅರಸುಮನೆಯವರಿಂದ ಶ್ರೀಗಳವರಿಗೆ ತುಂಬು ಹೃದಯದ ಸ್ವಾಗತ ದೊರೆತು, ಅಲ್ಲಿಗೆ ಹೋಗಿ ರಾಜಮನೆತನದ ಕುಟುಂಬವನ್ನು ಅನುಗ್ರಹಿಸಿರುವರು.

ನಂಜನಗೂಡಿನಲ್ಲಿ 'ಶ್ರೀಕೃಷ್ಣ ಮಾಧ್ವ ಸಭಾ' ಎಂಬ ಸಂಸ್ಥೆಯನ್ನು ಸ್ಥಾಪಿಸಿದ ಕೀರ್ತಿಯೂ ಶ್ರೀಗಳವರಿಗೆ ಸಲ್ಲುತ್ತದೆ.

ಶ್ರೀ ವಾದಿರಾಜರ ಜನ್ಮಸ್ಥಳವಾದ ಹೂವಿನಕೆರೆಯಲ್ಲಿ ರಾಜರು ಅವತರಿಸಿದ ಗೌರೀಗದ್ದೆಯಲ್ಲಿ ಅವರ ಅವತಾರ ಸ್ಮರಣಾರ್ಥವಾಗಿದ್ದ ಹಳೆಯ ಚಿಕ್ಕ ಕಟ್ಟಡವನ್ನು ಜೀರ್ಣೋದ್ಧಾರ ಮಾಡಿಸಿ, ರಾಜರ ಶಿಲಾಮಯ ಮೂರ್ತಿಯನ್ನೂ ಅಲ್ಲಿ ಪ್ರತಿಷ್ಠೆ ಮಾಡಿದರು.

ಶ್ರೀ ವಾದಿರಾಜ ಪೂಜ್ಯ ಚರಣರ ವಿಶೇಷಾನುಗ್ರಹದಿಂದಲೆಂಬಂತೆ ಈ ಮಠಾಧಿಪತಿಗಳಲ್ಲಿ ಹೆಚ್ಚಿನವರು ಶಾಸ್ತ್ರ ಮತ್ತು ಕಾವ್ಯಗಳಲ್ಲಿ ಪ್ರಗಲ್ಭ ಪಾಂಡಿತ್ಯವುಳ್ಳವರು. ಶ್ರೀ ವಾದಿರಾಜರಂತೆ ತಾವೂ ಕನ್ನಡ ಮತ್ತು ತುಳು ಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದರು. ಶ್ರೀ ವಿಶ್ವೇಂದ್ರತೀರ್ಥರೂ ಕನ್ನಡ ಮತು ತುಳು ಭಾಷೆಗಳಲ್ಲಿ ಹಲವಾರು ಕೀರ್ತನೆಗಳನ್ನು ಹಾಡುಗಳನ್ನು ರಚಿಸಿದರು. ಈಗಿನ ಶ್ರೀ ವಿಶ್ವೋತ್ತಮತೀರ್ಥರು ಅವುಗಳಲ್ಲಿ ಕೆಲವನ್ನು ಆಯ್ದು 'ಕೀರ್ತನ ಮಂಜರಿ' ಎಂಬ ಹೆಸರಿನಲ್ಲಿ ೧೯೫೫ ರಲ್ಲಿ ಪ್ರಕಟಿಸಿದ್ದಾರೆ. ವಾದಿರಾಜರ ಹಾಡುಗಳಲ್ಲಿರುವ ಶೈಲಿಯನ್ನು ಈ ಹಾಡುಗಳಲ್ಲೂ ಕಾಣಬಹುದು. ರಾಜೇಶ ಹಯಮುಖ,

ರಾಜನಾಥ ಹಯಮುಖ. ರಾಜೇಶ ಹಯಾಸ್ಯ, ಮುಂತಾದವು ಇವರ ಮುದ್ರಿಕೆಗಳು. ಈ ಸಂಗ್ರಹದಲ್ಲಿ ಕನ್ನಡದ ಹಾಡುಗಳನ್ನು ಮಾತ್ರ ಸೇರ್ಪಡೆಗೊಳಿಸಲಾಗಿದೆ. ಇದಕ್ಕಾಗಿ ಮುದ್ರಿತ ಮತ್ತು ಹಸ್ತ ಪ್ರತಿಗಳನ್ನು ಒದಗಿಸಿ ವಿಶ್ವೇಂದ್ರತೀರ್ಥ ಸ್ವಾಮಿಗಳ ಜೀವನ ಚರಿತ್ರೆಯ ಬಗೆಗೂ ವಿವರವಾಗಿ ಮಾಹಿತಿ ನೀಡಿ ಅನುಗ್ರಹಿಸಿದ, ಶ್ರೀ ಸೋದೆ ವಾದಿರಾಜಮಠದ ಶ್ರೀ ವಿಶ್ವೋತ್ತಮತೀರ್ಥರಿಗೆ ನಮ್ಮ ಕೃತಜ್ಞತೆಗಳು.

## ಕೃತಿಗಳು

ಶ್ರೀ ವಿಶ್ವೇಂದ್ರರು ಸೋದೆ ಮಠದ ಸುಪ್ರಸಿದ್ಧ ವಾದಿರಾಜರ ಪರಂಪರೆಯಲ್ಲಿ ಮಿಂದು ಬಂದವರು. ತಮ್ಮ ಪರ್ಯಾಯ ಕಾಲಗಳಲ್ಲಿ ಶ್ರೀಕೃಷ್ಣನನ್ನು ಪೂಜಿಸಿದರು. ಆದ್ದರಿಂದ ಇವೆರಡು ಅಂಶಗಳು ಅವರ ರಚನೆಗಳಲ್ಲಿ ಪ್ರಭಾವ ಬೀರಿದೆ. ಶ್ರೀ ವಾದಿರಾಜರಂತೂ ಇವರ ಹಲವಾರು ಹಾಡುಗಳಲ್ಲಿ ನೇರವಾಗಿಯೂ, ಪರ್ಯಾಯವಾಗಿಯೂ ಕಾಣಿಸಿಕೊಂಡಿದ್ದಾರೆ. ಶ್ರೀ ವಾದಿರಾಜರು ಹಯವದನನ ಉಪಾಸಕರು ತಾನೇ. ಆ ಹಯದ ನಿಮಿತ್ತ ಮಾಡಿಕೊಂಡು ವಿಶ್ವೇಂದ್ರರು ಭಗವಂತನ ವಿವಿಧ ಲೀಲೆಗಳನ್ನು ಈ ರೀತಿ ಹೊರಪಡಿಸಿದ್ದಾರೆ. (ಕೀರ್ತನೆ ೪):

ಕುದುರೆಯ ಕಂಡೀರ್ಯಾ...
ಇಂದಿರಾದೇವಿಯನಪ್ಪಿದ ಕುದುರೆ
ಮಂದರಗಿರಿಯನ್ನೆತ್ತಿದ ಕುದುರೆ
ಸುರರಿಗಮೃತವನಿತ್ತ ಕುದುರೆ
ನರನ ರಥವನು ಏರಿದ ಕುದುರೆ (!)

ವಿಶ್ವೇಂದ್ರತೀರ್ಥರ ಹಾಡುಗಳ ವೈಶಿಷ್ಟ್ಯಗಳೆಂದರೆ ಪ್ರಾಸಾದಿಕ ಗುಣ ಹಾಗೂ ಚತುರೋಕ್ತಿ.

ಶ್ರೀರಾಮಚಂದ್ರನಿಗೂ ೧ ಎಂಬ ಸಂಖ್ಯೆಗೂ ಇರುವ ಅವಿನಾಭಾವಿಯಾದ ಸಂಬಂಧವನ್ನು ಒಂದು ಕೀರ್ತನೆಯಲ್ಲಿ ತೋರಿಸಿದ್ದಾರೆ. (ಕೀ. ೧೧). ಅವನು

ಬಿಟ್ಟ ಬಾಣಕ್ಕೆ ಒಂದೇ ಗುರಿ. ಅವನಿಗೆ ಒಬ್ಬಳೇ ಪತ್ನಿ. ಆಡಿದ ಯಾವುದೇ ಒಂದು ಮಾತನ್ನು ತಪ್ಪದೆ ನಡೆಸುವ ಮನೋಧರ್ಮ ಅವನದು.

ಇನ್ನೊಂದು ಹಾಡಿನಲ್ಲಿ ರಾವಣ ವಿಭೀಷಣ ಇಬ್ಬರೂ ಒಂದೇ ಪರಿಸರದಲ್ಲಿ ಇದ್ದರೂ ಅವರು ಅನುಭವಿಸುವ ಸುಖ–ದುಃಖ ಬೇರೆಯಾಗೇ ಇರುತ್ತದೆನ್ನುತ್ತಾರೆ. ಲಂಕೆಯಲಿದ್ದ ದಶಕಂಠನಿಗೆ ಭಯ, ಅದೇ ಲಂಕೆಯಲ್ಲಿದ್ದ ವಿಭೀಷಣನಿಗೆ? ಆತ ನಿಶ್ಚಿಂತೆಯಿಂದ ಇದ್ದಾನೆ. ಕಾರಣವನ್ನು ಯಾರೂ ಊಹಿಸಬಹುದು.

ಬೇರೊಂದು ಹಾಡಿನಲ್ಲಿ ಶ್ರೀಕೃಷ್ಣ ಸುದಾಮರ ಭೇಟ್ಟಿಯ ವಿವರ ಸೊಗಸಾಗಿ ಮೂಡಿಬಂದಿದೆ. ಸುದಾಮನು ಹಿಡಿ ಅವಲಕ್ಕಿ ಹಿಡಿದುಕೊಂಡು ಬರುವನಷ್ಟೆ. ಆಗ  ಕೃಷ್ಣನು ಕೇಳುವ ಕುಶಲಪ್ರಶ್ನೆ ಈ ರೀತಿಯದು:

ಬಾರೊ ಸುದಾಮ ಬಾರೆನ್ನ ಮಿತ್ರ
ಎನ್ನತ್ತಿಗೆ ಕ್ಷೇಮದಿಂದಿರುವಳೆ ಪೇಳೊ
ನಿನ್ನತ್ತಿಗೆ ಕ್ಷೇಮದಿಂದಿಹಳು..

ಅವನು ತಂದ ಅವಲಕ್ಕಿಯನ್ನು ಮುಕ್ಕಿ ತೃಪ್ತಿ ಪಟ್ಟಾಗ, ಅಲ್ಲಿಯೇ ಇದ್ದ ರುಕ್ಮಿಣಿ ಥಟ್ಟನೆ ಕೈಹಿಡಿದು "ಒಂದು ಮುಷ್ಟಿ ಅವಲಕ್ಕಿಗೇನೆ ಮೋಕ್ಷ ಮಾರ್ಗ ತೋರಿಸ್ತೀಯ. ಅದಕ್ಕೂ ಹೆಚ್ಚಿನದೇನನ್ನಾದರೂ ಕೊಟ್ಟರೆ, ಇನ್ನೇನನ್ನು ಕೊಟ್ಟೀಯ"(ಕೀ. ೧೨) ಎನ್ನುತ್ತಾಳೆ.

ಚತುರೋಕ್ತಿ ಇಲ್ಲವೆ ವ್ಯಾಜನಿಂದಾಸ್ತುತಿಗೆಂದು ಒಂದೆರಡು ಉದಾಹರಣೆಗಳನ್ನು ಕೊಡಬಹುದು. ಕೀರ್ತನೆಯೊಂದರಲ್ಲಿ ಅವರು ಪರಮಾತ್ಮನ ಭಕ್ತರು ಮಾಡಿದ "ತಪ್ಪು"ಗಳ ಯಾದಿಯನ್ನೆ ಕೊಡುತ್ತಾರೆ. "ಭೃಗುವಂತೆ ನಿನ್ನಯ ಎದೆಗೆ ತುಳಿಯಲಿಲ್ಲ" ಎಂಬುದು ಪರಿಚಿತವಾದದ್ದೇ. "ನಿನ್ನಾ ಕುವರರು ಸುಭದ್ರೆಯ ಮದುವೆಯ ತಡೆದಂತೆ ತಡೆಯಲಿಲ್ಲವೊ" ಹಾಗೂ "ಮಲಗಿದ್ದ ಸಮಯವ ಕಂಡು ಬಲಿಯು ಬಂದು ಮೌಲಿಯನು ಕದ್ದಂತೆ ಕದ್ದು ಕೊಂಡಿಲ್ಲ" ಎಂಬುದು ಅಷ್ಟೊಂದು ಪರಿಚಿತವಲ್ಲ.

ದಶಾವತಾರಗಳು ಎಲ್ಲ ಹರಿದಾಸರ ಕೃತಿಗಳಲ್ಲಿ ತೋರಿ ಬಂದೇ ಇವೆ. ಶ್ರೀ ವಿಶ್ವೇಂದ್ರರೂ ಹಾಗೆ ಮಾಡಿದ್ದಾರೆ. ಒಂದರಲ್ಲಿ "ಅಯ್ಯಾ, ಮತ್ಸ್ಯ, ವರಾಹ ಮುಂತಾದ ವಿವಿಧ ವೇಷವನ್ನೇಕೆ ಹಾಕ್ತೀಯಾ ? ಆ ವಿಷಯದ ನಿನ್ನ ಸಾಮರ್ಥ್ಯ ನಿನ್ನ ಭಕ್ತರಿಗೆ ತಿಳಿದದ್ದೇ ಇದೆ" ಎಂದಿದ್ದಾರೆ. ದಶಾವತಾರದಂತೆಯೇ ಹನುಮ-ಭೀಮ-ಮಧ್ವ ಈ ಅವತಾರತ್ರಯವೂ ಅವರ ರಚನೆಗಳಲ್ಲಿ ಬರುತ್ತದೆ. ಅದರಂತೆ ತಾರತಮ್ಯತ್ವೇನ ಶೇಷ, ರುದ್ರ, ಗರುಡ, ಸರಸ್ವತಿ, ಪಾರ್ವತಿಯರನ್ನು ಒಂದೊಂದು ಹಾಡುಗಳಲ್ಲಿ ಸ್ತುತಿಸಿದ್ದಾರೆ. ಬ್ರಹ್ಮದೇವರು ಹರಿದಾಸರ ಹಾಡುಗಳಲ್ಲಿ ಕಾಣಿಸಿಕೊಳ್ಳುವುದೇ ಇಲ್ಲವೆನ್ನುವಷ್ಟು ಅಪರೂಪ. ಇವರ ಕೃತಿ ರಚನೆಯಲ್ಲಿ ಅವನಿಗೂ ಇಂಬು ದೊರೆತರೆ (ಕೀ.೨೧), ಅದರಲ್ಲಿಯೂ ಅವನು "ಸುರರು ಅಸುರರೆಂಬ ಭೇದವಿರದೆ ಸರ್ವರಿಗಭೀಷ್ಟವವೀವನೇ" ಎಂಬುದು ತುಂಬಾ ಅನ್ವರ್ಥಕವಾದುದು.

## ೨. ಶ್ರೀ ವರಾಹತಿಮ್ಮಪ್ಪ (ನೆಕ್ಕಾರುಕೃಷ್ಣದಾಸ)

"ವರಾಹತಿಮ್ಮಪ್ಪ" ಮುದ್ರಿಕೆಯವರ ಹೆಸರು ನೆಕ್ಕಾರು ಕೃಷ್ಣದಾಸ ಎಂಬುದಾಗಿ ಅವರ "ಲಕ್ಷ್ಮೀಕಲ್ಯಾಣ' ಕೃತಿಯಲ್ಲಿ ಉಕ್ತವಾಗಿದೆ. ಅವರ ಬಗೆಗಿನ ಚರಿತ್ರಾಂಶಗಳನ್ನು ಸಿರಿಗನ್ನಡಿ ಗ್ರಂಥಕರ್ತರ ಚರಿತ್ರಕೋಶದಲ್ಲಿ ಕೆಲವೇ ಆದರೂ ಕೊಡಲಾಗಿದೆ. ಕವಿಚರಿತೆಯ ೩ ನೆಯ ಸಂಪುಟದಲ್ಲಿಯೂ ಕೆಲ ವಿವರಗಳಿವೆ. ಕವಿಚರಿತಕಾರರ ಪ್ರಕಾರ ಇವರ ಒಂದು ಕೀರ್ತನೆಯಲ್ಲಿ "ನವಾಬ" ಮತ್ತು "ಪ್ರಮಾಥಿ" ಸಂವತ್ಸರದ ಪ್ರಸ್ತಾಪ ಇರುವುದರಿಂದ ೧೭೫೯/೧೭೬೩ ಎಂಬುದಾಗಿ ಕಾಲವನ್ನು ಸೂಚಿಸಿದ್ದಾರೆ. ಆ ಕೀರ್ತನೆ ನಮಗೆ ದೊರೆತಿಲ್ಲ. ಗ್ರಂಥಕರ್ತರ ಚರಿತ್ರಕೋಶದಲ್ಲಿ ಇವರು ದ.ಕ.ಜಿಲ್ಲೆಯವರೆಂದೂ ಮೂಲ ಸ್ಥಳ ಉಡುಪಿಯ ನೆರೆಯ ಒಂದು ಊರು ಎಂದೂ ಉಲ್ಲೇಖಗೊಂಡಿದೆ. ಅವರ ಕೃತಿಗಳೆಂದು "ಲಕ್ಷ್ಮೀಕಲ್ಯಾಣ" ವನ್ನು, ಉಡುಪಿಯ "ಶ್ರೀಕೃಷ್ಣ ಚರಿತ್ರೆ" ಎಂಬ ನಾಲ್ಕು ಸಂಧಿಗಳ ಕಾವ್ಯವನ್ನು ಪ್ರಸ್ತಾವಿಸಿದ್ದಿದೆ. ಅವರ ೭೦ ಹಾಡುಗಳನ್ನು ಮೊಗ್ಲಿಂಗ್ ಸಂಪಾದಿತ "ದಾಸರ ಪದಗಳು" ಇವರ (ಎರಡನೆಯ ಆವೃತ್ತಿಯಿಂದ ೧೮೫೨) ನೇರವಾಗಿ ತೆಗೆದುಕೊಂಡದ್ದಿದೆ.

## ದೇವ-ಗುರು ಸ್ತುತಿ

ಮೊದಲಲ್ಲಿ ಉದಯರಾಗ. ಶ್ರೀಹರಿಯನ್ನು ಏಳಿಸುವುದಕ್ಕೆ ವಿವಿಧ ದೇವತೆಗಳು, ಭಕ್ತಜನರು ಬರುವುದನ್ನು ಬೇರೆಯವರು ರಚಿಸಿದ ಉದಯರಾಗಗಳಲ್ಲಿಯೂ ಕಾಣಬಹುದು. ಆದರೆ ಈ ಹರಿದಾಸರು ತಿರುಪತಿಯ ಶ್ರೀನಿವಾಸನನ್ನು ಏಳಿಸುತ್ತಾರೆ - ವಿಶೇಷ ಕಾರಣವನ್ನು ಕೊಟ್ಟು.

ಕರಣಿಕರು ಬರಹದೊಳು ಬರೆದ ಲೆಕ್ಕವನೆಲ್ಲ
ತರತರದ ವಿವರವನು ಒರೆದು ಹೇಳುವರೀಗ
ಸ್ಥಿರವಾದ ಗಣಿತದೊಳು ನೆಲೆಯಾಗಿ ಒಪ್ಪಿಸುವ
....... ಸಿರಿಯ ನೋಡದೆ ನೀನು ಮಲಗಿಕೊಂಡಿಹರೇನೊ
ಸಿರಿಯನೆಬ್ಬಿಸಿಕೊಂಡು ಭರದಿಂದ ಏಳಬೇಕಯ್ಯ

ಕೃಷ್ಣದಾಸರ ಅನೇಕ ಹಾಡುಗಳಲ್ಲಿ ತಿರುಪತಿಯ ತಿಮ್ಮಪ್ಪ ಒಂದಿಲ್ಲೊಂದು ನಿಮಿತ್ತದಿಂದ ಬಂದೇ ಇದ್ದಾನೆ. ಆದರೂ ಅವನನ್ನೇ ಪ್ರತ್ಯೇಕವಾಗಿ ಹೊಗಳಿದ ಕೆಲವು ಹಾಡುಗಳಿವೆ. ಒಂದರಲ್ಲಿ-

ಯಾರು ಬಲ್ಲರು ವೆಂಕಟೇಶ ನಿನ್ನೊಳಿಹ
ಚಾರು ಗುಣಶೀಲವೆಂಬ
ವಾರಿಧಿಯ ಚಿಪ್ಪಿನೊಳು ಮೊಗೆದು ಬತ್ತಿಸುವಂಥ
ವೀರನಾವನು ಜಗದೊಳು. (ಕೀ )

'ಸ್ವಾಮಿ ವೆಂಕಟರಮಣ ಭೂಮಿಪಾಲಕದೇವ' ಎಂಬ ಕೀರ್ತನೆಯಲ್ಲಿ ಮಹಾಲಕ್ಷ್ಮಿಯು ಸ್ವಾಮಿಗೆ ಮಜ್ಜನಗೈದದ್ದರ ಸೊಗಸಾದ ವರ್ಣನೆ ಇದೆ. ಅದು ಪೌರಾಣಿಕ ಘಟನೆಯೂ ಹೌದು. ಶ್ರೀನಿವಾಸನು ಪದ್ಮಾವತಿಯನ್ನು ವಿವಾಹವಾಗುವ ಮುನ್ನ ಹಿರಿಯರಸಿ ಕೊಲ್ಹಾಪುರದಿಂದ ಸ್ವಯಂ ಬರುತ್ತಾಳೆ. ವಿವಾಹಾವಸರದಲ್ಲಿ ಭಗವಂತನಿಗೆ ನೀರೆರೆಯುವವಳೆಂಬ ಪ್ರಸಂಗ ಶ್ರೀನಿವಾಸ ಕಲ್ಯಾಣದಲ್ಲಿ ಬಂದದ್ದೇ ಇದೆ. ಹಾಗೆ ಬಂದ ಮಹಾಲಕ್ಷ್ಮಿಯು :

ಮೊದಲು ಪಾದವ ತೊಳೆದು ಜಲವನ್ನು ಸಿರಿ ತನ್ನ
ತಲೆಗೆ ಪ್ರೋಕ್ಷಿಸಿಕೊಳಲು ಹರಿಯು ಮೆಚ್ಚಿದನು
ಅಂಗೈಯ ಅರಿಸಿನವ ಮುಂಗೈಗೆ ಒರಸುತ್ತ
ರಂಗನ ಸಿರಿಮೊಗವ ಕಂಗಳಿಂದೀಕ್ಷಿಸುತ
ಅಭಯ ಹಸ್ತವನಿತ್ತ ತ್ರಿಭುವನದೊಡೆಯನು
ಅಬುಜ ಲೋಚನೆ ಮುಖಾಂಬುಜಕೆ ತಿಮುರಿದಳು
ಅತಿ ಹರುಷವ ತಾಳಿ ಸಲೆ ಕೈಯ ಅರಿಶಿಣವ
ಪತಿಯಾದಿಕೇಶವನ ನುತಿಸಿ ಊರಿದಳು.

ಮುಂದುವರಿದ ಈ ಮಜ್ಜನ ಕಾರ್ಯವು ಸರ್ವೋತ್ತಮನ ಸರ್ವಾಂಗವನ್ನು ಆವರಿಸುತ್ತದೆ.

ಇನ್ನೊಂದು ಕೀರ್ತನೆ ವೆಂಕಟೇಶ್ವರನ ಅಲಂಕಾರಕ್ಕೆ ಸಂಬಂಧಿಸಿದೆ :

ದೆಸೆಗೆ ಪ್ರಜ್ವಲಿಸುವ ಎಸೆವ ಕಿರೀಟ
ನೊಸಲೊಳು ತಿದ್ದಿದ ನಾಮದ ಮಾಟ
ಅಸಮ ನೇತ್ರಗಳಿಂದ ನೋಡುವ ನೋಟ.

ಆಮೇಲೆ ತಿಮ್ಮಪ್ಪನಿಗೆ ಆರೋಗಣೆಯಾಗಬೇಕು. ಈ ಸಂದರ್ಭದಲ್ಲಿ ಕೃಷ್ಣದಾಸರು ನಾನಾವಿಧದ ಭಕ್ಷ್ಯಭೋಜ್ಯಗಳ ದೊಡ್ಡ ಸಾಲನ್ನೇ ಇರಿಸಿದ್ದಾರೆ. ಕೆಲವುಗಳ ಹೆಸರೂ ನಮಗೆ ಅಪರಿಚಿತ . ಇವೆಲ್ಲ ತಿರುಪತಿಯಲ್ಲಿ ಸಾಮಾನ್ಯವಾಗಿ ಸಿದ್ಧ ಪಡಿಸುವಂತಹವಲ್ಲ. ಉಡುಪಿಯ ಪಾಕಪ್ರವೀಣರಿಂದ ತಯಾರಿಸಿ ತಿರುಪತಿಗೆ ರವಾನಿಸಿರಬೇಕು !

ಸಣ್ಣಕ್ಕಿಯೋಗರವು ಬೆಣ್ಣೆ ಕಾಸಿದ ತುಪ್ಪ
ಗಿಣ್ಣಲ ನೊರೆಹಾಲು ಸಣ್ಣ ಮೆಣಸು ಸಾರು
ಅನ್ನ ಚಿತ್ರಾನ್ನವು ಮೊಸರನ್ನ ಹಸರ್ಹುಗ್ಗಿ
ಉಣ್ಣಬಾರೆಲೊ ನೀನು ಇನ್ನು ತಡಬೇಡ.

ಇದೇ ಧಾಟಿಯಲ್ಲಿ ದಾಸರು ಉಡುಪಿಯ ಶ್ರೀಕೃಷ್ಣನ ಪೂಜೆ, ಅಲಂಕಾರ, ಆರೋಗಣೆಗಳನ್ನು ಬೇರೊಂದು ಹಾಡಿನಲ್ಲಿ ವರ್ಣಿಸಿದ್ದಾರೆ.

## ಹರಿಭಕ್ತಿ

ಹರಿಭಕ್ತಿಯನ್ನು ತೋರ್ಪಡಿಸುವ ಕೆಲವು ಹಾಡುಗಳಿದ್ದು ಅದರಲ್ಲಿ ಭಗವಂತನು ಈ ಹಿಂದೆ ಭಕ್ತರನ್ನು ಎಂಥೆಂಥ ಕಠಿಣ ಪ್ರಸಂಗಗಳಲ್ಲಿ ರಕ್ಷಿಸುತ್ತಾನೆ ಎಂಬುದರ ನಿರೂಪಣೆ ಕಂಡು ಬರುತ್ತದೆ. 'ಕಲ್ಲೊಳಗೆ ಪುಟ್ಟಿ ತಾ ಕೂಗುವ ಕಪ್ಪೆಗೆ ಅಲ್ಲಿ ಆಹಾರವನು ತಂದೀಯುವರ್‍ಯಾರೊ' ಎಂಬ ಕನಕದಾಸರ ಒಸಗೆ ಪರಿಚಿತ, ಕೃಷ್ಣದಾಸರು ಈ ಬಗೆಯ ಭಗವತ್ಕೃಪೆಗೆ ಬೇರೊಂದು ಉದಾಹರಣೆ ಕೊಟ್ಟಿದ್ದಾರೆ :

ಗರ್ಭದೊಳಿರುವಾಗ ಹಬ್ಬಿರುವ ಮಾಂಸಲತೆ
ಉಬ್ಬಸವ ಬಿಡುತಿರಲು ಅಬ್ಬೆ ಸಲಹಿದಳ
ಉಬ್ಬರದ ನೋವಿನೊಳು ಒಬ್ಬನೇ ಬರುವಾಗ
ಹೆಬ್ಬಾಗಿಲನು ಮುಂದೆ ತೋರಿದರಾರೊ ನಿನಗೆ

ಹಡೆದ ತಾಯಿ ಮಗು ಹುಟ್ಟಿಯಾದ ಮೇಲೆ ಸಲಹುತ್ತಾಳೇನೊ ಹೌದು. ಅದಕ್ಕೂ ಮುಂಚೆ ಅಲ್ಲ, ಆಗ ಭಗವಂತನೇ ಸಲಹುವವ.

ಇತ್ತ ಹರಿಭಕ್ತಿಯನ್ನು ಯಾವ ರೀತಿ ವ್ಯಕ್ತಪಡಿಸಬೇಕು ಎನ್ನುವುದರ ಕೂಲಂಕಷ ವಿವರಗಳಿವೆ.

ವ್ರತವ ಮಾಡಲು ಬೇಕು ಅಂಬರೀಷನ ಹಾಗೆ
ಪಥವ ನಡೆಯಲು ಬೇಕು ವಿಹಗನಂತೆ
ಶತಮಖವ ರಚಿಸಿದರೆ ಪುರುಹೂತನಂತೆ
ಯತಿಯಾಗಬೇಕು ಗುರುಮಧ್ವಪತಿಯಂತೆ
ಗೀತಸೇವನೆ ಬೇಕು ನಾರದರ ತೆರನಂತೆ
ನೀತಿ – ಶಾಸ್ತ್ರವು ಬೇಕು ಶುಕಶೌನಕರಂತೆ.

ಸಂಧ್ಯಾವಂದನೆಯಲ್ಲಿ ಬರುವ ಕೇಶವಾದಿ ೨೪ ನಾಮಗಳೊಂದೊಂದರ ವೈಶಿಷ್ಟ್ಯವನ್ನು ಹೇಳುವ ಎರಡು ಕೀರ್ತನಗಳಿವೆ; ಮನನೀಯವಾಗಿವೆ. ಶ್ರೀಹರಿಯ ಲೀಲೆ, ನಿಗ್ರಹ, ಪಾಲನೆಗಳಿಗೆ ಸಂಬಂಧಿಸಿದಂತೆ ಒಂದೊಂದು ನಾಮವನ್ನು ಎತ್ತಿ ಕೊಳ್ಳಲಾಗಿದೆ.

ಬೆಣ್ಣೆಯ ಮೆದ್ದನು ಮಿಣ್ಣನೆ ಶ್ರೀಧರ
ಕಣ್ಣಿಯ ಕರುವನು ಹೃಷಿಕೇಶನು
ಉಣ್ಣಬಿಟ್ಟನು ತಾಯಮೊಲೆಗೆ ಪದ್ಮನಾಭ
ಸಣ್ಣವ ಕ್ಷಣದೊಳು ದಾಮೋದರನಾದ.

ಜನಾರ್ದನಾಯ ನಮಃ ಉಪೇಂದ್ರಾಯ ನಮಃ ಹರಯೇ ಶ್ರೀಕೃಷ್ಣಾಯ ನಮಃ ಎಂಬ ಅಂತ್ಯಭಾಗವನ್ನು ತಂದ ಬಗೆಯಿದು :

ಕಡಲ ನಡುವೆ ಜನಾರ್ದನನೆನಿಸಿ ತಾನು
ಹಡಗನು ಸೇರಿಯೆ ಬಂದನುಪೇಂದ್ರನು
ಉಡುಪಿಯ ಸ್ಥಾನದೊಳು ಹರಿಯೆಂಬ ನಾಮದಿ
ಕಡಗೋಲು ಕೈಯೊಳು ಹಿಡಿದಿಹ ಕೃಷ್ಣ

ಇಲ್ಲಿ ಶ್ರೀಕೃಷ್ಣನು ಉಡುಪಿಗೆ ಬಂದು ನೆಲಸಿದ್ದರ ಕಥೆಯೇ ಇದೆ. ಅದನ್ನು ತಂದ ಬಗೆ ಕೌತುಕಪ್ರದವಾದುದು.

## ದಶಾವತಾರ

ಶ್ರೀಹರಿಯ ದಶಾವತಾರವನ್ನು ಬಣ್ಣಿಸುವುದು ಹರಿದಾಸರನೇಕರಿಗೆ ಖುಶಿ ವಿಷಯ. ನವೀನ ಕಲ್ಪನೆಗಳನ್ನು ಅದರಲ್ಲಿ ತರುವುದಕ್ಕೆ ಅವಕಾಶವಿರುತ್ತದೆ. ಕೃಷ್ಣದಾಸರು ಹಾಗೆ ಮಾಡಿದ್ದಾರಲ್ಲದೆ ಕೊನೆಯಲ್ಲಿ ತಮ್ಮ ಇಷ್ಟದೈವತವಾದ ತಿಮ್ಮಪ್ಪನಿಗೇ ಹತ್ತೂ ಅವತಾರಗಳನ್ನು ಅನ್ವಯಿಸುತ್ತಾರೆಂದು ಕಾಣುತ್ತದೆ.

ಹತ್ತವತಾರದ ವಿಸ್ತರದಿಂದ
ಕರ್ತು ವರಾಹತಿಮ್ಮಪ್ಪನು ನಿಂದ

ಭೃತ್ಯವತ್ಸಲನಾಗಿ ಭೂಮಿಗೆ ಬಂದ
ಅರ್ಥಿಯೊಳ್ಭಕ್ತರ ಸಲಹುವೆನೆಂದ.

## ದೇವತಾ ಸ್ತುತಿ

ಇನ್ನೀಗ ವಿವಿಧ ದೇವತೆಗಳನ್ನು ಯಾವ ಬಗೆಯಾಗಿ ಸ್ತುತಿಸಿದ್ದಾರೆಂಬುದನ್ನು ನೋಡೋಣ. ಮೊದಲಿಗೆ ಬರಬೇಕಾದವರು ಶ್ರೀದೇವಿ ಮಹಾಲಕ್ಷ್ಮಿ, ಅನಂತರದ್ದು ತುಲಸೀದೇವಿಯ ಸ್ತುತಿ :

ಬಂದಳು ಭಕ್ತರ ಮಂದಿರದೆಡಗೆ ಗೋ–
ವಿಂದನ ಕಂಡಿರೆ ಎಂದು ಕೇಳಿದಳು
ವೃಂದಾವನದೊಳು ನಿಂದಳು ತುಳಸಿಯು
ಚಂದವು ನಿಮ್ಮಯ ಭವನದೊಳೆನುತ

ಹಾಗೆ ನಿಂದವಳನ್ನು ಗೋವಿನ ತುಪ್ಪದ ದೀವಿಗೆಯಿರಿಸಿ ರಂಗವಲ್ಲಿಯನಿಕ್ಕಿ ಬೆಳೆಯಿಸಿದರೆ ಆ ತುಳಸೀದೇವಿ ಮನಕ್ಕೆ ತಂಪನ್ನೆರೆಯುವಳೆಂದು ಹೇಳುತ್ತಾರೆ.

ಭೂದೇವಿಯ ಮೇಲೆ ಹರಿದಾಸರು ಕೀರ್ತನೆಗಳನ್ನು ರಚಿಸಿದ್ದು, ಕಡಿಮೆ; ತೀರಾ ಕಡಿಮೆ. ಕೃಷ್ಣದಾಸರು ನವೀನ ರೀತಿಯಲ್ಲಿ ಆತ್ಮೀಯ ಭಾವದ ವರ್ಣನೆಗಳಿಂದ ಕೂಡಿದ ಎರಡು ಹಾಡುಗಳನ್ನು ರಚಿಸಿದ್ದಾರೆ. ಅದರಲ್ಲಿ 'ಸ್ವಾಮಿ ಸರ್ವೋತ್ತಮಳೆ ಸಕಲ ಜನಕಾಧಾರೆ ಕಾಮಿತಾರ್ಥವನೀವ ಕರುಣಿ ಭೂದೇವಿ' ಎಂಬುದು ಒಂದು ಆಧುನಿಕ ಭಾವಗೀತೆಯಂತಿದೆ :

ಚಿನ್ನಭಂಡಾರಗಳು ನಿನ್ನೊಡಲೊಳಿಪ್ಪುವವು
ಉನ್ನತ ರತುನಗಳು ನಿನ್ನೊಳಡಗಿಹವು
ಅನ್ನಪಾನಗಳಿಗೆ ಬೀಜಮೂಲವೆ ನೀನು
......... ಅಂಬುಧಿಯೆ ವಸನಗಳು ಕುಂಭಕುಚಗಳೆ ಗಿರಿಯು
ಸಂಭ್ರಮದ ನದಿ ಕಾಲುವೆ ನಿನ್ನ ಬೆವರುಗಳು
ಎಂಭತ್ತುನಾಲ್ಕೂ ಲಕ್ಷ ಜೀವರಾಶಿಗಳೆಲ್ಲ
ತುಂಬಿಕೊಂಡಿರುತಿಹುದು ಅಂಗೋಪಾಂಗದಲಿ

ಕೃಷ್ಣದಾಸರು ಭೂದೇವಿಗೆ ಅನ್ವಯಿಸಿದ ಕೆಲವು ಪೌರಾಣಿಕ ಪ್ರಸಂಗಗಳನ್ನು ಕಾಣಿಸಿದ್ದಾರೆ.

ಹರಿಯ ಪಾದವಲುದಿಸಿ ಹರಿಗೆ ವಧುವೆನಿಸಿ
ಹರಿಗೆ ಸುತೆಯನು ಇತ್ತು ಹಿರಿಯಳಾದೆ.

ಹರಿಗೆ ಸುತೆಯನ್ನು ಇತ್ತು –ಈ ಸುತೆ ಜಾನಕಿಯೆಂಬುದನ್ನು ಬೇರೆ ಹೇಳಬೇಕಿಲ್ಲ. ಇನ್ನೊಂದು ಹಾಡಿನಲ್ಲಿ–

ಒಬ್ಬ ರಾಯನಿಗೊಲಿವೆ ಒಬ್ಬ ರಾಯನಿಗೊಲುವೆ
ಒಬ್ಬನಿಗೆ ಮೈಯ ನೀನು ಕೊಡುವೆ
ಒಬ್ಬರಾದರು ನಿನ್ನ ನಿಜದಿ ಬಾಳ್ದಪರಿಲ್ಲ.

ರಾಜರು ಭೂಪ್ರದೇಶಕ್ಕಾಗಿ ಪರಸ್ಪರ ಕಾದು ಗೆಲ್ಲುತ್ತಾರೆ ಇಲ್ಲವೆ ಸೋಲುತ್ತಾರೆ. ಆ ಭೂಮಿತಾಯಿಯ ಒಳಿತಿಗೆ ಯಾರೂ ಯತ್ನಿಸುವುದಿಲ್ಲ ಎಂಬ ಭಾವ ಇಲ್ಲಿದೆ.

ಇದೇ ಸಂದರ್ಭದಲ್ಲಿ, ಅವರು ಒಂದು ಲೌಕಿಕ – ಸಾಂಸಾರಿಕ ದೃಶ್ಯವನ್ನು ಕೊಟ್ಟಿದ್ದಾರೆ : ಮಗುವಿನ ಮಲಮೂತ್ರವನ್ನು ಹಡೆದ ತಾಯಿಯೇ ಆದರೂ, ಅದನ್ನು ಎಡಗೈಯಿಂದ ಒರೆಸಿ ತೆಗೆಯುತ್ತಾಳೆ. ನೀನು ಜಗಜ್ಜನನಿ–ಹಾಗೆ ಮಾಡುವುದಿಲ್ಲ ಅಲ್ಲದೆ–

ಜಗಳವಾಡಲು ಪಿತನು ಮಗನ ಮೋಹದ ಮಾತೆ
ತೆಗೆಯಬಾರದೆ ಮಲವ – ಎಂದು ಜರೆದಪಳು

'ಹನುಮಂತ ಬಲವಂತ ಬಹು ಭಾಗ್ಯವಂತ' ಎಂಬ ಅವತಾರತ್ರಯದ ಕೀರ್ತನೆಯಲ್ಲಿ ಹನುಮಂತನು ಸಮುದ್ರವನ್ನು ದಾಟಿ, ಸೀತೆಗೆ ಉಂಗುರವನ್ನಿತ್ತ ಪ್ರಸಂಗವು ಸುದೀರ್ಘವಾಗಿ ವರ್ಣಿತಗೊಂಡಿದೆ. ರಾವಣನನ್ನು ಬಲುಗೈಯ ದಶಮುಖನೆಂದು ಕರೆದುದು ಮೋಜೆನಿಸುತ್ತದೆ. ಇತ್ತ ಸೀತೆ ಸಿಕ್ಕಲಿಲ್ಲ. ಆಗ ಹನುಮಂತನು 'ಇನ್ನೇನು ಮಾಡುವುದು, ಇಡೀ ಲಂಕಾನಗರಿಯನ್ನೇ ಕಿತ್ತ್ಯೋದು

ಶ್ರೀರಾಮನಿಗೆ ತೋರಿಸುವೆ' ಎನ್ನುವಷ್ಟು ಬಲವಂತನೀತ. ಕೊನೆಯಲ್ಲಿ ಈ ಹನುಮಪ್ಪನನ್ನು ತಿರುಪತಿಗೇ ಕೊಂಡೊಯ್ಯುತ್ತಾರೆ

ಗಿರಿವಾಸನಾಗಿರುವ ವರಾಹತಿಮ್ಮಪ್ಪ
ಪುರದ ಬಾಗಿಲ ಮುಂದೆ ವೀರ ಹನುಮಪ್ಪ.

ಇವರ ಶಿವಪರ ಹಾಡುಗಳನ್ನು ಬೇರೊಂದು ಬಗೆಯಾಗಿ ಗಮನಿಸಬೇಕಾಗುವುದು. ರುದ್ರದೇವರನ್ನು ಮಾಧ್ವರು ಪರಮ ಗೌರವದಿಂದ ಕಾಣುತ್ತಾರೆ; ಆದರೆ ಶ್ರೀ ಹರಿಯ ಸರ್ವೋತ್ತಮತ್ವಕ್ಕೆ ಅವನೂ ಅಧೀನನೇ. ಕೃಷ್ಣದಾಸರು ಮಾಧ್ವರಾಗಿ ತತ್ವತಃ ಇದನ್ನು ಒಪ್ಪಿಕೊಂಡಿದ್ದರೂ ಈ ಪರಶಿವನು ಪ್ರತ್ಯೇಕವಾಗಿ ಓರ್ವ ಮಹಾಮಹಿಮನೆಂದು ಅನನ್ವಿತ ರೀತಿಯಲ್ಲಿ ಎತ್ತಿ ಹಿಡಿದಿದ್ದಾರೆ. ಇದಕ್ಕೆ ನಿದರ್ಶನವಾಗಿ ಕೆಲವು ಕೀರ್ತನೋಕ್ತಿಗಳನ್ನು ಗಮನಿಸಬಹುದು.

ಉಡುಪಿಯ ಅನಂತೇಶ್ವರನನ್ನು ಸ್ತುತಿಸುವಾಗ – ಅವನು (ಈಶ್ವರ) ಇಪ್ಪತ್ತೇಳು ನಕ್ಷತ್ರಗಳ ಒಡೆಯನಾದ ಚಂದ್ರನನ್ನೂ, ಸರ್ಪನ ಮೇಲೊರಗಿಪ್ಪ ವಿಷ್ಣುವಿನ ಮಗಳು ಗಂಗೆಯನ್ನೂ ಧರಿಸಿದವ ಎನ್ನುತ್ತಾರೆ. ಮುಂದುವರಿದು–

ಮುಪ್ಪುಹರನೆಂದು ಮೂರು ದೃಷ್ಟಿಗಳುಳ್ಳ
ಕಪ್ಪುಕೊರಳ ದೇವನ
ರೌಪ್ಯದ ಪುರವರಧೀಶನೆಂದೆನಿಸಿಯೆ
ಇಪ್ಪಂಥ ಪರಶಿವಗೆ
......... ಬತ್ತೀಸ ಗ್ರಾಮಕ್ಕೆ ಕರ್ತನೆಂದೆನಿಸಿಯೆ
ಅರ್ತಿಯಿಂ ನಲಿವನ

ಎಂಬುದಾಗಿ ಪರಶಿವನನ್ನು ಉಡುಪಿಯಲ್ಲಿ ನಿಲಿಸುತ್ತಾರೆ. ಮುಂದೆ ಕೇಳಿರಿ:

ಸ್ಮಾರ್ತರ ನಿಂದಿಸಿ ರಚಿಸುವ ಯಾಗಕ್ಕೆ
ಮೃತ್ಯುವನೊಟ್ಟಿದನ.

ಇದರ ಹಿನ್ನೆಲೆ ಸ್ಪಷ್ಟವಾಗಿಲ್ಲ.

'ಸಕಲವೆಲ್ಲವು ಶಿವನ ಲಿಂಗದೊಳಡಗಿಹುದು' ಎಂದು ಆರಂಭವಾಗುವ ಕೀರ್ತನೆಯಲ್ಲಿ –

'ಆ ಮಹಾ ಸಹಸ್ರನಾಮದೊಳಗತ್ಯಧಿಕ ಸೋಮೇಶನೆಂದೆಂಬ ಸ್ವಾಮಿಯನ್ನು ಪೂಜಿಸಲು ಕಾಮಿತದ ಫಲವು' ಎಂದು ಹೇಳುತ್ತಾರೆ. ವಿಷ್ಣುಸಹಸ್ರನಾಮವಿದ್ದಂತೆ ಶಿವಸಹಸ್ರನಾಮವೂ ಇದೆ. ಕೃಷ್ಣದಾಸರ ಗಮನದಲ್ಲಿದ್ದದ್ದು ಯಾವುದು? ವಿಷ್ಣುಸಹಸ್ರನಾಮದಲ್ಲಿ ಸೋಮಪ ಎಂಬೊಂದು ನಾಮವಿದೆ. ಏನಿದ್ದರೂ ಅವರು ಕೊನೆಯಲ್ಲಿ

ಶಿವಮಂತ್ರವೆ ಶಕ್ತಿ ಶಿವನೆ ಪರಶಕ್ತಿ
ಶಿವನಾಮವನು ಭಜಿಸಿ ಸಿರಿಯ ಪಡೆದನು ಹರಿಯು

ಎಂಬುದನ್ನು ಗಮನಿಸಿದರೆ ಅವರದು ಶಿವಪಾರಮ್ಯದ ನಿಲುವು ಎಂಬುದು ವೇದ್ಯ ವಾಗುತ್ತದೆ.

ಉಡುಪಿಯ ಶ್ರೀಕೃಷ್ಣ, ಅನಂತೇಶ್ವರರನ್ನು ವರ್ಣಿಸಿಯಾದ ಮೇಲೆ ಶ್ರೀ ಮಧ್ವಾಚಾರ್ಯರನ್ನು ಒಂದು ಕೀರ್ತನೆಯಲ್ಲಿ ಸ್ತುತಿಸಿದ್ದಾರೆ. ಅದರಲ್ಲಿ ಅವರ ಅವತಾರದ ಕಾರ್ಯಸಾಧನೆಯ ವಿಷಯ ಎದ್ದು ಕಾಣುವಂತಿಲ್ಲ. ಬದಲಿಗೆ ಅದರಲ್ಲಿ ಅಧ್ಯಾತ್ಮ ಅಂಶಗಳೇ ಮುಖ್ಯವಾಗಿ ಬಂದಿವೆ.*

ಒಂದು ಮೂಹೂರ್ತದಲಿ ವ್ಯಸನಗಳನು ಹೂಳಿ
ಬಂಧಿಸಿಯೆ ಚಂದ್ರಾರ್ಕ ವೀಥಿಗಳ ಪ್ರಣವದೊಳು
ಮುಂದೆ ಮೂಲಾಧಾರವೆಂಬ ಅರಮನೆ ಪೊಕ್ಕು
ನಿಂದು ನಿಯಮದಿ ಸುಲಿದನಧಿಷ್ಠಾನದರಮನೆಯ

---

* ಇದರಲ್ಲಿ ಬಂದಿರುವ ಸಂಖ್ಯಾಪದ ತತ್ವವಿಚಾರ ಹೀಗಿದೆ. ಅವಸ್ಥಾತ್ರಯ, ಮಲತ್ರಯ, ಗುಣತ್ರಯಃ ಅಕ್ಷರತ್ರಯ. ಕರಣಚತುಷ್ಟಯ. ಪಂಚಕ್ಲೇಶ. ಷಟ್‌ಶಕ್ತಿ, ಸಪ್ತಧಾತು, ಅಷ್ಟಾಂಗ ನವವಿಧಜ್ಞಾನ, ನವದ್ವಾರ. ದಶವಾಯು, ದಶಘೋಷ, ದಶಲಕ್ಷಣಗಳು. ಇವಲ್ಲದೆ ೩೬೦ ವ್ಯಾಧಿಗಳು, ಏಳು ಕೋಟಿ ಮಂತ್ರ, ೨೧೬೦೦ ಉಶ್ವಾಸನಿಶ್ವಾಸ ಇವನ್ನೂ ಪ್ರಸ್ತಾಪಿಸಿದ್ದಾರೆ.

## ಆತ್ಮನಿವೇದನೆ

ಸಂಸಾರ ನಿಸ್ಸಾರತೆ ಹಾಗೂ ಶ್ರೀಹರಿಯಲ್ಲಿ ಸಮರ್ಪಣಾಭಾವ- ಇವು ಎಲ್ಲ ಹರಿದಾಸರ ಕೀರ್ತನೆಗಳಲ್ಲಿ ಕಂಡು ಬರುವಂತಹವೇ. ಕೃಷ್ಣದಾಸರವು ಇಂಥ ಹತ್ತಾರು ರಚನೆಗಳಿವೆ, ಮಾದರಿಯಾಗಿ ಕೆಲವನ್ನು ವೀಕ್ಷಿಸಬಹುದು:

ಹಗಲುಗತ್ತಲೆಯಾಗಿ ಮೊಗವು ಕಾಣದೆ ಎನಗೆ
ಜಗದುದರ ನಿನ್ನಾಣೆ ನಗೆಯಾಯ್ತು ಜಗಕೆ
....... ಪಡೆದ ತಂದೆಯು ನೀನೆ ಕೊಡುವ ಒಡೆಯನು ನೀನೆ
ಮೊದಲೆ ಬುದ್ಧಿಯು ಹೀನ ಅದರೊಳಗೆ ವೃದ್ಧಾಪ್ಯ
..... ಪೊಡವಿಯೊಳಗೆನ್ನಂಥ ಕಡು ಮೂರ್ಖರನು ಕಾಣೆ
ಮಡದಿಯೆಂಬಡವಿಯೊಳು ಕೈದುಡುಕಿದು
ಪಡೆದ ಮಕ್ಕಳು ಮುಂದೆ ಕಡೆಹಾಯುವವರಿಲ್ಲ
...... ಕಾಸಿಲ್ಲ ಕೈಯೊಳಗೆ ಲೇಸಿಲ್ಲ ಮನೆಯೊಳಗೆ
ಹಿರಿಯೊಳಾರ್ಜಿಸಿದ ಗೃಹಕೃತ್ಯವೆಂಬುದಿದು
ಕೊರಳೊಳಗೆ ಸಿಲುಕಿರ್ದ ಸೆರೆಯಾಯಿತು

ಇನ್ನೊಂದರಲ್ಲಿ ಬಂದ ನಿವೇದನೆ ಮನತಟ್ಟುವಂತೆ ಇದೆ:

ನೋವುಗಳ ತಾಳಲಾರೆ ನೊಂದುಕೊಂಡು ಇರಲಾರೆ.
ಕಣ್ಣಿಗೆ ಕಾಣದ ನೋವು ಹುಣ್ಣುಗಳಿಲ್ಲದ ನೋವು
ಬಣ್ಣವು ಮಾಸಿದ ನೋವು ಬಲುಹಾದ ನೋವು
..... ದುಷ್ಟರಿಂದ ನೊಂದ ನೋವು ಹೊಟ್ಟೆಯೊಳ್ಹುಟ್ಟದ ನೋವು
ನುಡಿಯ ನೋವು ನಿಂದೆ ಮಾತಿನ ನೋವು
......... ಸಿದ್ಧಿಯಿಲ್ಲದ ಸಿಟ್ಟೊಂದು ನೋವು
ಇಂತು ನೋವುಗಳೆನ್ನ ಭ್ರಾಂತಿಯನು ಬಡಿಸುತಿದೆ
ಪಂಥ ಬೇಡವೊ ಲಕ್ಷ್ಮೀಕಾಂತಯೆನ್ನಯ ಬಳಿಗೆ.

## ಲೋಕನೀತಿ

ಕೃಷ್ಣದಾಸರು ತಮ್ಮ ಮಾಗಿದ ಜೀವನಾನುಭವವನ್ನು ಹಲವು ಕೀರ್ತನೆಗಳಲ್ಲಿ ಹೊಮ್ಮಿಸಿದ್ದಾರೆ. ಕೆಲವನ್ನು ಇಲ್ಲಿ ನಿದರ್ಶಿಸುವೆ

ಕಾಶಿಯಾತ್ರೆಯ ನಿಮಿತ್ತ ಮಾಡಿಕೊಂಡು ದಾಸರು ಸದಾಚಾರದ ಪ್ರತಿಯೊಂದು ಅಂಶವನ್ನು ಒಂದು ಕೀರ್ತನೆಯಲ್ಲಿ ತಂದಿದ್ದಾರೆ.

ಜೀವ ರಕ್ಷಣ್ಯವ ಮಾಳ್ಪುದೆ ಕಾಶಿ
ಅರಳಿಯ ವೃಕ್ಷವ ನೆಟ್ಟರೆ ಕಾಶಿ
ಕೆರೆಬಾವಿ ಕಟ್ಟಲು ಇಷ್ಟದ ಕಾಶಿ
ಕದನವಿಲ್ಲದ ಊರು ನೋಡಲು ಕಾಶಿ
ಬೇಕಾದುದಿದ್ದರೆ ಮನೆಯೆಲ್ಲ ಕಾಶಿ
ದಾನದೊಳಗೆ ಸಮಾಧಾನವೆ ಕಾಶಿ
ದೇವರೊಳಗೆ ಸಾಲಿಗ್ರಾಮವೆ ಕಾಶಿ ಇತ್ಯಾದಿ

ಜೀವನದಲ್ಲಿ ಒಳ್ಳೆಯದೇನಿದೆಯೊ ಅದೇ ಕಾಶಿ ಎನ್ನುವರಲ್ಲದೆ ಹಾಗೆ ಬಾಳಿದುದಾದರೆ 'ಕಾಶಿಗಿಮ್ಮಡಿಯಾಗಿ ಲೇಸ ಪಡೆಯಬಹುದು'.

ಲೋಭಿಯೊಳು ದ್ರವ್ಯ ಇದ್ದರೇನು ಇಲ್ಲದಿದ್ದರೇನು ಎನ್ನುತ್ತ ಅವನ ನಡತೆಯೆಂದರೆ–

ಇಕ್ಕದೆ ಎರೆಯದೆ ಮುಂದೆ
ಮಕ್ಕಳಿಗೆ ಸಿಕ್ಕದ ಹಾಗೆ
ಬೆಕ್ಕು ಮಣ್ಣು ಕೆದರಿ ತನ್ನ
ಇಕ್ಕೆಯನು ಇರಿಸಿದಂತೆ

ಎಷ್ಟೊಂದು ಮನೋಜ್ಞವಾದ ಉಪಮೆ

ಇಂಥವರಲ್ಲಿ ಇರುವುದು ಧರ್ಮರಹಿತವಾದ ಧನ ಈ ಧನದ ಮಹಿಮೆ ಅಷ್ಟಿಷ್ಟಲ್ಲ. 'ಧನವು ಇದ್ದರೆ ಸಾಕು ಜನರಿಗೆ ಧನದೋರದಾತನಿಗೆ ಗುಣವಿಲ್ಲ' ಎಂದು ಸ್ಪಷ್ಟಪಡಿಸುತ್ತಾರೆ. ಮುಂದುವರಿದು–

ಒಡವೆಯುಳ್ಳಾತಗೆ ನಡೆಯಬಾರದು ಕಾಲು
ನಡೆವಾಗ ಬಡವರ ಎಡವೃತ್ತ ಕಾಣನು !

ಇಂಥವನಿಗೆ 'ಸೆಡವೆಂಬ ಪುತ್ರನು ಒಡಲೊಳು ಜನಿಸುವ; ಮಡದಿ ಗರ್ವಿತೆಯಾಗಿ ಪಿಡಿವಳು ಕರವನ್ನು'.

ಧನದ ವಿಚಾರವಾಗಿ ಶ್ರೀ ವಾದಿರಾಜ ಗುರುಗಳೂ ಒಂದು ಕೀರ್ತನೆ ರಚಿಸಿದ್ದು 'ಹಣವೇ ನಿನ್ನಯ ಗುಣವೇನು ಬಣ್ಣಿಪೆನೊ' ಎನ್ನುತ್ತ ಲೌಕಿಕವಾದ ದೃಷ್ಟಾಂತಗಳನ್ನು ಕೊಟ್ಟಿದ್ದಾರೆ. 'ಹಣವೇ ಸಿರಿ ಹಯವದನನ ಸ್ಮರಣೆ ಮರೆಸುವಿ' ಎಂದಿದ್ದಾರೆ. ಏಕ ವಿಷಯಕವಾದ ಈ ಎರಡು ಕೀರ್ತನೆಗಳಲ್ಲಿ ಸಮಾನಾಂಶವೇನೂ ಇಲ್ಲ.

'ಜ್ಞಾನವಾವುದು? ಅಜ್ಞಾನವಾವುದು? ಮಾನ, ಅವಮಾನವಾವುದು?' ಎಂಬ ಪ್ರಶ್ನೆಯನ್ನೆತ್ತಿ ಅದಕ್ಕುಚಿತವಾದ ದೃಷ್ಟಾಂತಗಳನ್ನು ಕೊಟ್ಟಿದ್ದಾರೆ.

ಹಸಿದವರನ್ನು ಕಂಡು ಯಿಕ್ಕಲು ಜ್ಞಾನವಲ್ಲವೆ
ಬರಿಯೆ ಕ್ಷುದ್ರವೆಸಗಲವಮಾನವಲ್ಲವೆ.
ಧನ್ಯರನ್ನು ಮನ್ನಿಸುವುದು ಜ್ಞಾನವಲ್ಲವೆ
ಹೊನ್ನ ಹುದಿದು ಅನ್ನ ತೊರೆವುದು ಅಜ್ಞಾನವಲ್ಲವೆ
ತನ್ನ ಸತಿಯ ಕೂಡಿಯಿರಲು ಮಾನವಲ್ಲವೆ
ಅನ್ಯರೊಡನೆ ಕಳುವುದು ಅವಮಾನವಲ್ಲವೆ
ಹುಸಿಕನಾಗಿ ಅಸತ್ಯ ಮಾಳ್ಪುದು ಅಜ್ಞಾನವಲ್ಲವೆ
ಹಸನವಾಗಿ ನಡೆವ ಕೃತ್ಯ ಮಾನವಲ್ಲವೆ

ದುಡಿಮೆಯ ವಿಚಾರವಾಗಿ ಅವರು ಮಂಡಿಸಿದ ವಿಚಾರಗಳು ಯೋಚನೆ–ಗೊಳಗಾಗುವಂತೆ ಮಾಡುತ್ತವೆ. ಇಡೀ ದಿನ ಕಷ್ಟಪಟ್ಟು ದುಡಿಯಬಹುದು. ಆದರೆ ದೊರಕುವುದು ಒಂದು 'ಹಾಗ' ಮಾತ್ರ. (ಕಡಿಮೆ ಕಿಮ್ಮತ್ತಿನ ಮಧ್ಯಕಾಲೀನ ನಾಣ್ಯ). ಅದಕ್ಕೂ ಹೆಚ್ಚಿನ ಗಳಿಕೆ ಬೇಕಾದರೆ ?

ತನ್ನ ಕಷ್ಟದಿ ತನಗೆ ದೊರಕುವುದು ಹಾಗ
ಉನ್ನಂತ ಭಾಗ್ಯಗಳು ಹರಿಯ ವಿನಿಯೋಗ

ಈ ಕೀರ್ತನೆಯಲ್ಲಿಯೂ ಪ್ರಾಸಂಗಿಕವಾಗಿ ಹರಿಯ, ಹರನ ವಿಶಿಷ್ಟ ಸಮನ್ವಯವಿದೆ:

ಹರಿಯ ಸೇವೆಯ ಮಾಡೆ ಇಹಪರದ ಸೌಖ್ಯಗಳು
ಹರನ ಸೇವೆಯ ಮಾಡೆ ಪರಮ ಪದವು.

ಇದು ಅವರು ನಂಬಿದ್ದ ಮಧ್ವ ಮತಕ್ಕೆ ವಿರೋಧವಾದ್ದು 'ಹರಿಯ', 'ಹರನ' ಈ ಶಬ್ದಗಳನ್ನು ಲಿಪಿಕಾರ ಅದಲು ಬದಲು ಮಾಡಿರಬಹುದೆ ?

'ತನ್ನ ಸ್ಮರಣೆಯ ತಾನರಿಯದ ಮನವು ಚಿನುಮಯ ರೂಪನ ಬೆನ್ನವಿಡಿ–ವುದುಂಟೆ' ಎಂಬ ಕೀರ್ತನೆಯ ಪ್ರತಿ ನುಡಿಯೂ ಮನನ ಮಾಡುವಂತಿದೆ.

ಕನ್ನಡಿ ಶುದ್ಧವಾಗಿಯೆ ಕಾಣದ ದೃಷ್ಟಿ
ಚಿನ್ನವಾರಿಕೆಯನ್ನು ಮಾಡುವ ಪರಿಯು
ಧನ್ಯವಾದವರನ್ನು ಕಂಡು ನಗದ ಮನ
ಮನ್ನಣೆಯಿಲ್ಲದ ಮನೆಯೊಳುಂಬರೆ ಹೇಸ (ಹೇಸುವುದಿಲ್ಲ)
ಕಾಗೆಯು ಗರುಡನ ಸರಿಯೆಂದು ಜೂಜಾಡಿ
ಸಾಗರವನು ಹಾರಿ ನಡುವೆ ಬಿದ್ದಂದದಿ

ಈ ದೃಷ್ಟಾಂತಗಳಂತೂ ಅತ್ಯಂತ ಸಯುಕ್ತಿಕವಾದದ್ದು:

ಚಿತ್ರಿಕ ರಚಿಸಿದ ಸೇನೆಸೇನೆಗಳೆಲ್ಲ
ಪ್ರಸ್ತುತಕೊದಗುವದೆನುತಿಹ ರಾಯನ
ಮುತ್ತಿಕೊಂಡಿಹ ಪರಸೇನೆಯ ಇದಿರೊಳು
ಮೃತ್ಯುದೇವತೆ ಬಂದು ಮೂದಲಿಸುವಳೆಂದು
ಮೊಸರನ್ನ ತನ್ನ ಕೈಯೊಳಗಿದ್ದಂತೆ
ಹಸಿವಾದ ವೇಳ್ಯದಿ ಹಸಿಯ ಮೆಲ್ಲುವದೇಕೆ

ವಿಷಮವಾಗದೆ ಹರಿ ವರಾಹತಿಮ್ಮಪ್ಪನ
ಕುಶಲದಿ ನೆನೆಯಲು ಹಸನದಿ ಸಲಹುವ
ದುರ್ಜನರ ಸಂಗವನು ತ್ಯಜಿಸು ಮನವೆ

– ಎಂಬ ನೀತಿ ಬೋಧೆಯಲ್ಲಿ ಬಂದ ಈ ಅಂಶಗಳನ್ನು ವಿಶೇಷವಾಗಿ ಗಮನಿಸತಕ್ಕದು;

ಒಂದು ಜಾತಿಗೆ ವಿಷವು ಪುಚ್ಛದೊಳಗಿರುತಿಹುದು ಮ –
ತ್ತೊಂದು ಜಾತಿಗೆ ದಂತದೊಳಗೆ ವಿಷವು
ಒಂದು ಜಾತಿಗೆ ಮೈಯ ಅಂದವೆಲ್ಲವು ವಿಷವು
ಹಿಂದೆಯಾಡುವ ನುಡಿಯು? ಘೋರ ವಿಷ, ಮನವೆ

ಅದ್ದರಿಂದ ಅವರನ್ನು ದೂರವಿರಿಸಿ –

ಸತ್ಯವಂತರ ಕಂಡರರ್ಥಿಯಿಂದಲೆ ಎರಗು
ನಿತ್ಯದೊಳು ಶ್ರೀಹರಿಯ ಕೀರ್ತನೆಯ ಮಾಡು.

'ನಂಬಬೇಡ ಈ ಜೀವನವನ್ನು' ಎನ್ನುತ್ತಾರೆ ಕೃಷ್ಣದಾಸರು. ಏಕೊ?

ಮಾಳಿಗೆ ಮನೆಯನ್ನು ಬಿಟ್ಟು ಮಾಡಿದ ಓಗರ ಬಿಟ್ಟು
ಜಾಳಿಗೆ ಹೊನ್ನನು ಬಿಟ್ಟು ಜಾರುವುದು ತನುವ ಬಿಟ್ಟು.

ಆದಕಾರಣ 'ಸಾಸಿರನಾಮನ ಭಜಿಸಿ ದಾಸನಾಗು ಅನುದಿನ' ಎಂದು ಉಪದೇಶಿಸುತ್ತಾರೆ. ಇನ್ನೊಂದು ಹಾಡಿನಲ್ಲಿ 'ನೀನೆ ಗುರುವಾಗೆನಗೆ ಕೋನೇರಿವಾಸ' ಎಂದು ಪ್ರಾರ್ಥಿಸಿ, 'ಜ್ಞಾನವಿಲ್ಲದ ಮನುಜ ತಾನಿದ್ದು ಫಲವೇನು' ಎಂಬ ಉಕ್ತಿಗೆ ಹತ್ತಾರು ಉದಾಹರಣೆಗಳನ್ನು ಕೊಟ್ಟಿದ್ದಾರೆ :

ನಾಳವಿಲ್ಲದ ಘಂಟೆ ಭಾಳ(ರ) ವಾಗಿದ್ದರೇನು ?
ತೋಳ ಬಲಹಿಲ್ಲದವ ದೊರೆಯಾದರೇನು ?
ತಿದ್ದಬಾರದ ತೇಜಿ ಉದ್ದವಾಗಿದ್ದರೇನು ?
ಬಿದ್ದ ಪೂಜೆಯ ಮೂರ್ತಿ ಮುದ್ದಾದರೇನು ?

ಗೊಡ್ಡು ದನವಿನ ಕ್ರಯವು ಅಡ್ಡವಾದರೆಯೇನು ?
ಹೆಡ್ಡನಾದವ ಬಹಳ ಗಡ್ಡವಿರಿಸಿದರೇನು ?
ಒಕ್ಕಲಿಲ್ಲದ ಊರು, ಮಕ್ಕಳಿಲ್ಲದ ಮನೆಯು
ಅಕ್ಕರಿಲ್ಲದ ತವರು ಇದ್ದು ಫಲವೇನು ?
ಕಡಗೋಲು ಹೊರತಾಗಿ ಬೆಣ್ಣೆ ತೋರುವುದೇನೊ
ಪೊಡವಿ ಕಡಿಯದೆ ಬೆಳೆಯ ನೆಡುವುದೇನೊ.

ಲೋಕನೀತಿಯ ಇದೊಂದು ಕೀರ್ತನೆ ಮಾರ್ಮಿಕ ಅಂಶಗಳಿಂದ ಕೂಡಿದೆ. 'ಬಲ್ಲರೊಳು ಸಲ್ಲದೈ ಖುಲ್ಲಮಾತುಗಳು'–ಎಂಬುದು ಅದರ ಪಲ್ಲವಿ.

ಅರಸು ಸಣ್ಣವನೆಂದು ಸರಸವಾಡಲು ಸಲ್ಲ
ಕರಸಿ ಕೇಳದ ಮಾತು ಆಡಸಲ್ಲ
ಹಗಲು ಕಳ್ಳನ ಕೈಯ ಜಗಳವಾಡದು ಸಲ್ಲ (ಅದ್ಯಾಕೊ!)
ಅಗಲಿ ಪೋಗುವೆನೆಂಬ ಮಗನು ಸಲ್ಲ
ಕಡು ಚೆಲ್ವೆ ಕುರುಡನಿಗೆ ಮಡದಿಯಹ ಸಲ್ಲ
ಹರಿಯು ಮುನಿದರೆ ಮರೆಯೊಳಿರಿಸಿಕೊಂಬವರಿಲ್ಲ
ಹರಿಯೊಲಿದ ನರನೊಳಗೆ ಗೆಲುವ ಪರಿಯಿಲ್ಲ.

ಮುಂದುವರಿದು –

ಅಂಗಸುಖವ ತಾಳ್ದು ಗೊಂಗಡಿಯ ಹೊದ್ದು
ಕಂಗಳಿಗೆ ಚೆಲುವಾದ ಅಂಗನಾಮೋಹದಿ ಶ್ರೀ –
ರಂಗನ ನಾಮದ ಅಂಗಿಯು ಸಡಲಿಸಿದೆ.

ಇಲ್ಲಿಯ ಗೊಂಗಡಿ, ಅಂಗಿಗಳ ಹೋಲಿಕೆಯನ್ನು ಗಮನಿಸಬೇಕು ದಾಸರು ಶ್ರೀಲಕುಮೀಪತಿಯನ್ನು ನೆನೆಯಲಿಲ್ಲವಂತೆ ಕಾರಣ?

ಸ್ನಾನಕ್ಕೆ ಚಳಿ ಹುಟ್ಟಿ ಧ್ಯಾನಕ್ಕೆ ಮರವೆಯು
ಮೌನಕ್ಕೆ ಕೋಪದ ಬೀಜವಂಕುರಿಸಿತು

ದಾನಕ್ಕೆ ಲೋಭವು, ಮಾನಕ್ಕೆ ಪಿಸುಣರು
ಏನ ಮಾಡದರಿವರು ಬಿಡರಲ್ಲೊ ಮನವೆ.

ಮೇಲಣ ಸಾಲುಗಳಲ್ಲಿಯ ರೂಪಕ ಸ್ವಾರಸ್ಯವು ಮನಮೆಚ್ಚುವಂತಹದು.

ಮರುಳುತನ ! ದಾಸರು ಜನಜೀವನದಲ್ಲಿ ಅದನ್ನೂ ಕಂಡಿದ್ದಾರೆ. ಅದರ ಪ್ರತಾಪವನ್ನು ಈ ರೀತಿ ವರ್ಣಿಸಿದ್ದಾರೆ.

ಹೆಂಡತಿಯ ಸುಲಿದು ತನ್ನ ಮಿಂಡಿಗಿಡುವದು
ಭಂಡತನದಿ ಕೊಂದು ದೂರ ಕೊಂಡು ಪೋಪುದು
ಇಲಿಯು ಹೆಚ್ಚಿತೆಂದು ಮನೆಗೆ ಉರಿಯನಿಡುವುದು
ಚಳಿಯ ಹೋಯಿತೆಂದು ಮನದಿ ನಲಿವುತಿರುವುದು

ಚಳಿಗಾಲ ಮುಗಿದರೆ ಆಮೇಲೆ ಉರಿಬಿಸಿಲು ಬರುವದೆಂಬ ಕಲ್ಪನೆ ಇರಬಾರದೆ! ಮುಂದೆ ಕೇಳಿರಿ:

ಹೆತ್ತ ಮಗನ ತೊರೆದು ತಾನು ದತ್ತಕಪ್ಪುದು
ಕತ್ತಿಯನ್ನು ಬಿಸುಟು ಒರೆಯ ಹತ್ತಿರಿಡುವದು
ಗಾಳವಿಲ್ಲದೆ ಮೀನುಗಳ ಮೇಲೆ ತೆಗೆವುದು
ಸಾಲವನು ಕೊಟ್ಟವರು ಸಾಯಲೆಂಬುದು (ಹಾಯ್!)

ಮರುಳುತನದ ಪ್ರತಿರೂಪನೇ ಮಾಯೆ ಎಂಬುದು. ಅದರ ಸ್ವರೂಪವನ್ನು ದಾಸರು ಈ ರೀತಿ ಚಿತ್ರಿಸಿದ್ದಾರೆ :

ಮಾಯೆಯೆನ್ನ ಕಾಯ ಸುತ್ತಿ ಬಾಯ ಹೊಯ್ವುದು
ಹೆತ್ತತಾಯಿ ತಂದೆಯನ್ನು ಒತ್ತಿ ಬಯ್ವುದು
ಅತ್ತೆಯನ್ನು ಕಂಡು ಹರುಷವಿತ್ತು ನಗುವುದು (ಓ!)

ಈ ಬಗೆಯ ಇಬ್ಬಂದಿತನ ಇನ್ನೂ ಕೆಲವೆಡೆ ಕಂಡು ಬರುತ್ತದೆ. ಅದರಿಂದ ಯಾವ ಫಲವೂ ಇಲ್ಲ.

ಪಿತನೊಳಗೆ ಸೇರದಿಹ ಸುತನಿಂದ ಫಲವೇನು
ಮತಿಹೀನ ಗುರು ತಾನು ಜೊತೆಯಾಗಿ ಇದ್ದರೇನು
ಮತಮೀರಿ ನಡೆವಾತ ಯತಿಯಾದರೇನು ?
ಸಾಯವಿಲ್ಲದ ನ್ಯಾಯ ಸತ್ಯವಾದರೆ ಏನು
ಬಾಯ ಸವಿಯಿಲ್ಲದ ರಸಾಯನದಲೇನು
ಕಾಯ ಕುಂದಿದ ಮೇಲೆ ಜೀವದಾಶೆಯೇನು
ಋಣವ ಮಾಡಿದ ತಾತ ಗುಣವಂತನಾದರೇನು
ಎಣಿಕೆ ಬಾರದ ಮನುಜ ಕರಣಿಕನಾದರೇನು
ಕ್ರೋಧನಾಗಿಹ ವಿಪ್ರ ವೇದ ಓದಿದರೇನು
ಬೂದಿ ಮುಚ್ಚಿದ ಕೆಂಡವಾದ ಸೋದರವೇನು
ವಾರಿಯಿಲ್ಲದ ಊರ ಸೇರಿರ್ದ ಫಲವೇನು
ಬೇರು ಇಲ್ಲದ ವೃಕ್ಷ ಏರಿ ನೋಡುವುದೇನು.

ನಮ್ಮ ಕೃಷ್ಣದಾಸರು ತೀರಾ ಲೌಕಿಕವಾದ ಒಂದು ವಿಷಯದ ಬಗ್ಗೆ ಕೃತಿ ರಚಿಸಿದ್ದಾರೆ. ಅದುವೆ 'ಮಳೆರಾಯನಿಗೆ ಮೊರೆ'. ಇವರಿದ್ದ ಪಡುವಣದಲ್ಲಿ ಮಾತ್ರ ಮಳೆಯೇ ಆಗಿಲ್ಲ. ದೇವರಲ್ಲಿ ಮೊರೆಯಿಡುತ್ತಾರೆ:

ಏನು ಮಾಡಲಿ ವೆಂಕಟೇಶ ಈ ಬೆಳೆಯು
ಸೋನೆಯಿಲ್ಲದೆ ಉರಿದುದು
ಮೂಡದೆಸೆಯೊಳು ಬಂದುದು, ಆ ಮಳೆಯು
ಬಡಗದೆಸೆಯೊಳು ಸುರಿದುದು
ಎಡಬಿಡದೆ ತೆಂಕ ಕಡೆಯಲಿ ಹೊಡೆದು ಮಳೆಯು ತಾ
ನಡುವೆ ಬಿಡುವುದು ಯಾತಕೆ
ಪರಿಣಾಮವಾಗಿ ಪಶ್ಚಿಮದ ಉಡುಪಿ/ ಪೆರಂಪಳ್ಳಿಯಲ್ಲಿ
ಮಳೆಯಿಲ್ಲದಿಳೆಯಾರಿತು, ನಟ್ಟಿರ್ದ
ಫಲವೆಲ್ಲ ಬೆಳೆ ಕೆಟ್ಟಿತು.
ಎಲ್ಲ ಬೇಡಿಯೆ ಕೊಂಬರು, ಈ ಹರಕೆ–
ಯಲ್ಲಿ ಅಂತರ ಬಾರದು

ಹಲ್ಲು ಬಾಯಾರಿರ್ದ ಮಕ್ಕಳಿಗೆ ಎಳನೀರು
ಬೆಲ್ಲವಾಗಿಹ ಮಳೆಯ ನೆರೆಯೊ
ನೀಲಮೇಘಶ್ಯಾಮಲ ವರ್ಣ ಕಾಣಲಾ
ಮೂಲೋಕದೊಡೆಯ ನಿನ್ನ
ಕಾಲ ಮೇಘವು ನಿನಗೆ ದೂರವಾಗುವುದುಂಟೆ
ಆಲಸ್ಯ ಮಾಡಬೇಡ.

## ಅನುಭಾವದ ಪದಗಳು /ಮುಂಡಿಗೆ

ಕೃಷ್ಣದಾಸರಿಂದ ರಚಿತವಾದ ಕೆಲವು ಪದಗಳು ಅಧ್ಯಾತ್ಮದ ಅಂಶಗಳನ್ನು ಒಳಗೊಂಡಿದ್ದು ಅವನ್ನು ಮುಂಡಿಗೆಗಳೆಂದು ಬಗೆಯಬಹುದು. ಈ ಕೃತಿಗಳಲ್ಲಿ ಅವರ ಸ್ವೋಪಜ್ಞತೆಯ ಪರಮಾವಧಿಯನ್ನು ಕಾಣಬಲ್ಲೆವು. ಇವುಗಳನ್ನು ಅರ್ಥವಿಸುವುದು ಸುಲಭವಲ್ಲ. ಕೆಲವನ್ನು ದಾಖಲಿಸುವೆ. ಇಲ್ಲಿಯೂ ತಿರುಪತಿಯ ತಿಮ್ಮಪ್ಪನನ್ನು ಸುತ್ತುವರಿದೇ ಕೃತಿರಚನೆಯಾಗಿದೆ.

ಅಂಗಡಿ ಗೋವಿಂದನ್ನಣ ವಿಂಗಡಿಸಿರೊ
ಮುಂಗಡದ ಬಡ್ಡಿಯನು ಮುಂದೆ ಕಳುಹಿಸಿ

ಈ ಗೋವಿಂದನ ಆಗಮನ ಇಂತಿದೆ:

ಕೋಲುಗಾರನೊಬ್ಬನಲ್ಲಿ ಹೊರಟನಂತೆ
ಬೇಳುವ ಶಂಖದ ಧ್ವನಿಯ ತೋರ್ಪನಂತೆ
ಹೀಲಿಯ ಕುಂಚವು ಕಯ್ಯೊಳಿಪ್ಪುದಂತೆ
ಮೇಲೆ ಮೂರು ನಾಮ ಧರಿಸಿ ಬಪ್ಪನಂತೆ

ಗಂಧಿಕಾರನಂಗಡಿ ಗೋವಿಂದನಲ್ಲಿ
ಚಂದದ ಔಷಧವನ್ನು ತಿಂಬೆವಲ್ಲಿ
ಬಂದ ಭವದ ರೋಗ ಕೊಂದೆವಲ್ಲಿ, ಆತ
ಮಿಂದ ತೀರ್ಥವನ್ನು ಊರಿಗೆಂದೆವಲ್ಲಿ.

ತಿಮ್ಮಪ್ಪ ತನ್ನ ಮದುವೆಗಾಗಿ ಸಾಲ ಮಾಡಿದ ; ಹಾಗೂ ಅವನೊಬ್ಬ 'ಕಾಂಚನ ಬ್ರಹ್ಮ' ಎಂಬ ಮಾತು ಈ ರೀತಿಯಲ್ಲಿ ವ್ಯಕ್ತವಾಗಿದೆ.

ಶ್ರೀಕೃಷ್ಣನು ಒಮ್ಮೆ ದಾಸರ ಕನಸಿನಲ್ಲಿ ಬಂದನಂತೆ. ಹಿಂದೆ ಮಾಡಿದ ಒಂದು ಪದವನ್ನು ಹೇಳು ಎಂದ. ಅದರ ವಿವರಣೆಯನ್ನು ಅವನೇ ಹೇಳಿದ. ಆಮೇಲೆ ಒಂದು ದೋಸೆಯನ್ನು ತಂದುಕೊಡು ಎಂದು ಹೇಳಿದ. ತಾನು ತುಸು ತಿಂದು ಮೀಸಲು ಮುರಿದದ್ದರಿಂದ ದಾಸರು ಕೊಡಲಿಲ್ಲ. ಅಲ್ಲಿಂದ, ಎಳೆಯ ಪ್ರಾಯದ ಚೆಲುವೆಯೊಬ್ಬಳು ಹೊಳೆಯಲ್ಲಿ ಈಸುತ್ತಿದ್ದವಳನ್ನು ಮೇಲೆತ್ತಿ ಕರತಂದನೆಂದೂ ಸ್ವಪ್ನವಾಯಿತಂತೆ. 'ಆ ಮಹಾಮೂರ್ತಿಯನು ಜಾವಪರಿಯಂತರದಿ ನೋಡಿದನು ಸೌಮನಸ್ಯದಲ್ಲಿ' ಎಂಬ ತೃಪ್ತಿಯಿಂದ ಹಾಡು ಕೊನೆಗೊಳ್ಳುತ್ತದೆ. ಇಲ್ಲಿಯ ಮೂರು ವಿಭಿನ್ನ ಪ್ರಸಂಗಗಳ ಅಂತರ್ಗತವೇನೆಂಬುದು ತಿಳಿಯದು. ಆದರೆ ಈ ಹಾಡು 'ಪುರಂದರ ವಿಠಲ' ಮುದ್ರಿಕೆಯಲ್ಲಿಯೂ ಇದೆ.

ಕಲಿಯುಗ ಬಂತು, ಜನರು ರೀತಿ ನೀತಿ, ಸದಾಚಾರ, ಸದ್ಧರ್ಮಗಳನ್ನು ಮರೆಯುವಂತಾಯ್ತು. ಈ ಕಲಿರಾಯ–

> ಸತ್ಯವೆಂಬುದನೆಲ್ಲ ಹತ್ತಿಸಿದ ಬೆಟ್ಟವನು....
> ತಪ್ಪಿಹೋಯಿತು ಶಾಸ್ತ್ರ ತಪ್ಪಾಯ್ತು ಪೌರಾಣ
> ಮುಪ್ಪು ಬಂದುದು ವೇದ ಕಪ್ಪಾದನಗ್ನಿ

ಮುಂದುವರಿದು ದಾಸರು ಜನರ ಸ್ವೈರ ದುರಾಚಾರಗಳನ್ನು ಇದೇ ರೀತಿ ವ್ಯಕ್ತಪಡಿಸಿದ್ದಾರೆ.

ಈ ಕಲಿರಾಯ ದೇವತೆಗಳ ಮೇಲೂ ತನ್ನ ಪ್ರಭಾವವನ್ನು ಬೀರಿದ್ದಾನೆ.

> ಶಿವನು ದುರ್ಗವ ಬಲಿದ, ಜವನು ದಂಡವನಿಟ್ಟ
> ಬವಣೆಬಡುವನು ಕಮಲಭವನು ತನ್ನೊಳಗೆ
> ಹವಣನರಿಯದೆ ವಿಷ್ಣು ತವಕಿಸುವ ಮನದೊಳಗೆ

'ಬಲ್ಲವನಾದರೀ ತಳ್ಳಬೇಡ' ಎಂಬ ಕೀರ್ತನೆಯಿಡೀ ಅನುಭಾವದ ಅಂಶಗಳನ್ನೇ ಕಾಣುತ್ತೇವೆ.

ಕಡಹದ ಪಲ್ಲಕ್ಕಿ ಬೆಡಗನ್ನು ಕಾಣುತ್ತ
ಅಡವಿಯ ಮೃಗ ಬಂದು ಕುಳಿತಿರ್ದುದ
ಒಡನೆ ಕಟ್ಟಿರ್ದ ವಾಹಕರ್ಧದಿನಾರು ಮಂದಿಯು
ಕಡಿಮೆಯ ಸಂಬಳಕಡವಿಡುವವರನ್ನು

ಅಕ್ಕಿಯ ರಾಶಿಯು ತೀರಲು ಕೊಳಗವು
ಬೆಕ್ಕನೆ ಬೆರಗಾಗಿ ಕುಳಿತಿಪ್ಪುದು
ಬಿಕ್ಕಿದ ಅಕ್ಕಿಯ ಹೆಕ್ಕಿಯು ಹೆಕ್ಕಿಯೆ
ಗಕ್ಕನೆ ಹಾರುವ ಪಕ್ಷಿಯ ನೋಡುತ್ತ

ಸ್ಮಾರ್ತರಾದವರು ನಾಮವನ್ನು ಹಚ್ಚಿರೋ ಎಂದು ಹೇಳಿದ ಪದವನ್ನು ಈ ಹಿಂದೆ ನೋಡಿದ್ದೇವೆ. ಅಲ್ಲಿರುವುದು ಕೇಶವಾದಿ ನಾಮ: ಗೋಪೀಚಂದನದ್ದಲ್ಲ, ಅದರಂತೆ 'ಬೂದಿಯ ಹಚ್ಚಿರೋ ಶುದ್ಧ ವೈಷ್ಣರು' ಎಂಬುದಾಗಿಯೂ ಉಪದೇಶಿಸಿದ್ದಾರೆ. ಇದು ಭೌತಿಕರೂಪದ ವಿಭೂತಿಯಲ್ಲ: ಈ 'ಬೂದಿ' ಯು ನಮ್ಮ ಮನಸ್ಸು ಬುದ್ಧಿಗಳನ್ನು ನಿರ್ಮಲಗೊಳಿಸುವಂತಹದು.

ಆರು ವೈರಿಗಳನ್ನು ತೂರುವ ಬೂದಿ
ಆರು ಭಾವಗಳನ್ನು ಬೇರಿಟ್ಟ ಬೂದಿ
ಆರು ಭ್ರಮೆಗಳನ್ನು ಕಡಿದಿಟ್ಟ ಬೂದಿ
ಆರಿಗೂ ತೋರದೆ ಹಾರುವ ಬೂದಿ,

'ಯಾರು ಇಕ್ಕುವರೆಂದು ಹಾರೈಸುವೆ ಆತ್ಮ' ಎಂಬುದಾಗಿ ಆತ್ಮನನ್ನು ಸಂಬೋಧಿಸಿದ ಹಾಡು ಸಂಖ್ಯಾಪದಗಳ ಸರಮಾಲೆಯನ್ನೇ ಒಳಗೊಂಡಿದೆ:

ಮೂರು ಮಾತನು ಮೇಲೆ ಯಾರ ಕೂಡಾಡಿದೆಯೊ
ಆರು ಪಥದಲಿ ನೀನು ಮೀರಿ ನಡೆದೆ

ಕೇರಿಯಾಗಿರ್ದ ಹದಿನೆಂಟು ಅಂಗಡಿಯೊಳಗೆ
ಆರು ವ್ಯಾಪಾರವನು ಕೇಳಿದ್ಯೆ ಆತ

ಹತ್ತು ತಾಸಿನ ಮೇಲೆ ತುತ್ತು ಕೊಡುವವರಾರು ಬತ್ತುವುದು ಕೈಕಾಲು ಬಳಲಿಕೆಯೊಳು

ಮತ್ತೇಳು ಮಂದಿ ತಾವತ್ತತ್ತ ಸಾರುವರು
ಕರ್ತುಗಳ ನಾ ಕಾಣೆ. ನೀ ಕೇಳೊ ಆತ್ಮ

'ಯಾರಿಗೆ ದೂರುವೆನು ವೆಂಕಟರಾಯ' ಎಂಬ ಪದದಲ್ಲಿಯೂ ಇದೇ ಧಾಟಿಯನ್ನು ಕಾಣುತ್ತೇವೆ :

ಈರಾರು ಸ್ಥಳದಲ್ಲಿ ಮೂರಾರು ಸೇರಿಸಿ
ಹೋರಾಟವನಿತ್ತು ಮಾರಿದೆಯೆನ್ನನು

ತೇಜವುಳ್ಳವನೊಬ್ಬನು ಐದನೆಯಲ್ಲಿ
ಮೋಜಾಗಿ ಒಳಹೊಕ್ಕನು

ಸೀತವಾದವನೊಬ್ಬನು ಅಷ್ಟಮದದಲ್ಲಿ
ಕಾತುರದೊಳು ಬಂದನ

ಮೂರನೆಯವನೊಬ್ಬ ಏಳನೆಯಲ್ಲಿ
ಸೇರಿಯೆ ಕಳುತಿದ್ದನು

ಅತ್ತಿಯ ಮೊಮ್ಮಗನು ನಾಲ್ಕನೆಯಲ್ಲಿ
ಶತ್ರುವಾಗಿಯೆ ನಿಂತನು

ಆದಿತ್ಯಪುತ್ರನಾದ ಶನ್ಯೈಶ್ವರ
ಬಾಧಿಪ ಮನೆಗಳಾರು
ದ್ವಾದಶ ಆದಿಯು ದ್ವಿತಯ ಪಂಚಮದಲ್ಲಿ
ವೇದಗಳೆಲ್ಲವು ಏಳುಯೆಂಟರಲಿ. – ಇತ್ಯಾದಿ

'ಸುಲಭದ ಮಾತಿದು ತಿಳಿದು ಪೇಳಿ' ಎಂಬ ಹಾಡಿನಲ್ಲಿ ಎಲ್ಲವೂ ಕಷ್ಟಕರ– ಅರ್ಥವಿಸಲು:

ಅಂತರಿಕ್ಷದಲೊಂದು ನಿಂತಿಹ ವೃಕ್ಷ ವಾ
ನಂತಾನಂತವಾದೆಲೆಗಳುಂಟು
ನಿಂತಿಹ ಎಲೆಗಳು ಬೀಳುವುದನ್ನು ನೋಡಿ
ಮಂತ್ರಿಯೊಬ್ಬ ಕುಳಿತು ಎಣಿಸುವನಯ್ಯ

ಗುಡಿಯ ಬಾಗಿಲ ಮುಂದೆ ವೃಕ್ಷದ ಗಿಣಿಯನ್ನು
ಮಡದಿಯೋರ್ವಳು ಕಂಡು ಒಳಗಿಟ್ಟಳು

ಮೂಗನು ಕಾಣುತ್ತ ಕೂಗ್ಯಾಡಿ ಕರೆಯಲು
ಆಗಲೆ ಕಿವುಡನು ಧ್ವನಿಯ ಕೇಳಿ
ಬೇಗದಿ ಕುರುಡನು ಬಂದು ಹಾಲೆರೆಯಲು
ಆಗಲೆ ಪಕ್ಷಿಯು ಉಂಡು ಹಾರಿತಯ್ಯ

ಇಲ್ಲಿ ಮೂಗನು ಒದರಬಲ್ಲ ; ಕಿವುಡನು ಧ್ವನಿ ಕೇಳಬಲ್ಲ ! ಹೀಗಿದೆ ವಿರೋಧಾಭಾಸ !.

## ದೀರ್ಘ ಕವನಗಳು

### ಲಕ್ಷ್ಮೀಕಲ್ಯಾಣ

ವರಾಹ ತಿಮ್ಮಪ್ಪಗಿಂತ ಮುಂಚೆ ಈ ವಿಷಯವಾಗಿ ಕೃತಿರಚನೆ ಮಾಡಿದವರು ಶ್ರೀ ವಾದಿರಾಜತೀರ್ಥರೊಬ್ಬರೇ. ಅವರ 'ಲಕ್ಷ್ಮೀಶೋಭಾನ'ವು ದಿನದಿನಕ್ಕೆ ಜನಪ್ರಿಯವಾಗುತ್ತ ನಡೆದಿದೆ. ಎರಡೂ ಕೃತಿಗಳು ಸಾಕಷ್ಟು ದೀರ್ಘವಾಗಿವೆ. ಸಾಂಗತ್ಯದಲ್ಲಿದ್ದು ಹಾಡುವುದಕ್ಕೆ ಸೊಗಸಾಗಿವೆ. ಪದಬಂಧವು ಹೃದ್ಯವಾದುದು. ಆದರೆ ವಿಷಯ ಮಂಡನೆಯಲ್ಲಿ ಇಬ್ಬರದೂ ಭಿನ್ನ ದೃಷ್ಟಿಕೋನ.

ಲಕ್ಷ್ಮೀಶೋಭಾನದಲ್ಲಿ ಲಕ್ಷ್ಮೀಯು ವರನನ್ನು ಆಯ್ದುಕೊಳ್ಳುವಾಗ ಇತರ ದೇವತೆಗಳಲ್ಲಿಯ ಒಂದೊಂದು ನ್ಯೂನತೆಯನ್ನು ಹೇಳುತ್ತಾ ಹೋಗುತ್ತಾಳೆ. (ಪದ್ಯ ೧೬ ರಿಂದ ೬೪) ಶ್ರೀಹರಿಯನ್ನು ಆಯ್ದುಕೊಂಡು ವಿವಾಹವಾಗುವ

ಕಾಲಕ್ಕೆ ಹಸೆಗೆ ಕರೆಯುವ ನುಡಿಗಳಿವೆ. (೭೬-೯೦) ಅನಂತರ ಮದುವೆಗೆ ಬಂದವರಿಗೆ ಪರಸ್ಪರ ಉಡುಗೊರೆಯ ಸಮರ್ಪಣ (೯೫-೧೦೫) ಸಮಾರಂಭ ಮುಗಿದ ಮೇಲೆ, ಶ್ರೀಹರಿಯ ವಾಸಕ್ಕೆ ಸಮುದ್ರದಲ್ಲಿ ವ್ಯವಸ್ಥೆ (೧೦೬) ಶೋಭಾನದ ಕೊನೆಯಲ್ಲಿ.

ಮದುವೆಯ ಮನೆಯಲ್ಲಿ ಈ ಪದನ ಪಾಡಿದರೆ
ಮದುಮಕ್ಕಳಿಗೆ ಮುದವಹುದು
ವಧುಗಳಿಗೆ ಬಹು ಭಾಗ್ಯ ದಿನದಿನಕ್ಕೆ ಹೆಚ್ಚುವುದು
ಮದನನಯ್ಯನ ಕೃಪೆಯಿಂದ

ಎಂಬ ಸೇಸೆನುಡಿಯಿಂದಾಗಿ ಈ ಹಾಡಿಗೆ ಮಂಗಳಸ್ವರೂಪ ಬಂದಿದೆ.

ಲಕ್ಷ್ಮೀಕಲ್ಯಾಣದಲ್ಲಿ ಸುರವಿಗೆ ಸಮುದ್ರಮಥನವು ವಿವರವಾಗಿ ಬಂದಿದೆ.

ಶರಧಿಯ ಭರದೊಳು ಮಥಿಸುತಿರೆ
ಸಿರಿಯುದಿಸಿದುದನು ಈಕ್ಷಿಸುತ
ದುರುಳರು ಕಾಮಿಸಿ ತರಹರಿಸಲು ಕಂಡು
ಸುರರೊಂದುಪಾಯವ ವರ್ತಿಸಲು

ಆ ಉಪಾಯವೆಂದರೆ ಲಕ್ಷ್ಮಿಯು ಹೂವಿನ ಮಾಲೆಯ ಸಹಿತವಾಗಿ ಹೊರಟು 'ತಾ ಮನ ಮೆಚ್ಚಿದ ಪುರುಷನನ್ನು ವರಿಸಲಿ' ಎಂಬುದಾಗಿತ್ತು. ಆಕೆ ವಿನೋದ ಪೂರ್ವಕವಾಗಿ ಮುಂಬಂದು ಮೊದಲೇ ಮನದಲ್ಲಿ ನಿರ್ಣಯಿಸಿದಂತೆ ಪನ್ನಗಶಯನನಿಗೆ ಮಾಲೆ ತೊಡಿಸುತ್ತಾಳೆ. ಈ ನಿಮಿತ್ತಮಾಡಿಕೊಂಡು ದಾಸರು ಶ್ರೀಹರಿಯ ಹತ್ತವತಾರಗಳನ್ನು ಒಂದೊಂದಾಗಿ ವರ್ಣಿಸುತ್ತಾರೆ. (೧೯ರಿಂದ ೨೬)

ದಶವಿಧರೂಪನ ವಶವಾದಳು ದೇವಿ
ಅಸುರ ಸಂತತಿಗೆಲ್ಲ ವಿಷವೀಯೆ
ಶಶಿಧರ ಕಂಠದಿ ಧರಿಸಿದ ಸುರರಿಗೆ
ಕುಶಲದಿ ಅಮೃತವು ಸೇರಿದುದು

ಅಲ್ಲಿಂದ ಮದುವೆಯ ಸಮಾರಂಭದ ರಮಣೀಯ ವರ್ಣನೆ. ವಧೂವರರಿಬ್ಬರೂ ಮಂಡಿಸಿದ ಕಾಲಕ್ಕೆ ನೆರೆದ ನಾರಿಯರು ಶ್ರೀಹರಿಯ ಒಂದೊಂದು ಗುಣಗಳನ್ನು ಸ್ತುತಿಸುವ ಹಾಡು ಹೇಳುತ್ತಾರೆ.

ಮೂರು ಲೋಕದೊಳುಳ್ಳ ಮೂಲ ಮೃತ್ಯುವನೆಲ್ಲ
ಹಾರಿಸಿ ಗೆದ್ದನು ಹರಿಯೆಂದು
ನಾರಿಯರೆಲ್ಲರು ಹಾಡುತ ಪೊಗಳುತ
ಸೂರೆಗೊಂಡರು ಕಣು ಮನದಿ

ಶೃಂಗಾರವಾಗಿಹ ಮಂಗಳ ಮಹಿಮನು
ಅಂಗನೆ ಲಕ್ಷುಮಿಯು ಒಪ್ಪಿರಲು
ಹೆಂಗಳೆಲ್ಲರು ಬಂದು ಮಂಗಳಾರತಿ ಎತ್ತಿ
ಅಂಗಜನಯ್ಯನ ಪಾಡಿದರು.

ನವದಂಪತಿಗಳಿಗೆ ಉಡುಗೊರೆ ಸಲ್ಲಿಸುವ ವಿಷಯ ಇಲ್ಲಿಯೂ ವಿವರವಾಗಿ ಬಂದಿದೆ;

ನಾರಿಯ ಮೈಯೊಳು ಸೇರುವಾಭರಣವ
ವಾರಿಜನಾಭನ ತರಿಸೆಂದು
ವಾರಿಜನೇತ್ರಗೆ ಪೇಳಲಾಕ್ಷಣ ಕು–
ಬೇರನ ಮೊಗವನು ನೋಡಿದನು

ಮನಕೆ ಬೇಕಾಗಿಹ ಧನಕನಕಾಭರಣವ
ಧನಪನು ಇತ್ತನು ಉಚಿತದಲಿ

ಅಷ್ಟದಿಕ್ಪಾಲಕರು ಕೊಟ್ಟರು ಉಡುಗೊರೆ
ಪಟ್ಟೆ ಪೀತಾಂಬರ ವಸನಗಳ
ಶಿಷ್ಟರಾಗಿಹ ಋಷಿಪತ್ನಿಯರ್ವೆರಸಿಯೆ
ಸೃಷ್ಟಿಯ ಮಾತೆಗೆ ತೊಡಿಸಿದರು

ಇದಾದ ಮೇಲೆ ಶ್ರೀಹರಿಗೆ ಎಣ್ಣೆಮಜ್ಜನ. ಈ ಮಜ್ಜನ ವಿಷಯದಲ್ಲಿ ಕೃಷ್ಣದಾಸರಿಗೆ ಅತೀವ ಉತ್ಸಾಹವೆಂದು ತೋರುತ್ತದೆ. ಅವರ 'ಸ್ವಾಮಿ ವೆಂಕಟರಮಣ

ಭೂಮಿಪಾಲಕದೇವ' ಎಂಬ ಕೀರ್ತನೆಯಲ್ಲಿ ಇದೇ ಮಹಾಲಕ್ಷ್ಮಿ ಕೊಲ್ಹಾಪುರದಿಂದ ಬಂದು ಶ್ರೀನಿವಾಸನಿಗೆ ಮಜ್ಜನ ಗೈಯುವುದು ಅಷ್ಟೆ ಉತ್ಸಾಹಪೂರ್ಣವಾಗಿ ವರ್ಣಿತವಾಗಿದೆ.

ಅಷ್ಟದಿಕ್ಪಾಲಕರ ಪಟ್ಟದ ರಾಣಿಯರು
ಕುಟ್ಟಿದರರಿಷಿಣ ಚೂರ್ಣವನು
ಬಟ್ಟಲ ಪರಿಮಳದೆಣ್ಣೆಯ ಗೂಡಿಸಿ
ಕೊಟ್ಟರು ದೇವಿಯ ಹಸ್ತದಲಿ.

ಶಂಖಚಕ್ರವು ಗದಾಪದ್ಮವು ಒಪ್ಪುವ
ಬಿಂಕದ ಹಸ್ತವು ತಾರೆನುತಾ
ಶಂಕಿಸಿ ಮನದೊಳು ವೆಂಕಟರಾಯಗೆ
ಕುಂಕುಮದೆಣ್ಣೆಯ ತಿಮುರಿದಳು

ಈ ಮದುವೆಯ ಸಂಭ್ರಮ ಒಂದಲ್ಲ, ನಾಲ್ಕು ದಿನಗಳವರೆಗೆ ನಡೆಯುತ್ತದೆ. ಐದನೆಯ ದಿನ ಬೀಳ್ಕೊಡುವ ಸಮಾರಂಭ.

ಧಾರೆ ಚತುರ್ಥಿ ನಾಗೋಲೆ ಸಹವಾಗಿ
ಆಯಿತು ಐದನೆ ದಿವಸದಲಿ
ವಾರಿಜನಾಭನು ವಾರಿಧಿಯನು ಕಂಡು
ಊರಿಗೆ ಪೋಗುವೆನೆಂದೆನಲು
ಚನ್ನಿಗರಾಯನೆ ನಿನ್ನಯ ಮಗಳನು
ಇನ್ನೊಂದು ಘಳಿಗೆಯ ಬಿಡಲಾರೆ

ಎಂದೆನಲು ವಾರಿಧಿಯರಸನು ಇಲ್ಲಿಯೇ 'ಉರಗನ ಬೆನ್ನೊಳು ಒರಗಿರು ನೀನೆನ್ನಲು' ಶ್ರೀಹರಿಯು

ಮನೆಯೊಳು ಅಳಿಯನು ಎನಿಸಿಯೆ ದಿನವಿರೆ
ತನಗದು ಕಷ್ಟವು!

ಎಂದು ಲೌಕಿಕರೀತ್ಯಾ ನುಡಿಯುತ್ತಾನೆ. ಆದರೂ ಕ್ಷೀರಸಾಗರದಲ್ಲಿ ಶೇಷಶಾಯಿಯಾಗಿ ಲಕ್ಷ್ಮೀದೇವಿಯೊಡನೆ ವಿರಮಿಸುತ್ತಾನೆ. ಆದರೆ ಕ್ರಮೇಣ 'ಮೆಲ್ಲಗೆ ಗಿರಿಯೊಳು ತೋರಿದ'. ಕೃಷ್ಣದಾಸರು ಯಾವ ವಿಷಯವಿದ್ದರೂ ಅದನ್ನು ತಿರುಪತಿಯ ತಿಮ್ಮಪ್ಪಗೆ ಜೋಡಿಸಿಯೇ ಬಿಡುತ್ತಾರೆ. ಇಲ್ಲಿಗೆ ಬಂದ ಮೇಲೆ ಸ್ವಾಮಿ ಪುಷ್ಕರಣಿಯ ತೀರವೆ ಉದಧಿಯಾಗುತ್ತದೆ. ಆಗ–

ವೇದವು ಬಂದುದು ಶಾಸ್ತ್ರವು ನಲಿದುದು
ಆದಿನಾರಾಯಣ ಪರ್ವತದಿ

ಕೊನೆಯಲ್ಲಿ ಫಲಶ್ರುತಿಯ ನುಡಿಯಿದೆ:

ಪಕ್ಷಿವಾಹನನು ಆ ಮಹಾಲಕ್ಷ್ಮಿಯ
ಸಾಕ್ಷಾತ್ ವರಿಸಿದ ಕಥೆಯನು
ಲಕ್ಷಣ ಯುಕ್ತದಿ ಹೇಳಿದ ಜನರಿಗೆ
ಅಕ್ಷಯವಾಗಿಯೆ ತೋರುವುದು

ಮೇಲಪ್ಪ ಫಲಗಳ ಪಾಲಿಪ ಶ್ರೀಹರಿ
ಬಾಲ ಸಂತಾನವು ಸೌಭಾಗ್ಯ
ಲೀಲೆಯಿಂದಲಿ ಇತ್ತು ಮೂಲರೂಪವನೆಲ್ಲ
ಕಾಲದಿ ತೋರುವ ಭಕ್ತರಿಗೆ

ಲಕ್ಷ್ಮೀಕಲ್ಯಾಣವು ನಿಜಕ್ಕೂ ಒಂದು ರಸಸ್ಯಂದಿಯಾದ ಕಥನಕಾವ್ಯ. ಸುಲಭಗ್ರಾಹ್ಯವಾದ ಈ ಕೃತಿಯನ್ನು ಹಾಗೇನೇ ಓದಿದರೂ ಮುದವನ್ನುಂಟು ಮಾಡುವುದು.

## ಕೃಷ್ಣದಾಸರ ತಿರುಪತಿ ಯಾತ್ರೆ

ಇಂದಿನ ದಿನಗಳಲ್ಲಿ ತಿರುಪತಿ ಯಾತ್ರೆ ಯಾತ್ರೆಯೇ ಅಲ್ಲ ಎನ್ನುವಷ್ಟು ಸುಲಭದ ಮಾತಾಗಿದೆ. ದುಡ್ಡು ಕೊಟ್ಟರೆ ವಾಹನ ಸೌಕರ್ಯ, ದರ್ಶನ ಸೌಭಾಗ್ಯ ಎಲ್ಲವೂ ನೀರು ಕುಡಿದಷ್ಟು ಸಹಜ–ಸುಲಭ. ಮೂರುನೂರು ವರ್ಷಗಳ

ಹಿಂದೆ ಕೃಷ್ಣದಾಸರ ಕಾಲಕ್ಕೆ ಕಾಲ್ನಡಿಗೆಯಿಂದ ಹೋಗಬೇಕು. ಒಂದೆರಡಲ್ಲ ೨೦ ದಿನಗಳ ಪ್ರವಾಸ. (ಹಾಗೆ ಅವರೇ ಹೇಳಿದ್ದಾರೆ.) ಕಳ್ಳಕಾಕರ ಭಯ. ಆದ್ದರಿಂದ ಹಲವಾರು ಜನ ಪರಿಷೆಯಾಗಿ ಹೊರಡಬೇಕು. ಹೇಳಬಹುದಾದ ಒಂದು ಅನುಕೂಲವೆಂದರೆ ಅತೀ ಉದ್ದವಾದ ಕ್ಯೂ ಇರುತ್ತಿದ್ದಿಲ್ಲ ಅಲ್ಲದೆ ಆರಾಮವಾಗಿ ದೇವರ ದರ್ಶನ ಮಾಡಬಹುದಿತ್ತು.

ಕೃಷ್ಣದಾಸರ ಪರಿವಾರವು ಹೊರಡುವ ಮುಂಚೆ ಮನೆಯಲ್ಲಿ ಬ್ರಾಹ್ಮಣ ಭೋಜನ ಮಾಡಿಸಲಾಯಿತು. 'ಕಳ್ಳಕಾಕರು ಇಲ್ಲದ ಹಾಗೆ ಎಳ್ಳಷ್ಟು ನೋವುಗಳು ಆಗದ ಹಾಗೆ ಗೋವಿಂದ ಗೋವಿಂದ ಎಂದು ಕರೆವುತ್ತ, ಒಂದಾಗಿ ಜನರೆಲ್ಲ ನೊಂದವರನು ಸರಿಸಿ ಹಿಂದಣದವರನ್ನು ಮುಂದಕ್ಕೆ ಒಡಗೊಂಡು' ಈ ಪರಿಷೆ ಸಾಗುತ್ತದೆ. ಅಲ್ಲಲ್ಲಿ ಊಟದ ವ್ಯವಸ್ಥೆ ಆಗಬೇಕಲ್ಲ. ಅದಕ್ಕಾಗಿ ಚೆಂಬು ಸರಿಗೆ ತಪ್ಪಲೆಯು ಸವುಟು ಮುಂತಾದ ಪಾತ್ರೆ - ಪರಡಿಗಳನ್ನು ತೆಗೆದುಕೊಂಡೇ ಇದ್ದಾರೆ.

ತೋಪು ತೋಪುಗಳಲ್ಲಿ ತಾಪವ ಕಳಕೊಂಡು
ಕಾಪಥವಾಗದೆ ಅಡಿಗೆಯನುಂಡು
ಪಾಪನಾಶನನನ್ನು ನೆನೆವುತ್ತ ಮನದೊಳು

ದಯಾನಿಧಿ ಕರೆದೊಯ್ದು ಪಯಣದ ಮೇಲೆ
ಅಹಿಮಯವಾಗಿಹ ಗಿರಿಯ ಕಂಡು

ಗೋವಿಂದರಾಜನ ಪುರದ ಬಾಗಿಲೊಳು
ಗೋವಿಂದಯೆನುತಲೆ ಕೂಗುತ್ತ ನಿಲಲು

ಮರುದಿನ ಉದಯಕಾಲದಲ್ಲಿ ಹೊರಟವರು ಕಾಲಭೈರವಗೆ ಬೆಲ್ಲದ ನೀರನ್ನು ಅರ್ಪಿಸುತ್ತಾರೆ:

ಗೋಪುರ ಕಂಡಾಗ ಆದಷ್ಟು ವಂದಿಸಿ
ಪಾಪನಾಶನ ಪುಣ್ಯ ಲೇಪನವಾಗಿಯೆ
ಶ್ರೀಪತಿ ನಿನ್ನನು ಕಾಣಬೇಕೆನುತ

ಕಾಮಿತಾರ್ಥವನೀಯಬೇಕೆಮಗೆಂದು ಸು-
ಪ್ರೇಮದಿ ಕಟ್ಟಿದ ಮುಡುಪನೆ ತಂದು
ಒಪ್ಪಿಸಿ ಮುಡಪಿನ ಹಣವನ್ನು ಪಾದಕ್ಕೆ
ಇಷ್ಟ ಸಂಕಲ್ಪವನೆಲ್ಲ ಬಿನ್ನವಿಸೆ.

ಈ ಮುಡುಪಿನ ಹಣವನ್ನು ಪೂರ್ತಿಯಾಗಿ ಒಪ್ಪಿಸಬೇಕು. ಅದಕ್ಕೆ ದಾಸರು ಎಚ್ಚರದ ಮಾತೊಂದನ್ನು ಹೇಳ್ತಾರೆ.

ವೆಚ್ಚಕೆ ಬೇಕಾದ್ದು ಇಟ್ಟು ಕೈಯೊಳಗೆ
ಹೆಚ್ಚಾದ ಹಣವನ್ನು ಸ್ವಾಮಿಯ ವೊಳಗೆ
ಮುಚ್ಚುಮರೆಯ ಮಾಡಿ ಇಟ್ಟರೆ ಬೆಳಿಗ್ಗೆ
ಹುಚ್ಚುದೋರುವ ತಿಮ್ಮರಾಯನು ಘಳಿಗೆ

ಇದಾದ ಮೇಲೆ ಮರುಪಯಣ:

ಅಪ್ಪಣೆ ಊರಿಗೆ ಎನುತ ಕೈ ಮುಗಿದು
ಅಪ್ಪ ತಿಮ್ಮಪ್ಪನ ಬೇಡಿಯೆ ಕೊಳುತ
ತಪ್ಪದೆ ಇನ್ನೊಂದು ದರುಶನವೆಮಗೆ
ಒಪ್ಪದಿ ಕೊಡಬೇಕು ಎಂದು ಪ್ರಾರ್ಥಿಸುತ

ಬೆಟ್ಟವ ಇಳಿಯುತ್ತ ಶಿಷ್ಟ ಸಂತೋಷದಿ
ಪಟ್ಟಣಕಾಗಿಯೆ ಬಂದುದು ಪರಿಷೆ
ಬಿಟ್ಟಿ ಬಿಡಾರಕ್ಕೆ ಕಟ್ಟಿದ ಬಾಡಿಗೆ
ಕೊಟ್ಟು-

ಇನ್ನು ಊರ ಕಡೆಗೆ ತಿರುಗಬೇಕು. ಮಧ್ಯೆ ಗೋವಿಂದರಾಜ ಪಟ್ಟಣದ ಬಾಜಾರದಲ್ಲಿ ಒಳ್ಳೆಯ ಗಾಜಿನ ಬಳೆಗಳನ್ನು ಮತ್ತು ಪೂಜೆಗೆ ಬೇಕಾದ ಪ್ರತಿಮೆಗಳನ್ನು ವ್ಯಾಜ್ಯವ ಮಾಡದೆ ಕೊಳ್ಳುತ್ತಾರೆ.

ಊರು ಕಡೆ ಮುಖ ಮಾಡಿದರೋ ಇಲ್ಲವೆ ಅಲ್ಲಿಯ ಚಿಂತೆ ಮೊದಲಾಗುತ್ತದೆ. ದಾರಿ ನಡೆವಾಗ-

ಹಿಂದಣದವರನ್ನು ಒಂದೊಂದು ಬೈವುತ್ತ
ಬಿಡದಿರಿ ಹಿಂದಕ್ಕೆ ಉಳಿದವರನು ಕ್ಷಣ
ತಡೆಯಿರಿ ಒಡಗೊಂಡು ಪೋಗುವ ನಾವು
ಸಿಡುಕಿನ ಮಾತುಗಳೇಕೆ ನಿಷ್ಠುರವು

ಎನ್ನುತ್ತ ಊರನ್ನು ತಲುಪುತ್ತಾರೆ.

ಒದಗಿದ, ಪಯಣದೊಳೊಂದಾಗಿ ಬಂದುದು
ಉದಯವಾದನು ರವಿ ಇಪ್ಪತ್ತು ಬಾರಿ
ಮದುವೆ ಹೋದವರಂತೆ ಪದುಮನಾಭನ ಯಾತ್ರೆ
ಮುದದಿಂದ ಮಾಡಿಯೆ ಬಂದೆವೆನುತ

ಇದಿರುಗೊಂಬರೆ ಬಂದ ಸದನದಾ ಬಳಗಕ್ಕೆ
ಅದನೆಲ್ಲ ಹೇಳುತ್ತ ಸಂತೋಷದೊಳಗೆ

ಇದಾದ ಮೇಲೆ ತಂದಿದ್ದ ತಿರುಪತಿ ಪ್ರಸಾದದ ನೆಪದಿಂದ ದ್ವಿಜವೃಂದಕ್ಕೆ ಭೋಜನವ್ಯವಸ್ಥೆಯಾಗಬೇಕು:

ಆಗಲೆ ಬೇಕಾದ ಸಾಮಾನು ತರಿಸಿ
ಓಗರ ರಚಿಸುವ ಬ್ರಾಹ್ಮಣರ ಕರೆಸಿ.

ಉಡುಪಿಯ ಪರಿಸರದಲ್ಲಿ ಅಡಿಗೆಯ ವೃತ್ತಿಯ ಬ್ರಾಹ್ಮಣರು ಆಗಲೂ ಇದ್ದರು!

ಈ ಕೃತಿಯ ಕಡೆಯ ಭಾಗದಲ್ಲಿ (ಅದರಂತೆ ಸುರುವಿಗೂ) ಓರ್ವ ದಾಸರ ಪ್ರಸ್ತಾಪ ಬರುತ್ತದೆ.

ಸ್ಥಿರವಾರ ದಿವಸದಿ ಕರೆತಂದು ದಾಸರ
ಕರೆದು ಭೂಸುರರನ್ನು ಎರೆದು ಮೃಷ್ಟಾನ್ನವ
ಹರಕೆಯ ಧರಿಸುತ್ತ ಹೊರಡುವ ಪರಿಯ

ಮರಳಿ ಬಂದ ಮೇಲೆ–

ಮಂ ದವಾಸರದೊಳು ಹರಿದಿವಸವ ಮಾಡಿ
ಚಂದವಾಗಿಯೆ ದ್ವಿಜವೃಂದಕಿಕ್ಕಿದರೆ
ತಂದ ಪ್ರಸಾದವು ತೀರ್ಥವು ಜನರಿಗೆ
ಓೀಗೆಂದು ದಾಸರು ಹೇಳಿಯೆ ಹೋಗಲು

ಬ್ರಾಹ್ಮಣರಿಗೆ ಭೋಜನ ವ್ಯವಸ್ಥೆಯಾಯಿತು. ಆಗ

ದಾಸರ ಮೈಯನು ಬಿಟ್ಟು ಗೋವಿಂದನು
ವಾಸವಾದನು ಉಂಬ ಭೂಸುರರೊಳಗೆ

ಎಂಬ ಅಪರಿಚಿತ ಸನ್ನಿವೇಶ ಪ್ರಸ್ತಾವಗೊಂಡಿದೆ. ಕೊನೆಯಲ್ಲಿ ಪರಮಾತ್ಮನ ವಿವಿಧ ಅವತಾರಗಳನ್ನು ನೆನೆದು ಈ ರೀತಿ ವರ್ಣಿಸಿದ್ದಾರೆ.

ಜಲಚರರೂಪನ ಕುಲಗಿರಿಯನು ತಾಳ್ದ
ಚೆಲುವ ವರಾಹನ ಕರೆದು ಪಾಡಿದರು
ವಾರಿಧಿಯನು ಕಟ್ಟಿ ಚೋರನೆಂದೆನಿಸಿದ
ಮೇರೆದಪ್ಪಿದವನ ಕರೆದು ಪಾಡಿದರು
ವಾರುವವನು ಏರಿ ಧೀರನೆಂದೆನಿಸಿದ
ಈರೈದು ರೂಪನ ಕರೆದು ಪಾಡಿದರು.

೫೮ ನುಡಿಗಳುಳ್ಳ ಈ ಸಾಂಗತ್ಯಕೃತಿಯು ಕನ್ನಡದ ಪ್ರಥಮ ಪ್ರವಾಸ ಕಥನ ವೆನ್ನೋಣವೆ? ಪುರಾಣದಲ್ಲಿ ಅರ್ಜುನ ಮುಂತಾದವರ ಯಾತ್ರಾದಿಗಳವಿಷಯ ಬಂದಿದೆ. ಅವು ನಾವು ತಿಳಿದಿರುವ ಪ್ರವಾಸೀಯ ಕಥನಗಳಲ್ಲ. ಇತ್ತ ಶ್ರೀ ವಾದಿರಾಜರ ತೀರ್ಥಪ್ರಬಂಧವೆಂಬ ಶುದ್ಧಾಂಗವಾದ ಪ್ರವಾಸಕಥನ ಇದೆ. ಅದಿರುವುದು ಸಂಸ್ಕೃತದಲ್ಲಿ. ಕನ್ನಡದಲ್ಲಿ ಮಾತ್ರ ಕಥನ ರೂಪದ ಯಾತ್ರೆಯ ಕೃತಿ–ಇದೇ ಮೊದಲಿನದು.

## ಉಡುಪಿ ಶ್ರೀಕೃಷ್ಣ ಚರಿತ್ರೆ

ಪಾವಂಜೆ ಗುರುರಾಯರು ತಮ್ಮ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದ ವತಿಯಿಂದ ಮೇಲಣ ಕೃತಿಯನ್ನು ೧೯೧೪ರಲ್ಲಿ ಪ್ರಕಟಮಾಡಿದರು. ಮೂರು ಸಂಧಿಗಳಿರುವ ಈ ಕೃತಿಯು ಸಾಂಗತ್ಯದಲ್ಲಿದೆ. (ಪಾವಂಜೆಯವರು ಇದನ್ನು

ದಂಡಾಕಾರ ವೃತ್ತ ಎಂದು ಕರೆದಿದ್ದಾರೆ). ಕವಿಯ ಮುದ್ರಿಕೆಯನ್ನು ವರಹತಿಮ್ಮಪ್ಪ ಎಂದು ತಪ್ಪಾಗಿ ತಿಳಿದಿದ್ದಾರೆ. ಅವರಿಗೆ ಒಂದೇ ಪ್ರತಿ ಸಿಕ್ಕಿದುದಂತೆ, ಅದನ್ನೆ ಕನ್ನಡ ಪಂಡಿತ ಎಂ. ಶಿವರಾಮಯ್ಯನವರಿಂದ ತಿದ್ದಿಸಿದ್ದಾರೆ. ಇದಿಷ್ಟು ಈ ಹಿಂದಿನ ಪ್ರಕಟನೆಯ ಹಿನ್ನೆಲೆ. ಉಡುಪಿಯ ಶ್ರೀಕೃಷ್ಣನಿಗೆ ಸಂಬಂಧಿಸಿದ ಈ ಜನಮೆಚ್ಚಿನ ಈ ಕೃತಿಯು ಆ ಮುಂದೆ ಬೆಳಕಿಗೆ ಬಾರದಿದ್ದುದು ದುರದೃಷ್ಟದ ಸಂಗತಿಯಾಗಿದೆ.

ಮೊದಲನೆಯ ಸಂಧಿಯು 'ಶರಣೂ ಶ್ರೀ ಗುರುಮಧ್ವರಾಯ ನಿಮ್ಮಡಿಗಳ್ಗೆ' ಎಂದು ಪ್ರಾರಂಭವಾಗುತ್ತದೆ. ಈ ಗುರು ಒಬ್ಬ ವೈದ್ಯರು !

ತುಳುವ ದೇಶಾಶುದ್ಧವೆಂಬ ಬಾಯೊಳಗಿದ್ದ
ಹುಳುವಾ ತೆಗೆವ ಸುಪ್ರಸಿದ್ಧ
ತಿಳಿದು ಮಾಡಿದ ಮದ್ದ ಕೊಳಲಿಹ ಪರಸಾಧ್ಯ
ಗುರುಮಧ್ವಮುನಿ ಬದ್ಧ ವೈದ್ಯ

ಅದಕ್ಕಾಗಿ ಶ್ರೀಕೃಷ್ಣನನ್ನು ಕರೆಸಿಕೊಂಡ. ಇದರಿಂದಾಗಿ ಉಡುಪಿಯು ವೈಕುಂಠವಾಯಿತು ಮಧ್ವಸರೋವರವು ವಿರಜಾನದಿಯಾಯ್ತು. ದೇವ ಬಂದದ್ದು ಹೇಗೆ? ದೇವಕಿ ಹಡಗಾಗಿ ತನ್ನ ಬಸಿರಿನಲ್ಲಿ ಶ್ರೀಕೃಷ್ಣನನ್ನು ಇರಿಸಿಕೊಂಡಿದ್ದಳು. ಆಗ ಮಧ್ವರಾಯ ಮಥುರೆಯ ಪುರದಿಂದ ವಸುದೇವನಂತೆ ಎತ್ತಿ ತಂದ! ಇದೊಂದು ರಮ್ಯವಾದ ರೂಪಕ.

ಅನಂತರ ಮಧ್ವರಾಯರು ಅಷ್ಟಯತಿಗಳನ್ನು ಗೊತ್ತುಪಡಿಸಿ ಅವರು ಒಬ್ಬೊಬ್ಬರಿಗೆ ಒಂದೊಂದು ಪ್ರತಿಮೆಯನ್ನು ಕೊಟ್ಟದ್ದರ ವಿವರಣೆ ಬಂದಿದೆ. ಈ ಎಂಟರ ವೈಶಿಷ್ಟ್ಯ ಇಂತು ಬಂದಿದೆ:

ಅಷ್ಟಮದವತಾರದಷ್ಟಮ ಗರ್ಭದೊ
ಳಷ್ಟಮಿ ದಿನ ರಾತ್ರಿಯುದಿಸಿ
ಅಷ್ಟಮ ಸ್ತ್ರೀಯರನಾಳಿದ ಕೃಷ್ಣನ
ಅಷ್ಟಮ ಯತಿಗಳು ಭಜಿಸಿ

ಶ್ರೀ ವಾದಿರಾಜರು ಗೊತ್ತುಪಡಿಸಿದ ಎರಡು ವರ್ಷದ ಪರ್ಯಾಯ ಕ್ರಮದ ಉಲ್ಲೇಖವಿದ್ದು, ಅದನ್ನು ರೂಢಿಸಿದ ಅವರ ಹೆಸರಿಲ್ಲ. ಆಗಿನ ಪೂಜಾವೈಭವ ಹೇಳಲೂ ಸಲ್ಲ:

ಪರಿಯಾಯದೊಳ್ ಕೃಷ್ಣನರ್ಚನೆ ಸೇರ್ಪುದು
ಕುರುಡನಕ್ಷಿಯ ಪಡೆದಂತೆ
ಎರಡು ವತ್ಸರವಿಂತು ಪೂಜಾಯಾಗವ ಮಾಡಿ
ಪೂರಟು ಪೋಪಾಗಕ್ಕು ಚಿಂತೆ

ಭಕ್ತರಾದವರು ಶ್ರೀಕೃಷ್ಣನನ್ನು–
ಮೂರು ಕಾಲವು ಪೋಗಿ ಸಾರಿ ನೋಡಲು ದಿವ್ಯ
ಮೂರುತಿಯನು ಕೈಯ ಮುಗಿದೂ
ಸಾರೂಪ್ಯವೆನಿಸುವ ಪದವಿಯನಿಲ್ಲಿಯೆ
ತೋರ್ಪನು ಭವಭಯ ಹರಿದೂ

ಅಲ್ಲಿ ಸನ್ನಿಧಿಯೊಳು ನಿಲ್ಲದೆ ತನ್ನ ಗೃಹ
ದಲ್ಲಿಯೆ ಧ್ಯಾನಿಪ ಜನಕೆ
ಸಲ್ಲಿಸುವನು ಸಿರಿವಲ್ಲಭ ಸಾಲೋಕ್ಯ
ಪಲ್ಲಟಿಸದೆ ಭವ ಭವಕೆ

ಇಲ್ಲಿಂದ ಮುಂದೆ ಶ್ರೀಕೃಷ್ಣನಿಗೆ ಸಮರ್ಪಿಸುವ ಪೂಜೆಯ ವಿಧಾನಗಳನ್ನು ಕೊಟ್ಟಿದ್ದಾರೆ. ಅವು ೯ ವಿಧ. ನಿರ್ಮಾಲ್ಯ, ವಿಸರ್ಜನ, ಉದಯಕಾಲದ ಪೂಜೆ, ಗೋಪೂಜೆ, ಪಂಚಾಮೃತ, ಉದ್ವಾರ್ಚನೆ, ತೀರ್ಥಸ್ನಾನ, ಅಲಂಕಾರ, ಮಹಾನೈವೇದ್ಯ, ಮಂಗಳಾರತಿ ಮತ್ತು ಪ್ರದಕ್ಷಿಣ ನಮಸ್ಕಾರಾದಿಗಳು.

ಬಂದು ವಂದಿಸಿ ಮತ್ತೆ ದಂಡೋದಕವನಿತ್ತು
ವೃಂದಾವನಕ್ಕೆ ನಡೆತಂದು
ಚಂದದಿಂದರ್ಚಿಸುತ್ತಂದು ಗೋಗ್ರಾಸವ
ಮುಂದಿಟ್ಟು ನಿರ್ಮಾಲ್ಯ ತಂದು.

ಇದಾದ ಮೇಲೆ ಬ್ರಾಹ್ಮಣರು ಇತರರ ಸುಗ್ರಾಸ ಭೋಜನ ಖಾದ್ಯ ಪದಾರ್ಥಗಳ ವರ್ಣನೆಯನ್ನು ಕೊಡುತ್ತಾರೆ. ಭರ್ಜರಿ ಊಟ:

ಕೃಷ್ಣಪ್ರಸಾದಕ್ಕೆ ಹೊಟ್ಟೆ ಸಾಲದೆಯರ್ಧ
ಬಿಟ್ಟಿಷ್ಟರೆಲ್ಲಾಸೆಯಳಿದು.

ಯತ್ ರೋಚತೇ ತದ್ಗ್ರಾಹ್ಯಂ ಯನ್ನರೋಚತೆ ತತ್ ತ್ಯಾಜ್ಯಂ! ಎಂಬುದನ್ನು ಸಾರ್ಥಕ ಗೊಳಿಸುತ್ತಾರೆ.

ಇದರಂತೆ ರಾತ್ರಿಯ ಕಾಲದ ಪೂಜೆ, ಸಂಗೀತ ನರ್ತನಾದಿಗಳ ವಿಷಯ-ವನ್ನೂ ವರ್ಣಿಸಿದ್ದಾರೆಂಬಲ್ಲಿಗೆ ಪ್ರಥಮ ಸಂಧಿ ಮುಗಿಯುತ್ತವೆ (೨೨ ಪದಗಳು).

ಎರಡನೆಯ ಸಂಧಿಯಲ್ಲಿ ಮಕರ ಸಂಕ್ರಾಂತಿಯ ನಿಮಿತ್ತ ನಡೆಯುವ ವಿಧವಿಧ ಉತ್ಸವಗಳನ್ನು ವರ್ಣಿಸಿದ್ದಾರೆ. 'ಉಪಾಯಣಕಾರು ದಿವಸಕ್ಕೆ ಮೊದಲಾಗಿ' ಉತ್ಸವ ಕಾರ್ಯ ಆರಂಭವಾಗುವುದಂತೆ. ಉತ್ತರದೇಶದ ಭಕ್ತರೆಲ್ಲ ಕಪ್ಪಕಾಣಿಕೆ ಕೊಂಡು ಬರತೊಡಗುತ್ತಾರೆ. ಈ ದೇವಕಿಪುತ್ರ ಪಲ್ಲಕ್ಕಿಯೇರಿ ಹೊರಬರುತ್ತಾನೆ. ಬಾಣಬಿರುಸುಗಳು ಮೊಳಗುತ್ತವೆ. ಆ ಮುಂದೆ ರಥವನ್ನೇರುತ್ತಾನೆ ಕೃಷ್ಣ. ಅರ್ಜುನನ ನೆನಪಾಗುತ್ತದೆ. ಆದರೆ-

ಯುದ್ಧವಲ್ಲಿದು ಮುನಿ ಮಧ್ವ ಸದ್ಭಾಮಂ
ತಿದ್ದಿದ ಸೇವೆಯೆಂದರಿದೂ

ಯತಿವರ್ಯರೆಲ್ಲರು ರಥಕಾಣಿಕೆಯನಿತ್ತು
ಸ್ತುತಿಗೈಯೆ ಭಕ್ತಿಯಿಂದಾಗ
ಸಂತೋಷದಿಂ ಗೋಪಾಕಾಂತನ ತೇರಾಗ
ಗೊಂತಾದಲ್ಲಿಗೆ ಬಂದು ನಿಲಲೂ

ರಥೋತ್ಸವ ಮುಗಿದ ಮೇಲೆ -

ನಂದನ ಕಂದನು ಮಂದಿರದೊಳಗಂದು
ಬಂದಾಗ ಬಿಳಿಬಟ್ಟೆಯನ್ನು

ತಂದು ನಿವಾಳಿಸೆ ಚಂದಿಂದಹಿತಲ್ಪ
ಕಂದೇರಿದಂ.......

ಮರುದಿನದ ಕೃಷ್ಣದಾಸರು ಶ್ರೀಕೃಷ್ಣನ ಅವಭೃತಸ್ನಾನದ ವೈಭವವನ್ನು ವರ್ಣಿಸುತ್ತಾರೆ. ಈ ಸಂಧಿಯ ಕೊನೆಯಲ್ಲಿ ಇದೊಂದು ಕುತೂಹಲ ಹುಟ್ಟಿಸುವ ನುಡಿಯಿದೆ :

ಹರದಾರಿಯೊಂದರೊಳ್ ಶರಧಿಯಿಪ್ಪುದರಿಂದೆ
ಇರವು ಮೂದೇವರಿಂಗಕ್ಕು
ಗುರುಬ್ರಹ್ಮ ಗುರುವಿಷ್ಣು ಗುರುಮಹದೇವೇಶ
ಗುರುವೆಂದೆಯೆರಗೆ ಭಯಪೋಕು.

ಸೃಷ್ಟಿ – ಸ್ಥಿತಿ – ಲಯ ಕರ್ತರಾದ ತ್ರಿಮೂರ್ತಿಗಳನ್ನು ಗುರುವೆಂದು ಎರಗಬೇಕು ಎನ್ನುವ ಮಾತೇನೂ ಸರಿಯೆ. ಆದರೆ ಒಂದೇ ಹರದಾರಿಯ ಅಂತರದಲ್ಲಿರುವ ಶರಧಿಗೂ ತ್ರಿಮೂರ್ತಿಗಳಿಗೂ ಏಕೆ ತಳಕು ಹಾಕಿರುವರೋ! ಸಮುದ್ರ ಮಥನ ಕಾಲದಲ್ಲಿ ವಿಷ್ಣುವು ಲಕ್ಷ್ಮಿಯನ್ನು ಪಡೆದು ಕ್ಷೀರಸಾಗರಶಾಯಿಯಾದ; ಶಿವನು ಅಲ್ಲಿಯೆ ಇದ್ದು ವಿಷವನ್ನು ಕುಡಿದ; ಎಂಬ ಸಂದರ್ಭಗಳನ್ನು ಸಮುದ್ರನಿಗೆ ಹೊಂದಿಸಿಕೊಳ್ಳ ಬಹುದು. ಆದರೆ ಬ್ರಹ್ಮ? ಶರಧಿಯಿಂದಾಗಿ ಮೂದೇವರೆನ್ನುವುದು ವಿಚಾರಾರ್ಹ ಅಂಶವಾಗಿದೆ.

ಎರಡನೆಯ ಸಂಧಿಯಲ್ಲಿ ಮಕರ ಸಂಕ್ರಮಣದ ಆರು ದಿನಗಳ ವರ್ಣನೆ ಬಂದದ್ದನ್ನು ನೋಡಿದೆವು. ಅದು ಮುಗಿದೊಡನೆಯೇ ಪರ್ಯಾಯೋತ್ಸವ ಬರುತ್ತದೆ ( ಎರಡು ವರ್ಷಕ್ಕೊಮ್ಮೆ ). ಈ ಸಂದರ್ಭದಲ್ಲಿ ತಮ್ಮ ಗುರುವನ್ನು ಮತ್ತೆ ತಂದಿದ್ದಾರೆ.

ಹಗಲನುತ್ಸಹದಿಂದ ಬಗೆಯಿಂದೆ ಗುರುರಾಯ
ಸೊಗಸಾದ ಸನ್ನಾಹಗಳನ್ನೂ
ಮಿಗಿಲಾಗಿ ರಾತ್ರಿಯೆ ಮಾಳ್ಪಂತೆ ಜನಕೆಲ್ಲ
ಬಗೆಯನೆಲ್ಲವ ತಿಳುಹಿದನೂ

ಆರು ತಾಸಿನೊಳೆಲ್ಲ ಕೇರಿಕೇರಿಗಳು ಶೃಂ
ಗಾರವಾಗಲು ಮುನಿರಾಯ
ವಾರಿಜನಾಭನ ಅವಭೃತ ಸಮಯವ
ಸಾರಿಸೆ ಭಕ್ತಸಮೂಹ

ಪರಿ ಪರಿ ಸೇವೆಯ ರಚಿಸಿರ್ದ ಭಕ್ತರ್ಗೆ ತರತರ ಪ್ರಸಾದವಿತ್ತು
ಗುರುರಾಯ ಧರಿಸಿದ ಶೇಷವಸ್ತ್ರವ ತಂದು ಕರದೀವರಾಗಲೆನಿತ್ತೊ

ಇವು ಮೂರು ಪದ್ಯಗಳಲ್ಲಿ ಬರುವ ಅವರ ಗುರುಗಳು ಯತಿಗಳೇ ಇದ್ದರು, ಮತ್ತು ಪರ್ಯಾಯಸ್ಥರೂ ಆಗಿದ್ದರೆನಿಸುವುದು. (ಇವರು ಕೃಷ್ಣಾಪುರ ಮಠದ ವಿದ್ಯಾನಿಧಿತೀರ್ಥರು. ೨೮ ನೆಯ (?) ಪೀಠಾಧಿಪತಿಗಳು).

ಆಗಿನ ಕಾಲದ ಉಡುಪಿಯಲ್ಲಿಯ ರಥಬೀದಿ, ಅದರಂತೆ, ಚೌಕಿ ಊಟದ ಪ್ರಸ್ತಾಪವೂ ಬಂದಿದೆ.

ಅಂಗಡಿ ಬೀದಿಗಳ್ ಶೃಂಗಾರವಾಗಿರೆ
ಸಂಗಡಿಸಿರೆ ಸಾಲ್ಪಂತೆಯೊಳ
ಕಂಗಳ್ಗೆ ಚೆಲುವಾಗೆ ಬಗೆಬಗೆಯೊಡವೆಯ
ವಿಂಗಡಿಸಿಟ್ಟ ಪಂತಿಗಳು.

ಸಂತೋಷದಿಂ ಚೌಕಿಪಂಕ್ತಿಯೊಳೆಡೆ ಮಾಡ
ಲಂತರಂತರವಾಗಿ ಬಡಿಸಿ
ನಿಂತಿಹ ಜನರನ್ನು ಸಂತೈಸಿ ಕುಳ್ಳಿರಿಸಿ ವಾ
ರಂತೆ ಗಂಧಾಕ್ಷತೆಯ ಕೊಡಿಸಿ

ಆ ಪರ್ಯಾಯದ ಆರಂಭದಿಂದ ವರ್ಷವಿಡೀ ನಡೆಯುವ ಕೆಲವು ಉತ್ಸವಗಳನ್ನು ಮೂರನೆಯ ಸಂಧಿಯಲ್ಲಿ ಕೊಟ್ಟಿದ್ದಾರೆ.

ಮೊದಲಿಗೆ ವಸಂತೋತ್ಸವ:

ದಶಮಿ ದ್ವಾದಶಿಯೊಳು ಕುಸುಮನಾಭನ ದಿಂಡು
ಸಸಿನವಾಗಿಯ ಹೊರಡುವುದೂ

ಬಿಸಿಲ ಬೇಗೆಗೆ ಮೈಯನೊಸರಿಸಿ ವಸವಂತ
ನಸುತಂಪನೊರಸುತ್ತ ಬಹುದು

ಪ್ರತಿದಿನ ವಸವಂತ ಋತುವಿನ ಕಾಲದೊ–
ಳತಿಶಯ ಪೂಜೆಯಾಗುವುದು.

*ರಾಜಾಂಗಣದೊಳೆಂದು ರಾಜೀಪ ಮಂಟಪ
ಸೋಜಿಗವಾದ ಚಪ್ಪರವೂ
ಗುಡಕಲಂಕಿದ ನೀರ್ಪಚ್ಚಡಿ ಕೋಸಂಬ್‌ರಿ ನನೆ
ಗಡಲೆ ತೆಂಗಿನ ಹೋಳ ಬೆರಸಿ

ಶ್ರೀಕೃಷ್ಣನಿಗೆ ಅರ್ಪಿಸಿಯಾದ ಮೇಲೆ ಆ 'ಬೆಲ್ಲ ನೀರನ್ನು' ನೆರೆದ ಜನರಿಗೆ ವಿನಿಯೋಗಿಸುತ್ತಾರೆ. ಈ 'ವಸವಂತ' ಪೂಜೆಯ ಕಾಲಕ್ಕೆ ಏನೇನೆಲ್ಲ ಖಾದ್ಯ, ಫಲಗಳ ನೈವೇದ್ಯ ಸಂಭ್ರಮ !

ಹುರಿಯರಳು ಹುರಿಗಡಲೆ ಹುರಿದೆಳ್ಳು ಹುರಿದೆಸರ
ಹುರಿಗೇರು ಬೀಜಂಗಳೊಟ್ಟಿ
ಹಿರಿದು ಬೆಲ್ಲವನಿಕ್ಕಿ ಪರಿಪಾಕವಂ ಮಾಡಿ
ಥರಥರದುಂಡೆಯ ಕಟ್ಟಿ.

ಪರ್ಚಿದ ಕಾಯಿಕ್ಕಿ ಮಾಡಿದ ಕಡಲೆಯ
ಪಚ್ಚೆಯ ಹೆಸರ ಬೇಳೆಗಳಾ
ಸ್ವಚ್ಛ ಕೋಸಂಬರಿ ಮಾವು ಸೌತೆಯ ಕಾಯ
ಪಚ್ಚಡಿ ಸೊಗಸಿತ್ತು ಬಹಳ

ಬಕ್ಕೆಯ ಹಲಸು ಸುಸ್ವಾದ ಗೋವೆಯ ಮಾವು
ಕುಕ್ಕೆಯೊಳ್ಳುಲಿದ ಹೆಬ್ಬಲಸೂ
ಚೊಕ್ಕವಾದಿಬ್ಬಡಿಲು ಬೆಳಲೆ ದಾಳಿಂಬವು
ಪಕ್ವಾಗಿರ್ದನಿಯನಾನಸೂ.

* ಶ್ರೀವಾದಿರಾಜರ ಕಾಲದಿಂದ ಇದ್ದ ಈ ಅಂಗಣವು ಅವರ ಹೆಸರಿನ ಉತ್ತರ ಪದವನ್ನಿಟ್ಟು ಕೊಂಡಿದ್ದಿತು. ಉಡುಪಿ ಕಡೆಯ ಹುಲ್ಲು ಚಪ್ಪರದಿಂದ ಕೂಡಿದ್ದ ಈ ಅಂಗಣವನ್ನೇ ೧೫ ವರ್ಷಗಳ ಹಿಂದೆ ಪೇಜಾವರ ಶ್ರೀಗಳವರು ಭವ್ಯ ಸಭಾಂಗಣವನ್ನಾಗಿ ಮಾಡಿದರು.

ಅಂತೂ 'ಕಣ್ಣಿಗಸಾಧ್ಯವು ಬಣ್ಣಿಸಲಳವಲ್ಲ ತಣ್ಣನೆಯಕ್ಕೆಲ್ಲ ಹೃದಯಾ' ಎಂದು ಮುಗಿಸುತ್ತಾರೆ ಆಮೇಲಿನದು ಪಾನಕ ವಿನಿಯೋಗ:

ಹೊಸಬೆಲ್ಲಮಂ ಕಿಮುಳ್ಳಿಸಿ ರಾಮಲಕ್ಷ್ಮಣ
ಹೆಸರಿನ ಕೊಪ್ಪರಿಗೆಯೊಳು
ಕುಶಲದಿಂದ ಮೂವತ್ತು ಮಣದಿಂದಲಂಗು ಮಾ
ಡಿಸಿದ ಪಾನಕವೊಪ್ಪುತಿರಲೂ

ಬಡಸಿರ್ದ ನಾನಾ ಪಚ್ಚಡಿ ಕಜ್ಜಾಯವ ಮೆದ್ದು
ಗಡಿಗೆ ಪಾನಕ ಕೊಂಡು ಕುಡಿದೂ
ಒಡಲ ತುಂಬಿಸಿ ಮನೆಕಡೆಗೆ ಬಂಧುಗಳ ಕೂ
ಡೊಡಗೊಂಡು ಪೋಪರು ನಡೆದೂ

ಅನಂತರ ಬರುವ ಆಷಾಢ ಮಾಸದೊಳಾಶುದ್ಧ ದಶಮಿ ಎಂದರೆ 'ರುದ್ರ ಸಂಖ್ಯೆಯ ದಿನ ಮಾಧ್ವರಾದವರಿಂಗೆ ಮುದ್ರಾಧಾರಣ ಮಾಳ್ಪ ಗೋತ್ತು' ಆಗ ಅವರು ತಮ್ಮ ಭುಜಹಸ್ತಂಗಳನೊಡ್ಡೆ ಮುದ್ರೆಯೊತ್ತುವ ಮುನಿಯಂತು.

ಅಲ್ಲಿಂದ ಯತಿಗಳ ಚಾತುರ್ಮಾಸ ವ್ರತ. ಅದರೊಟ್ಟಿಗೇ ಬರುವ ಗೋಕುಲಾಷ್ಟಮಿ. ಆ ದಿನ ಬಾಲಕೃಷ್ಣನಿಗೆ ವಿಶೇಷ ಅಭಿಷೇಕ ಸ್ನಾನ–'ಮಣ ಹಾಲು ಮಣಮೊಸರ್ ಮಣತುಪ್ಪ ಮಣಜೇನು ಮಣಸಕ್ಕರೆಯನು ತಂದಿರಿಸಿ'! ಸ್ವಾಮಿಗಳು ಪೂಜೆಗೈದು ಉಪವಾಸವಿರುತ್ತಾರೆ. ಎಲ್ಲರೂ ತಿಳಿದಿರುವಂತೆ ಲಡ್ಡುಗೆ, ಕರಜಿ, ಚಕ್ಕುಳಿ, ಚುಗುಳಿ ಮುಂತಾದ ಖಾದ್ಯಗಳ ಸಮರ್ಪಣೆಯಾಗುತ್ತದೆ. ಅವುಗಳ ವರ್ಣನೆಯನ್ನು ಮನುದುಂಬಿ ವಿಸ್ತಾರದಿಂದ ಹೇಳುವುದು ಕೃಷ್ಣದಾಸರ ವೈಶಿಷ್ಟ್ಯವೆನ್ನಬಹುದು.

ಆ ಮುಂದಿನ ಕಾಲದ ಉತ್ಸವಗಳನ್ನು–ಎಂದರೆ ಗಣೇಶ ಚತುರ್ಥಿ ನವರಾತ್ರಿಯ ಕಾಲದ ಸರಸ್ವತೀ ಪೂಜೆ (ಪೂಜೆ ಮುಗಿದ ಮೇಲೆ ಅವಳು 'ಕಾಶ್ಮೀರಕಾಗಿ ಪೋಗುವಳಂತೆ') ದೀಪಾವಳಿ, ಅನಂತರದ ಹೇಮಂತ ಋತುವಿನಲ್ಲಿ ಕಾಣಿಸಿಕೊಂಡ ಧನುರ್ಮಾಸ. ಆಗಿನ ವಿಶಿಷ್ಟ ನೈವೇದ್ಯ ಪದಾರ್ಥಗಳ ವರ್ಣನೆ ಬರುವಲ್ಲಿಗೆ ಶ್ರೀಕೃಷ್ಣನ ಉತ್ಸವಾದಿಗಳ ಚರಿತ್ರೆ ಮುಗಿಯುತ್ತದೆ.

ತಮ್ಮ ನೆಚ್ಚಿನ ಉಡುಪಿಯನ್ನು ಭೂವೈಕುಂಠವೆಂಬುದಾಗಿ ಮೇಲಿಂದ ಮೇಲೆ ಬಣ್ಣಿಸುತ್ತಾರೆ, ಕೃಷ್ಣದಾಸರು.

ಗುರುರಾಯ ತಾ ಬೊಮ್ಮ ಸಿರಿಯರಸ ಶ್ರೀಕೃಷ್ಣ
ಹರನು ಸಹಿತಿಹ ಪುರವೂ
ವರ ಸತ್ಯವೈಕುಂಠ ಸಿರಿ ಕೈಲಾಸಗಳೆಂಬ
ಪುರಗಳಲ್ಲಿಯೆ ಕಣ್ಗೋಚರವೂ

ಭೂಮಿಗೆ ವೈಕುಂಠವಾಗಿಹ ಸ್ಥಳದೊಳು
ಸ್ವಾಮಿಯ ನೋಡದ ನರರೂ
ಆ ಮಹಾವೈಕುಂಠದಲ್ಲಿರ್ಪ ಸಿರಿಯನ
ತಾಮಸರೇನಾ ನೋಡುವರು.

ಈ ರೀತಿ ಸಾಲೋಕ್ಯ ಸಾರೂಪ್ಯ ಸಾಮಿಪ್ಯ
ಸಾಯುಜ್ಯ ವೆಂಬುದ ತೋರ್ಪ
ಧಾರುಣಿ ವೈಕುಂಠವಾಗಿಹ ಸ್ಥಳದೊಳು
ವಾರಿಜನೇತ್ರ ನಿಂದಿರ್ಪ.

ಕ್ಷಿತಿಯೇ ವೈಕುಂಠ ಶ್ರೀಪತಿಯೆ ಶ್ರೀಕೃಷ್ಣನು.

ವರಾಹ ತಿಮ್ಮಪ್ಪರ ಶ್ರೀಕೃಷ್ಣಚರಿತ್ರೆಯು ನಡುಗನ್ನಡ ಕಾಲದ ಒಂದು ವಿಶಿಷ್ಟ ಕಿರುಕಾವ್ಯ. ಉಡುಪಿಯ ಶ್ರೀಕೃಷ್ಣನನ್ನು ಅತ್ಯಂತ ಉತ್ಸಾಹದಿಂದ ಕಂಡು, ಅವನಿಗೆ ಸಲ್ಲುವ ವಿವಿಧ ಪೂಜಾ ವಿಶೇಷಗಳನ್ನು, ವಿಶೇಷತಃ, ಬಗೆಬಗೆಯ ಆರೋಗಣೆಯನ್ನು ವರ್ಣಿಸಿದ್ದಾರೆ. ಅಲ್ಲಲ್ಲಿ ಸೊಗಸಾದ ಕವಿಕಲ್ಪನೆಗಳೂ ಇವೆ:

ಮಾಸಿದಂಬರವಂ ಮೂಡಲ ಹೆಣ್ಣು ಹೊದ್ದಿರೆ
ಕೇಸುರೆಗಣ್ಣಿಂದಲಿನನೂ
ಸಾಸಿರ ಕರದಿಂದ ಪೂ ಕೈದಟ್ಟಿ ಬಿಡುವಂತೆ
ಸೂಸಿದ ಕಿರಣಂಗಳನ್ನೂ

ಇನ್ನೊಂದು ವಿಶೇಷವೆಂದರೆ ಕವನಿಸುವಲ್ಲಿ ಸಹಜವೆಂಬಂತೆ ವ್ಯಕ್ತವಾಗಿರುವ ಶಬ್ದಸೌಷ್ಠವ ಮತ್ತು ಅನುಪ್ರಾಸ. ಸುಮಾರು ೨೫೦ ಸಾಂಗತ್ಯದ ನುಡಿಗಳಲ್ಲಿರುವ ಈ ಕಾವ್ಯ ಯಾರನ್ನೂ ರುಚಿಸಬಲ್ಲುದು.

## ೩. ಶ್ರೀ ಸದಾನಂದರು

ನವ ಮಂಗಳೂರು-ಪಣಂಬೂರು ವಿಶಾಲವಾದ ಬಂದರು. ಇದರಿಂದ ಪ್ರಸಿದ್ಧಿ ಪಡೆದ ಈ ಊರು ಹಿಂದೆ ನಂದನೇಶ್ವರ ಮತ್ತು ಶ್ರೀ ವಿಷ್ಣುಮೂರ್ತಿ ಇವೆರಡು ದೇವಾಲಯಗಳಿಂದಾಗಿ ಒಂದು ಅಗ್ರಹಾರವಾಗಿದ್ದಿತು. ಪಣಂಬೂರು ನಂದನೇಶ್ವರ ದೇವಾಲಯದ ಪಡುಬದಿಯ ಕಡಲತಡಿಯಲ್ಲಿ 'ಬಕುಲವನ' ಎಂಬ ಕುಟೀರದಲ್ಲಿದ್ದ ಶಿವ ಬ್ರಾಹ್ಮಣರಾದ ಪಂಡಿತ ಶಿವಪ್ಪಯ್ಯ (ಶಿವಸಿದ್ಧ ಶರ್ಮ) ಮತ್ತು ಸೌ. ಸತ್ಯವತಿಯಲ್ಲಿ ಈ ದಂಪತಿಗಳ ಸುಪುತ್ರರಾಗಿ ಕ್ರಿ.ಶ.೧೮೭೬ ರಲ್ಲಿ ಶ್ರೀನಿವಾಸಯ್ಯನವರು ಜನಿಸಿದರು. ಈ ಮನೆತನದವರು ಗೋಪಾಲಕೃಷ್ಣ ದೇವರ ಉಪಾಸಕರು. ಶ್ರೀನಿವಾಸಯ್ಯನವರಲ್ಲಿ ದೈವಭಕ್ತಿ ಎಳವೆಯಿಂದಲೇ ಬೆಳೆದುಬಂದಿತ್ತು. ಪಣಂಬೂರು ಯಕ್ಷಗಾನ ಮಂಡಳಿಗೆ ಸೇರಿಕೊಂಡು ವಿಶೇಷವಾಗಿ ಹಾಸ್ಯಗಾರರೆಂದೇ ಹೆಸರು ಪಡೆದರು. ಕುಮಾರವ್ಯಾಸಭಾರತ, ಜೈಮಿನಿಭಾರತ, ರಾಮಾಯಣ, ಚಾಟುವಿಠಲನ ಭಾಗವತ, ಆದಿತ್ಯಪುರಾಣ, ಶುಕಸಪ್ತತಿ, ಶೇಷರಾಮಾಯಣ, ತುರಂಗಭಾರತ ಮುಂತಾದ ಹಳಗನ್ನಡ ಕಾವ್ಯಗಳನ್ನು ಅಭ್ಯಾಸ ಮಾಡಿದ್ದರು. ಇವುಗಳ ವಾಚನ ಮತ್ತು ಪ್ರವಚನಗಳನ್ನು ಮಾಡುತ್ತಾ ಸುತ್ತಲಿನ ಜನರ ಆದರಾಭಿಮಾನಗಳಿಗೆ ಪಾತ್ರರಾಗಿದ್ದರು. ಕನ್ನಡ ಮತ್ತು ತುಳು ಭಾಷೆಗಳಲ್ಲಿ ಅವರು ಅರ್ಥ ಹೇಳುವ ರೀತಿ ಮಾರ್ಮಿಕವಾಗಿತ್ತೆಂದು ಇಂದಿಗೂ ಕೆಲವರು ನೆನಪಿಸಿಕೊಳ್ಳುವುದುಂಟು.

ಶ್ರೀನಿವಾಸಯ್ಯನವರು ಸಂಸಾರವಂದಿಗರಾದರೂ ತುಸು ವಿರಾಗಿಯೂ ಆಗಿದ್ದರು. ಧಾರ್ಮಿಕ ಭಾವನೆ, ಸರಳ ಜೀವನ, ಸಾರ್ವಜನಿಕ ಸೇವೆ, ಇವುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಶ್ರದ್ಧಾಳುಗಳಾಗಿ ಬಾಳಿದ ಶ್ರೀನಿವಾಸಯ್ಯನವರು ಒಬ್ಬ ಆದರ್ಶ ಗುರುವಾಗಿದ್ದರು.

ದಾಸರ ಹಾಡುಗಳ ಮಾದರಿಯಲ್ಲಿ ಹಲವಾರು ಹಾಡುಗಳನ್ನು ಕನ್ನಡ ಮತ್ತು ತುಳು ಭಾಷೆಗಳಲ್ಲಿ ಬರೆದಿದ್ದರು. ಇವರ ಹಾಡುಗಳಲ್ಲಿ ಸದಾನಂದ ಮತ್ತು ಶ್ರೀನಿವಾಸ ಎಂಬ ಅಂಕಿತಗಳಿವೆ. ದಿ.ಕೆ.ವೆಂಕಟರಾಯಾಚಾರ್ಯ, ಸುರತ್ಕಲ್ಲು, ಸದಾನಂದರ ಕೃತಿಗಳನ್ನು ಮೂರು ಭಾಗಗಳಾಗಿ ಪ್ರಕಟಮಾಡಿದ್ದರು. ಅವುಗಳಲ್ಲಿ ಮೂರನೆಯದು ತುಳು ಹಾಡುಗಳು. (ಇದರಲ್ಲಿ ೯ ಹಾಡುಗಳಿವೆ), ಕೀರ್ತನಾಮೃತ ಎಂಬ ಹೆಸರಿನಲ್ಲಿ ಈ ಕಿರುಹೊತ್ತಗೆಗಳು ಪ್ರಕಟವಾಗಿವೆ. ಈಚೆಗೆ ಶ್ರೀರಾಮ ಕೋಟಿಯಾನ್ ಇವರು ಮುಂಬಯಿಯಲ್ಲಿ ಗುರು ಸದಾನಂದರ ನಾಲ್ಕನೆಯ ಸಂಪುಟವನ್ನು ಹೊರ ತಂದಿದ್ದಾರೆ. ಇದರ ಹೆಸರೂ 'ಕೀರ್ತನಾಮೃತ' (ನಾಲ್ಕನೆಯ ಸಂಪುಟ) ವೆಂದೇ ಇದೆ. ಇವರ ಈ ಮೂರು ಕನ್ನಡ ಕೀರ್ತನೆಗಳ ಸಂಗ್ರಹಗಳಲ್ಲಿ ಪುನರಾವರ್ತಿತವಾದ ಕೀರ್ತನೆಗಳನ್ನು ಬಿಟ್ಟು ಉಳಿದ ಒಟ್ಟು ೨೯ ಕೀರ್ತನೆಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಜಿಲ್ಲೆಯ ಹಲವಾರು ಹರಿದಾಸರಲ್ಲಿ ಇವರೂ ಒಬ್ಬರು. ದೈವ ಭಕ್ತರೂ ಸದಾಚಾರ ಸಂಪನ್ನರೂ ಆದ ಶ್ರೀನಿವಾಸಯ್ಯ ೧೯೪೬ ರಲ್ಲಿ ದೈವಾಧೀನರಾದರು. ಇವರ ಹಾಡುಗಳಲ್ಲಿ ಪೌರಾಣಿಕ ಘಟನೆಗಳು, ಲೋಕನೀತಿ, ದೈವಭಕ್ತಿ ಮುಂತಾದವು ಸರಳವಾಗಿ ಬಂದಿವೆ. ಹಿಂದಿನ ಪ್ರಸಿದ್ಧ ದಾಸವರೇಣ್ಯರ ಪ್ರಭಾವ ದಟ್ಟವಾಗಿ ಇವರ ಕೃತಿಗಳಲ್ಲಿ ಹಣಿಕಿ ಹಾಕಿದೆ.

ಮೊದಲಿಗೆ ಇವರ ಅಂಕಿತೆ ಬಗ್ಗೆ ತುಸು ವಿವರಣೆ. "ಸದಾನಂದ" ಎಂಬುದು "ಗುರು ಸದಾನಂದ" "ಸದಾನಂದ ಗುರು" ಎಂದೂ ವಿಸ್ತಾರಗೊಳ್ಳಬಹುದು. ಆದರೆ ಕೆಲವು ಹಾಡುಗಳಲ್ಲಿ "ಶ್ರೀನಿವಾಸ" ಕಾಣಿಸಿಕೊಳ್ಳುತ್ತದೆ. ಇದೊಂದೇ ಶಬ್ದದ ಮುದ್ರಿಕೆ ಇರುವ ಬೇರಾವ ದಾಸರೂ ಇದ್ದಂತಿಲ್ಲ. ಇನ್ನೊಂದು ಅಂಶವೆಂದರೆ "ಸದಾನಂದ" "ಶ್ರೀನಿವಾಸ" ಎರಡೂ ಅಂಕಿತಗಳು ಒಂದೇ ಹಾಡಿನಲ್ಲಿ ಬಂದಿವೆ.

"ಶಿವ ಬ್ರಾಹ್ಮಣ" ಸದರಿನಲ್ಲೇ ಬರುವ ಸದಾನಂದರ ಒಟ್ಟಿನ ೭೦ ಹಾಡುಗಳಲ್ಲಿ ಶ್ರೀಹರಿ-ಲಕ್ಷ್ಮಿಯರನ್ನು ಕುರಿತವು ಅರ್ಧದಷ್ಟು ಇವೆ. ಆದರೆ ಹನುಮಂತನನ್ನು ಸ್ತುತಿಸುವ ಭರದಲ್ಲಿ "ಆತ್ಮನು ನೀನಂತರಾತ್ಮನು ನೀನೆ

ಮುಕ್ತಿದಾಯಕ ಪರಮಾತ್ಮನು ನೀನೆ ಪ್ರಾಣೋಪಾನ ವ್ಯಾನೋದಾನ ನೀನೆ" ಎಂಬುದರ ಮೇಲೆ ಅವನ ಮತಪಂಥೀಯ ನಿಲುವನ್ನು ಗ್ರಹಿಸಬಹುದು. ಇನ್ನೊಂದು ಕೀರ್ತನೆಯಲ್ಲಿ (ಸಂ.೧೬೮):

"ಹರಿ – ಹರನೆನ್ನುವ ಭೇದ ಸಾರವರಿಯದೆ ಮಾಳ್ಪರು ತಮ್ಮೊಳು ವಾದ; ಗುರುವಿದ್ದರೆಲ್ಲ ನಿರ್ವಾದ ಎಂದು ನುಡಿದಿದ್ದಾರೆ.

ಅವರ ಈ ಗುರುವಿನ ಪ್ರಸಕ್ತಿ ಮಹತ್ವದ್ದು. ಗುರುನಮನ, ಗುರುಸಾಕ್ಷಾತ್ಕಾರ ಇವುಗಳಿಗೆ ವಿಶೇಷ ಗಮನ ಕೊಟ್ಟಿದ್ದಾರೆ, ತಮ್ಮ ರಚನೆಗಳಲ್ಲಿ.

ಗುರುವೆ ವಾಣೀಶ ಮದ್ಗುರುವೆ ಲಕ್ಷ್ಮೀಶ
ಗುರು ಪಾರ್ವತೀಶ ಸದ್ಗುರುವೆ ತ್ರೈಜಗದೀಶ.

ಮುಂದುವರಿದು–

– ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ ನೀನೆ
ದೇವರ ದೇವ ನಾ ನಿನ್ನೊಳಾದವ–

ಎಂದು ಅಪೇಕ್ಷೆಪಟ್ಟಿದ್ದಾರೆ.

ಸದಾನಂದ ವಿರಚಿತ ಬಾಲಕೃಷ್ಣನನ್ನು ಕುರಿತ ಹಾಡುಗಳಲ್ಲಿ ಕಲ್ಪಕತೆ ಚೆನ್ನಾಗಿ ಕೆಲಸ ಮಾಡಿದೆ. ಒಂದು ಹಾಡಿನಲ್ಲಿ (ಕೀ. ೧೩೪) ಗೋಪಿಯರು, ಕೃಷ್ಣನು ತಮ್ಮ ಮನೆಗಳಿಗೆ ಬಂದು ಹಾಲು ಮೊಸರು ಉಂಡರೆ ತಪ್ಪೇನಿಲ್ಲ. ಆದರೆ ತೆರವು ಮಾಡಿದ ಆ ಪಾತ್ರೆಯನ್ನು ಚೆಂಡಾಟಕ್ಕೆ ಬಳಸುತ್ತಾನೆ– ಎಂದು ದೂರುತ್ತಾರೆ!

ಬೇರೊಬ್ಬಳ ತಕರಾರಿಗೆ ಯಶೋದೆ ಹೇಳುತ್ತಾಳೆ.. (ಕೀ. ೧೫೦): "ಯಾಕೆ ಈ ತರಳನನ್ನು ದೂರುವಿರಿ? ಕರಗಳನ್ನು ಬಿಡುವಷ್ಟು ದೊಡ್ಡವನೇ ಅಲ್ಲ. ಒಂದು ಇಲಿಮರಿಯನ್ನು ಕಂಡರೂ ಅಂಜುತ್ತಾನೆ."

ಈ ಮುಂದಿನ ಒಂದು ವಿಚಾರಕ್ಕೆ ಏನೆನ್ನುವಿರಿ?

"ಉಚ್ಚೆ ಬಂದರೆ ಪೋರನು ನಮ್ಮನೆಯೊಳು ಕಚ್ಚೆ ಬಿಚ್ಚೋಡುವನು"

ಕೀ. ೧೫೨ ರಲ್ಲಿ ಬಂದ ಬಾಲಕೃಷ್ಣನ ಚಿತ್ರಣವು ಅವನ ಹಿರಿಮೆಯನ್ನು ನಿದರ್ಶಿಸುವಂತಹದು. ಯಥಾಪ್ರಕಾರ ಗೋಪಿಯರು ತಕರಾರು ಹೇಳಲು ಸಜ್ಜಾಗಿದ್ದಾರೆ. ಅವನು ತಪ್ಪಿಸಿಕೊಂಡು ಹೋದಾನು- ಎಂದು ಕೃಷ್ಣನನ್ನು ಕಟ್ಟಿ ಹಿಡಿದುಕೊಂಡಿದ್ದಾರೆ. ಅವನ ಬಗ್ಗೆ ಏನೇನು ದೂರು ಹೇಳಬೇಕೆಂದು ಮಾತಾಡಿಕೊಂಡಿದ್ದಾರೆ. ಯಶೋದೆಯ ಬಳಿ ಬರ್ತಾರೆ. ಆದರೇನು! ಕಟ್ಟಿ ಹಾಕಲಾದ ಕೃಷ್ಣ ಅವರ ಬಳಿ ಇಲ್ಲವೆ ಇಲ್ಲ! ಬದಲಾಗಿ ತೊಟ್ಟಿಲಲ್ಲಿ ನಿದ್ರಿಸುತ್ತಿದ್ದಾನೆ.

## ೪. ಶ್ರೀ ಬೆಳ್ಳೆ ದಾಸಪ್ಪಯ್ಯ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಾಸಸಾಹಿತ್ಯವನ್ನು ರಚಿಸಿದವರಲ್ಲಿ ಬೆಳ್ಳೆ ದಾಸಪ್ಪಯ್ಯನವರು ಒಬ್ಬರು. ಶಿವ ಬ್ರಾಹ್ಮಣ ಪಂಗಡಕ್ಕೆ ಸೇರಿದ ಇವರು ಪುಟ್ಟಣ್ಣಯ್ಯ ಮತ್ತು ಅಮ್ಮಕ್ಕ ಎಂಬ ದಂಪತಿಗಳಿಗೆ ತಾ. ೩೧-೮-೧೮೭೭ ರಲ್ಲಿ (೧೮೭೬ ಎಂದೂ ಕೆಲವರ ವಾದವಿದೆ) ಮಗನಾಗಿ ಜನಿಸಿದರು. ಊರು ಬೆಳ್ಳೆ ಗ್ರಾಮ. ಲೋವರ ಗ್ರೇಡ್ ತರಬೇತಿ ಪಡೆದು ಅಧ್ಯಾಪಕರಾಗಿ ತಾಲೂಕು ಬೋರ್ಡ್ ಪ್ರಾಥಮಿಕ ಶಾಲೆಯಲ್ಲಿ ಉದ್ಯೋಗಕ್ಕೆ ಸೇರಿದರು. ಇವರ ಹಿರಿಯರು ಕೆಮ್ತೂರು ಕುಟುಂಬಕ್ಕೆ ಸೇರಿದವರು.

ಪ್ರಾಥಮಿಕ ಶಾಲಾ ಅಧ್ಯಾಪಕರಾಗಿದ್ದರೂ ಹರಿಕಥೆ, ಯಕ್ಷಗಾನ, ತಾಳಮದ್ದಳೆ, ಪುರಾಣ ಪ್ರವಚನ, ಭಜನೆ ಮುಂತಾದ ಸಾರ್ವಜನಿಕ ಸಾಂಸ್ಕೃತಿಕ ಕಾರ್ಯ-ಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಮೂಡುಬೆಳ್ಳೆಯ ಚರ್ಚ್ ಶಾಲೆಯಲ್ಲಿ ಕೆಲವು ಕಾಲ ಮುಖ್ಯೋಪಾಧ್ಯಾಯರೂ ಆಗಿ ಕೆಲಸ ಮಾಡಿದ್ದರು.

ಮಡದಿ ಸೌ. ಪದ್ಮಾವತಿ, ಇವರಿಗೆ ಐವರು ಪುತ್ರರು, ಮೂವರು ಪುತ್ರಿಯರು. ಪಾವಂಜೆಯ ಜ್ಞಾನಶಕ್ತಿ ಸುಬ್ರಹ್ಮಣ್ಯನ ಆರಾಧಕರಾಗಿದ್ದರು. ಈ ದೇವಸ್ಥಾನ ಮತ್ತು ಸುಬ್ರಹ್ಮಣ್ಯ ಸಭೆಗಳ ಮೂಲಕ ಜನಸೇವೆಯನ್ನು ಮಾಡುತ್ತಾ

ಸಮಾಜದಲ್ಲಿ ಒಬ್ಬ ಗಣ್ಯ ವ್ಯಕ್ತಿಯಾಗಿದ್ದರು. ದಾಸಪ್ಪಯ್ಯನವರು ಗಣಿತ ಮತ್ತು ಭೂಗೋಳ ವಿಷಯಗಳಲ್ಲಿ ನುರಿತ ಅಧ್ಯಾಪಕರೆಂದು ಹೆಸರಾದವರು. ತುಂಬಾ ಚೆನ್ನಾಗಿ ಪಾಠ ಮಾಡುತ್ತಿದ್ದರೆಂದು ಅವರ ಶಿಷ್ಯರು ನೆನಪಿಸಿಕೊಳ್ಳುವುದುಂಟು.

ಭಜನೆಯಲ್ಲಿ ದಾಸರ ಹಾಡುಗಳನ್ನು ಹಾಡುತ್ತಿರುವುದರಿಂದ ಒಂದು ರೀತಿಯ ಆತ್ಮಾನಂದ ಪಡೆಯುತ್ತಿದ್ದರಂತೆ. ಹೀಗಾಗಿ ಕವಿತಾಶಕ್ತಿಯೂ ಇವರಿಗೆ ಒಲಿದು ಬಂದಿತ್ತು. ತಮ್ಮ ಕುಲದೇವತೆಯಾದ ಕುಮಾರಸ್ವಾಮಿ(ಸುಬ್ರಹ್ಮಣ್ಯ)ಯನ್ನು ಕುರಿತು ತಾವೇ ಪದ್ಯಗಳನ್ನು ರಚಿಸಿ ಹಾಡುತ್ತಿದ್ದರು. ತಮ್ಮ ಕೊನೆಗಾಲದಲ್ಲಿ ಸುಮಾರು ಇಪ್ಪತ್ತು ವರ್ಷಕಾಲ ವೈರಾಗ್ಯ ಹೊಂದಿ, ಆಗಾಗ ತಾವು ರಚಿಸಿದ ಹಾಡುಗಳನ್ನು ಹಾಡುತ್ತಾ ಮಕ್ಕಳು ಮೊಮ್ಮಕ್ಕಳಿಂದ ಹಾಡಿಸುತ್ತಾ ಸಂತಸಪಡುತ್ತಿದ್ದರು. ಈ ಹಾಡುಗಳು ತಾಳ ಲಯಬದ್ಧವಾಗಿರುವುದರಿಂದ ಹಾಡಿದಾಗಲೇ ಅದು ಭಾವಸ್ಪಂದವನ್ನುಂಟುಮಾಡುವಂತಿದೆ.

ದಾಸಪ್ಪಯ್ಯ ಚಿತ್ತೂರು ಪದ್ಮಿನಿಯ ಕತೆಯನ್ನು ಯಕ್ಷಗಾನ ಪ್ರಸಂಗ ರೂಪದಲ್ಲಿ ರಚಿಸಿದ್ದರು. ಇದರ ಮಂಗಲ ಪದ್ಯದಲ್ಲಿ –

ಮಂಗಲಂ ಪಾವಂಜೆ ಕ್ಷೇತ್ರದೊಳು ವಾಸಿಪಗೆ ।
ಮಂಗಲಂ ಭಕ್ತ ರಕ್ಷಕ ಗುಹನಿಗೆ ಮಂಗಲಂ ॥

ಎಂದಿದೆ. ಇದರ ಒಟ್ಟು ಪದ್ಯ ಸಂಖ್ಯೆ ೨೮೬.

ಇವರ ಹಾಡುಗಳಲ್ಲಿ ಪಾವಂಜೇಶ, ಪಾವಂಜೆಪುರದೀಶದಾಸ (ಸ್ವನಾಮಾಂಕಿತ) ಎಂಬಂತಹ ಅಂಕಿತವಿದೆ. ದಾಸಪ್ಪಯ್ಯನವರು ೧೯೫೬ ರಲ್ಲಿ ಪರಂಧಾಮವನ್ನೈದಿದರು. ಇವರ ಭಜನೆಯ ಪದ್ಯಗಳ ಸಂಗ್ರಹವೊಂದನ್ನು ಇವರ ಮಗ ಭುಜಂಗರಾಯರು ೧೯೬೨ ರಲ್ಲಿ ಮುದ್ರಿಸಿ 'ಭಜನೆಯ ಹಾಡುಗಳು' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದರು.

ಇಲ್ಲಿಯ ಹಾಡುಗಳನ್ನು ಬಿ. ಭುಜಂಗರಾವ್ ಪ್ರಕಟಿಸಿದ 'ಭಜನೆಯ ಹಾಡುಗಳು' ಸಂಕಲನದಿಂದ ಸಂಗ್ರಹಿಸಲಾಗಿದೆ. ಇದನ್ನು ನಮಗೆ ಒದಗಿಸಿದವರು ಬೆಳ್ಳೆ ದಾಸಪ್ಪಯ್ಯನವರ ಕುಟುಂಬದ ಸದಸ್ಯರು. 'ಸತ್ಸಂಗ ಸೇವಾ ಸಮಿತಿ,

ಹಳೆಯಂಗಡಿ (ದ.ಕ) ಇವರೂ ತುಂಬಾ ಸಹಾಯವನ್ನಿತ್ತಿದ್ದಾರೆ. ಇವರೆಲ್ಲರಿಗೂ ನಮ್ಮ ಕೃತಜ್ಞತೆಗಳು.

ದಾಸಪ್ಪಯ್ಯನವರ ಹಾಡುಗಳಲ್ಲಿ ಪ್ರಸಾದಗುಣ, ಪುರಾಣಪ್ರಜ್ಞೆ, ಸರಳವಾದ ಭಾವ, ಲಯಜ್ಞತೆ, ಇವು ಗಮನಿಸಬೇಕಾದ ಅಂಶಗಳು. ಇವರ ಹೆಚ್ಚಿನ ಹಾಡುಗಳು ಪಾವಂಜೆಯ ಷಣ್ಮುಖನ ಪರವಾಗಿಯೇ ಇರುವುದರಿಂದ ವೈವಿಧ್ಯ ಕಡಿಮೆ.

## ಕೃತಿಗಳು

ದಾಸಪ್ಪಯ್ಯನವರು ಶಿಕ್ಷಕರಾಗಿ ಬಹುಕಾಲ ಪಾವಂಜೆಯಲ್ಲಿ ನೆಲಸಿದ್ದರು. ಕ್ರಿ.ಶ.೧೯೨೦ ರಲ್ಲಿ ಜ್ಞಾನಶಕ್ತಿ ಸುಬ್ರಹ್ಮಣ್ಯ ದೇವಸ್ಥಾನವು ಅಲ್ಲಿ ಸ್ಥಾಪಿತವಾಯಿತು. ಹೇಗೂ ಸುಬ್ರಹ್ಮಣ್ಯ ಅವರ ಕುಲದೈವ. ಹೀಗಾಗಿ ಅವರು ರಚಿಸಿದ ಹಾಡುಗಳಲ್ಲಿ ಬಹುತರ ಎಲ್ಲವೂ ಅವನನ್ನು ಕುರಿತೇ ಇವೆ. ಅದು ಕಾರಣದಿಂದ ಅವರ ಕೃತಿ ರಚನೆ ಏಕಮುಖವಾದದ್ದು. ವಿಷಯದಲ್ಲಿ ವೈವಿಧ್ಯ ಕಡಿಮೆ. ಆದರೆ ಸುಬ್ರಹ್ಮಣ್ಯ ಅಥವಾ ಕಾರ್ತಿಕೇಯನನ್ನು ಸ್ತುತಿಸುವಲ್ಲಿ ಸ್ವೋಪಜ್ಞತೆಯನ್ನು ತಂದಿದ್ದಾರೆ. ಅವನನ್ನು ಕುರಿತ ಉದಯರಾಗದ ಹಾಡಿನಲ್ಲಿ (ಕೀ. ೧೯೭) ಅದನ್ನು ಕಾಣಬಹುದು.:

ಏಳಯ್ಯ ಕಾರ್ತಿಕೇಯ
ಮೂಡ ದಿಕ್ಕಿನಲ್ಲಿ ತಂಗಾಳಿ ಬೀಸುತ್ತಿಹುದು
ನಾಡಕೋಳಿಗಳೆಲ್ಲ ತಲೆಯೆತ್ತಿ ಸಂತಸದಿ
ಪಾಡುವವು ನಿನ್ನ ನಾಮಾವಳಿಯ ನೈದಿಲೆಯು
ಬಾಡುತಿದೆ ವಿರಹದಿಂದ. ರೂಢಿಯನು ಬೆಳಗಿಸುತ
ಮೂಡುತಿಹೆ ರವಿಯನ್ನು ನೋಡಿ ಭಯದಿಂದ ಹಿಂ–
ದೋಡುವುದು ಕತ್ತಲೆಯು ಕಾಡಹಕ್ಕಿಗಳೆಲ್ಲ ಗೂಡು ಬಿಟ್ಟೋಡುವವು.

ಪ್ರಕೃತಿ ರಮ್ಯವಾದ ಈ ಬೆಳಗಿನ ವರ್ಣನೆಯ ಅನಂತರ ದಾಸಪ್ಪಯ್ಯ ಕಾರ್ತಿಕೇಯನ ವಿವಿಧ ಸಾಹಸಗಳನ್ನು ಎಂದರೆ ಪದ್ಮಾಸುರ ಸಂಹಾರ ಮುಂತಾದ

ಅದರಂತೆ ಶಾಪಗ್ರಸ್ತ ಅದಿತಿಯ ಉದ್ಧಾರ ಇವನ್ನು ವರ್ಣಿಸಿದ್ದಾರೆ. ಮುಂದಿನ ಹಾಡುಗಳಲ್ಲಿಯೂ ಈ ಘಟನೆಗಳು ಪುನರುಕ್ತಿಗೊಂಡಿವೆ. ಕುಳಿತಲ್ಲಿ ನಿಂತಲ್ಲಿ ಕಾರ್ತಿಕೇಯನನ್ನೇ ನೆನೆಯುತ್ತಿದ್ದುದರ ಪರಿಣಾಮವಿದು. ಸುಬ್ರಹ್ಮಣ್ಯ ಬಾರೊ, ದಯತೋರು, ರಕ್ಷಿಸು, ಪಾಲಿಸು, ಪಾದಕ್ಕೆರಗುವೆ, ಮುಂತಾಗಿ ಅವನನ್ನು ಬೇಡಿಕೊಂಡಿದ್ದಾರೆ. 'ಆರ ಬೇಡುವೆನೊ ನಿನ್ನನ್ನು ಬಿಟ್ಟಿನ್ನಾರ ಕಾಡುವೆನೊ' ಎಂಬ ಆತ್ಮೀಯತೆಯನ್ನು ತೋರಿದ್ದಾರೆ. ದಾಸ ಜನರಲ್ಲಿ, ಇವರ ಹಾಗೆ ಒಂದೇ ದೈವತಕ್ಕೇ ತಮ್ಮ ಕೀರ್ತನ ರಚನೆಯ ಒಲವನ್ನು ತೋರಿದವರು ಬೇರಾರೂ ಇದ್ದಂತಿಲ್ಲ.

## ೫. ಶ್ರೀ ಗೋವಿಂದದಾಸರು

ಗೋವಿಂದದಾಸರು ೧೯೦೨ ಆಗಸ್ಟ್ ತಿಂಗಳಲ್ಲಿ ಉಡುಪಿ ತಾಲೂಕು ಕೊಕ್ಕರ್ಣೆ ಸಮೀಪದ ಮೈರ್ಮಾಡಿ ಎಂಬಲ್ಲಿ ಜನಿಸಿದರು. ಇವರ ತಂದೆ ವೆಂಕಟರಾಯ ಗೋಳಿಯವರು. ಗೋವಿಂದ ಗೋಳಿಯವರು ಕಲಿತದ್ದು ಬರೇ ಪ್ರಾಥಮಿಕ ಶಾಲೆಯ ೫ ನೆಯ ತರಗತಿಯವರೆಗೆ. ಆದರೆ ಅವರದು ಯಕ್ಷಗಾನದ ಅರ್ಥ ಹೇಳುವವರ ಮನೆತನ. ಹೀಗಾಗಿ ರಾಮಾಯಣ ಮಹಾಭಾರತದ ಕತೆಗಳು ಚೆನ್ನಾಗಿ ತಿಳಿದಿತ್ತು. ಅಲ್ಲದೆ ಹವ್ಯಾಸಿ ಅರ್ಥಧಾರಿಗಳಾಗಿಯೂ ಇದ್ದರು. ಹಳಗನ್ನಡ ಕಾವ್ಯಗಳ ವಾಚನವೂ ಇವರಿಗೆ ಕರಗತವಾಗಿತ್ತು. ಇವರು ಕೆಲವು ವರ್ಷ ಆ ಕಾಲದ ವಿದ್ಯಾಕೇಂದ್ರವೆನಿಸಿದ ಐಗಳ ಮಠದಲ್ಲಿ ಅಧ್ಯಾಪಕರಾಗಿ ದುಡಿದರು. ಅಲ್ಲದೆ ಅಧ್ಯಾಪನದಲ್ಲಿ ಒಳ್ಳೆಯ ಹೆಸರೂ ಇವರಿಗಿತ್ತು. ಆಗ ತಾಳ ಮದ್ದಳೆಯ ಕೂಟಗಳಲ್ಲಿ ಭಾಗವತರಾಗಿಯೂ ಅರ್ಥಧಾರಿಯಾಗಿಯೂ ಇವರು ಭಾಗವಹಿಸುತ್ತಿದ್ದರು. ಮೈರ್ಮಾಡಿಯ ಆಸುಪಾಸಿನಲ್ಲಿ ಒಳ್ಳೆಯ ನುರಿತ ಅಧ್ಯಾಪಕರೆಂಬ ಕೀರ್ತಿಯೂ ಇವರಿಗಿತ್ತು. ಇವರು ಸ್ಮಾರ್ತ ಬ್ರಾಹ್ಮಣರು.

ಇವರಿಗೆ ತಮ್ಮ ೨೬ನೆಯ ವಯಸ್ಸಿನಲ್ಲಿಯೆ ದೃಷ್ಟಿ ಮಂದವಾಗಿ ಏನೂ ಕಾಣಿಸುತ್ತಿದ್ದಿಲ್ಲ. ಆ ಕಾಲದಲ್ಲೇ ಹಲವಾರು ಹಾಡುಗಳನ್ನು ಬರೆದಿದ್ದರು. ಕನ್ನಡ ಮತ್ತು ತುಳು ಭಾಷೆಗಳಲ್ಲಿ ಇವರ ಹಾಡುಗಳು ತುಂಬ ಜನಪ್ರಿಯವಾಗಿದ್ದವು[೧].

೧. ಮಿತಾಕ್ಷರಿ ಭಾಷೆಯಲ್ಲೂ ಒಂದೆರಡು ಹಾಡುಗಳಿವೆ.

ಕಣ್ಣು ಏನೂ ಕಾಣಿಸದೆ ಹೋದಾಗ ಬೇರೆಯವರಿಂದ ಬರೆಯಿಸಿದ್ದೂ ಇದೆ. ಇವರು ೫೭ ವರ್ಷಕಾಲ ಬದುಕಿದ್ದರು. ೧೯೫೯ ರಲ್ಲಿ ಇಹಲೋಕದ ಯಾತ್ರೆಯನ್ನು ಮುಗಿಸಿದರು. (೧೨-೩-೧೯೫೯) ಇವರ ಮಕ್ಕಳು ಮತ್ತು ಕುಟುಂಬ ಈಗಲೂ ಮೈರ್ಮಾಡಿಯಲ್ಲಿದ್ದಾರೆ.

ಹೆಚ್ಚೇನೂ ಕಲಿಯದಿದ್ದರೂ ಕಾವ್ಯಕಲೆ ಇವರಿಗೆ ಸಹಜವಾಗಿಯೇ ಒಲಿದಿತ್ತು. ಇವರ ಹಾಡುಗಳಲ್ಲಿ ಪ್ರಸಾದಗುಣ, ನೇರವಾದ ಮಾತು, ಗೇಯಾಂಶ ತುಂಬ ಸೊಗಸಾಗಿದೆ. ಇವರು ತಮ್ಮ ಹಾಡುಗಳನ್ನು ಸಂಗ್ರಹಿಸಿ 'ಗೋವಿಂದದಾಸರ ಕೀರ್ತನೆಗಳು' ಎಂಬ ಹೆಸರಿನಲ್ಲಿ ಮೂರು ಭಾಗಗಳನ್ನು ಹೊರ ತಂದಿದ್ದಾರೆ. ಅವು ೧೯೩೭ರ ಸುಮಾರಿಗೆ ಉಡುಪಿಯ ತುಳುನಾಡು ಛಾಪಖಾನೆಯಲ್ಲಿ ಮುದ್ರಿತವಾಗಿತ್ತು. ಆಗಲೇ ಇವರು ಗೋವಿಂದದಾಸ ಎಂಬ ಹೆಸರಿನಲ್ಲಿ ಪ್ರಸಿದ್ಧರಾಗಿದ್ದರು. ಆ ತಮ್ಮ ಸಂಕಲನಕ್ಕೆ ಪದ್ಯ ರೂಪದ ಮುನ್ನುಡಿಯನ್ನೂ ಬರೆದಿದ್ದಾರೆ.

## ರಚನೆಗಳು

ಮೊದಲಲ್ಲಿ ಹೇಳಬೇಕಾದ ಮಾತೆಂದರೆ ಗೋವಿಂದದಾಸರ ಹಾಡುಗಳು ಭಾವಪೂರ್ಣವಾದವುಗಳು ಮತ್ತು ವೈವಿಧ್ಯದಿಂದ ಕೂಡಿದವುಗಳಾಗಿವೆ. ಗಣೇಶಸ್ತವನದಿಂದ ಮೊದಲುಗೊಂಡು ವಿವಿಧ ದೇವತೆಗಳನ್ನು ಕುರಿತು ಇರುವ ಕೀರ್ತನೆಗಳು ಮನಮೆಚ್ಚುವಂತಿವೆ. ಅವರ ಕಲ್ಪಕತೆಗೆ ಮಾದರಿಯಾಗಿ ಕೆಲವನ್ನು ಪರಿಶೀಲಿಸೋಣ.

ಅವರ ದೃಷ್ಟಿಯಲ್ಲಿ ಕೈಲಾಸವು ಕೇವಲ ಕೂಗಳತೆಯಲ್ಲಿದೆ. (ಕೀ.೨೬೮). ಏಕೆಂದರೆ ಅಲ್ಲಿಯ ಶಿವನು, ಕೂಗುವುದೂ ಬೇಡ, ಬರಿಯೆ ಕರೆದರೆ ಸಾಕು ಬಂದು ಬಿಡುತ್ತಾನೆ. ಅದಕ್ಕೆ ಭಕ್ತ ಮಾರ್ಕಂಡೇಯ, ಭೀಮಸೇನ ಇವರ ಆರ್ತನಾದಕ್ಕೆ ಪ್ರತಿಸ್ಪಂದಿಸಿದ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಅದರಂತೆ ಶಿವನ ಒಲುಮೆ ಇದ್ದರೆ ಯಾವ ಭಯವೂ ಇಲ್ಲ ಎಂದು ಹೇಳುತ್ತ ಅಲಂಕಾರಿಕವಾದ ಸಾದೃಶ್ಯ ಕೊಡುತ್ತಾರೆ.

"ಮರಣದ ಭಯವೆ? ನೀನೇ ಅಂತಕಾಂತಕ

ಚೋರರ ಭಯ? ಇಲ್ಲ. ಯಾಕೆಂದರೆ ಕಳ್ಳ ಕೃಷ್ಣ ನಿನ್ನ ಸ್ನೇಹಿತ. ಮೃಗಪಕ್ಷಿ ಭಯ ಎನ್ನಲೆ? ನಿನ್ನ ಸತಿ, ಸುತ, ಸಖರು ಖಗ ಮೃಗವೇರ್ದವರು."

ಮುಂದುವರಿದು– "ನಿನ್ನ ವಸನಕ್ಕೆ ಚರ್ಮಾಂಬರ; ಅದೇ ಸಂಸಾರವೆಂಬ ವ್ಯಸನಕ್ಕೆ ದಿಗಂಬರ." ಎಂದು ವರ್ಣಿಸಿದ್ದಾರೆ.

ಸದಾನಂದರಂತೆ ಇವರು ಕೂಡ ಶ್ರೀಕೃಷ್ಣನ ಪಾರಮ್ಯವನ್ನು ಮೆಚ್ಚಿ ಹಾಡಿದವರು. ಇಲ್ಲೆಲ್ಲ ಅವರು ತಂದಿರುವ ಕಲ್ಪನೆಗಳು ಖುಶಿ ಕೊಡುತ್ತವೆ.

ಕೃಷ್ಣನಿಗೂ ೮ರ ಸಂಖ್ಯೆಗೂ ವಿಶೇಷ ಹತ್ತುಗಡೆ. ದಶಾವತಾರಗಳಲ್ಲಿ ಅವನು ಎಂಟನೆಯ ಅವತಾರಿ. ತಾಯಿ ದೇವಕಿಯಲ್ಲಿ ಇವನದು ಎಂಟನೆಯ ಗರ್ಭ. ಕೃಷ್ಣ ಹುಟ್ಟಿದುದು ಅಷ್ಟಮೀ ತಿಥಿಯಲ್ಲಿ.

"ಕೃಷ್ಣನಾಮ ಎಂಬ ಅಮೃತವು ಭಕ್ತರಿಗೆ ರುಚಿಕರ; ದುಷ್ಟ ಮಾನವ ಮತ್ತು ಮತಿಹೀನನಿಗೆ ಅಲ್ಲ" ಎನ್ನುತ್ತ ವೈರುಧ್ಯಮಯ ಸಾದೃಶ್ಯಗಳನ್ನು ಕೊಟ್ಟಿದ್ದಾರೆ.

– ಬೆಲ್ಲ ಹಾಕಿದ ನೆಲದಲ್ಲಿ ಲಿಂಬೆ ಬೀಜ ಹಾಕಿ ಬೆಳೆದರೆ ಸಿಹಿಯಾದೀತೆ?

– ಸಾಣೆಯ ಕಲ್ಲನು ಬಿಸಿ ನೀರೊಳು ಇಟ್ಟರೆ ಮೇಣದಂತಾಗುವುದೆ? ಎಂದಿರುವಲ್ಲಿ ಹೊಸತನ ಇದೆಯಲ್ಲವೆ.

ಬಾಲಕೃಷ್ಣನ ಲೀಲೆಗಳಲ್ಲಿ ಶೃಂಗಾರರಸ ಮೇಲ್ವಾಯ್ದು ಬಂದಿದೆ; ಓರ್ವ ಗೋಪಿ ತನ್ನ ಗೆಳತಿಗೆ ಕೃಷ್ಣನನ್ನು ಬೇಗ ಕರೆತರಲು ಅಂಗಲಾಚುತ್ತಾಳೆ. ಯಾಕೆ ಬೇಕು ಈಗ ? ಇವತ್ತು ಮಕರ ಸಂಕ್ರಾಂತಿಯೇನಲ್ಲ, ಯುಗಾದಿ ಪ್ರತಿಪದೆಯಲ್ಲ– ಎಂದು ಮುಂತಾಗಿ ಹತ್ತಾರು ಹಬ್ಬಗಳ ಹೆಸರು ಹೇಳುತ್ತಾಳೆ. ಅದಾವುದೂ ಅಲ್ಲವಂತೆ. ಮತ್ತೇಕೆ ಬೇಕು? ಚಿತ್ತಜನಾಟಕ್ಕೆ ಬೇಕು" ಎನ್ನುತ್ತಾಳೆ ಆ ಗೋಪಿ.

ಇನ್ನೊಬ್ಬ ಗೋಪಿ ಹೀಗೇ ಮಾರಕೇಳಿಗೆ ಅವನನ್ನು ಕರೆಯುವಾಗ "ನೀರ ಮುಳುಗೆ ಬೆನ್ನ ಮೇಲೆ ಭಾರ ನೆರಹಿದಂತ ನಿನ್ನ ಧೀರತನವ ತೋರು" ಎನ್ನುತ್ತಾಳೆ.

ಮತ್ತೋರ್ವ ಗೋಪಿ "ಅದೇಕೊ ಕೃಷ್ಣ ರತಿಸುಖಕ್ಕೆ ಮನಗೊಡುತ್ತಿಲ್ಲ. ಏನು ಕಾರಣ' ಎಂದು ಯೋಚಿಸುತ್ತಾಳೆ – ತನ್ನಲ್ಲೇ. ಇತರರೊಡನೆ ಸುರತ ಸಂಗ ಹೆಚ್ಚಾಯಿತೆಂದೆ ? ಗೋವರ್ಧನ ಗಿರಿಯನ್ನೆತ್ತಿದ ದಣಿವೆ ?..."

ಕೃಷ್ಣ ಗೋಪಿಯರಿಗೆ ಸಂಬಂಧಿಸಿದ ಒಂದು ಕಾಲ್ಪನಿಕ ಪ್ರಸಂಗವೂ ಇದೆ. (ಕೀ. ೩೧೫):

ಓರ್ವ ಗೋಪಿ ಹಾಲು –ಮೊಸರು, ಮಾರಲು ಹೊರಟಿದ್ದಾಳೆ. ಬಾಲಕೃಷ್ಣನು ಅವಳನ್ನು ಸೆರಗನ್ನು ಜಗ್ಗಿ ತಡೆಯುತ್ತಾನೆ. "ಹಾಲಿನ ಸುಂಕ ಕೊಟ್ಟು ಹೋಗಬೇಕು" ಎನ್ನುತ್ತಾನೆ. ಅವಳು ಒಪ್ಪದೇ ಕೊಸರಿಕೊಂಡು ಹೋಗಬೇಕೆಂದರೆ ಆಗುತ್ತಿಲ್ಲ. ಆಕೆ ಕೈ ಮುಗಿದು "ತಂದೇ ಸೆರಗ ಬಿಡೊ" ಎನ್ನುತ್ತಾಳೆ. "ತಂದೆಯು ನಾನಲ್ಲ. ನಿನ್ನ ತಂದೆಯಳಿಯನೆಂದು ತಿಳಿ" ಎಂಬುದು ಕೃಷ್ಣನ ಮಾರುತ್ತರ. ಆಕೆ "ಮಾವ, ಸೆರಗ ಬಿಡೊ" ಎಂದರೆ, ಕೃಷ್ಣನು "ಮಾವ ಅಲ್ಲವೇ ನಾನು. ನಿನ್ನ ಮಾವನ ಮಗ" ಅವನ ಈ ಬಗೆಯ ಮಾತಿನ ಮೋಡಿಯಲ್ಲಿ ಅವಳು "ಮದನತಾಪಕ್ಕೆ ಗುರಿಯಾಗುವಳು. ಆತನನ್ನು ಅಪ್ಪಿ ಮುದ್ದಿಸುವಳು."

ಗೋವಿಂದದಾಸರು ದೇವದೇವತೆಗಳಲ್ಲಿ ಸಮಾನತೆಯನ್ನೆ ಕಂಡಿದ್ದಾರೆ. ಸರಸ್ವತಿಯ ವರ್ಣನಾವಸರದಲ್ಲಿ "ರಮೆಯ ರಕ್ಷಿಸು: ಉಮೆಯ ಪಾಲಿಸು" ಎಂದು ಹೇಳುತ್ತಾರೆ. ಇನ್ನೊಂದೆಡೆ ಶಿವ ವಿಷ್ಣು ಇಬ್ಬರೂ ಸಮಾನರು, ಸ್ನೇಹಿತರು ಎಂದು ಬಗೆಯಬೇಕೆಂದು ಕರೆ ಇತ್ತಿದ್ದಾರೆ:

ಸುಮ್ಮನೆ ವಿಷ್ಣುವ ಜರೆವಿರೇಕೆ
ಸುಮ್ಮನೆ ಶಿವನಿಂದ್ಯ ಗೈವಿರಿ.
ಗರುಡವಾಹನನು ಶ್ರೀವರ, ಉರಗಭೂಷಣನು ಗೌರೀಶ್ವರ
ಗರುಡೋರಗರ ದ್ವೇಷ ಹರಿಹರರೊಳಗುಂಟೆ ?
ಕ್ಷೀರಾಬ್ಧಿ ವಿಷ್ಣುಗೆ ಸತಿಗೃಹವು
ಶಿವನ ನಾರೀ ಮಂದಿರ ಹಿಮಾಲಯವು
ರಮೆಯ ಹೃದಯದಿ ಧರಿಸಿದ ವಿಷ್ಣು
ಶಿವ ತನ್ನ ಉಮೆಗೆ ಅರ್ಧಾಂಗವನ್ನೆ ಇತ್ತ

ಗೋವಿಂದದಾಸರ ಕೃತಿಗಳಲ್ಲಿ ಪ್ರತಿಭೆ ಅಲ್ಲಲ್ಲಿ ಮಿಂಚಿದೆಯೇನೊ ನಿಜ. ಆದರೆ ಅವರ ರಚನೆಯಲ್ಲಿ ಪುರಂದರದಾಸರ ಕೀರ್ತನೆಗಳ ಪ್ರಭಾವ ವಿಶೇಷವಾಗಿ ಕಂಡುಬರುತ್ತದೆ. ಅವರ ಪಲ್ಲವಿ, ಅನುಪಲ್ಲವಿ ಧಾಟಿ, ಶಬ್ದ ಪ್ರಯೋಗಗಳನ್ನು ಗೋವಿಂದದಾಸರು ಧಾರಾಳವಾಗಿ ಬಳಸಿಕೊಂಡಿದ್ದಾರೆ. (ಅವನ್ನು ಹಾಡುಗಳ ಟಿಪ್ಪಣಿಯಲ್ಲಿ ಅಲ್ಲಲ್ಲಿ ತೋರಿಸಲಾಗಿದೆ. )

ಅವರ ಲೌಕಿಕ ಪ್ರಜ್ಞೆಯ ಸೂಚಕವಾಗಿ, ಉಕ್ತಿಚಾತುರ್ಯಕ್ಕೆ ಮಾದರಿಯಾಗಿ ಉದಾಹರಣೆ ಕೊಡುವೆ: (ಕೀ.೩೦೯)

ಮಾವಿನ ಮರದಡಿ ಗಾಯನ ಹಾಡಲು
ಸಾವಿನ ಮನೆಯೊಳಗಿತ್ತ ಫಲ.
ಸೂಳೆಯ ಬಳಿಯಲಿ ಅಂತರ್ಯ ನುಡಿದರೆ
ಗಾಳಿಗೆ ಕಸ್ತುರಿ ಇಟ್ಟ ಫಲ
ಕೋಳಿಯ ಕಾಲಿಗೆ ಗೆಜ್ಜೆಯ ಕಟ್ಟಲು
ನೀಲಿಯ ನೀರೊಳು ತೊಳೆದ ಫಲ

## ೬. ಅನ್ಯ ದಾಸರ ಬಿಡಿ ರಚನೆಗಳು

ಬೇರೆ ಕೆಲವು ದಾಸರ ಬಿಡಿ ರಚನೆಗಳೆಂದು ಏಳು ಜನರ ಕೃತಿಗಳನ್ನು ಕೊಟ್ಟಿದೆಯಷ್ಟೆ. ಆ ಪ್ರತಿಯೊಬ್ಬರ ಕೃತಿಗಳು ಎರಡೆರಡೇ ದೊರೆತದ್ದು ಕೇವಲ ಆಕಸ್ಮಿಕ. ಅವರಲ್ಲಿ ನಾಲ್ವರು ಗೌಡ ಸಾರಸ್ವತರು. ಮೂಲ್ಕಿ ಊರಿನ ವಾಸುದೇವ ಪ್ರಭು ಮತ್ತು ವೆಂಕಣ್ಣ ಕವಿ– ಇವರುಗಳು ಯಕ್ಷಗಾನ ಪ್ರಸಂಗಗಳನ್ನೂ ರಚಿಸಿದ್ದಾರೆ. ಈ ಏಳು ಜನರ ಇನ್ನಷ್ಟು ಹಾಡುಗಳು ದೊರೆತಲ್ಲಿ ಆ ಮಟ್ಟಿಗೆ ದಕ್ಷಿಣ ಕನ್ನಡ ಪ್ರದೇಶದ ದಾಸ ಸಾಹಿತ್ಯದ ಕೊರತೆ ನೀಗುವುದು.

ಈ ಮಾತು ಶ್ರೀ ರಘುವರ್ಯತೀರ್ಥರಿಗೂ ಅನ್ವಯಿಸುತ್ತದೆ. ಅವರು ಪಲಿಮಾರು ಮಠದ ೨೦ನೆಯ ಪೀಠಸ್ಥರು. ಕೆಲವು ಸಂಸ್ಕೃತ ಕೃತಿಗಳನ್ನೂ ರಚಿಸಿದ್ದಾರೆ. ಮೊದಲಿಗೆ ದೊರೆತದ್ದು ಒಂದೇ ಹಾಡು. ಹಲವಾರು ಹಾಡಿನ

ಪುಸ್ತಕಗಳನ್ನು ತಿರುವಿ ಹಾಕಿದಾಗ ಅವರದೇ ಮುದ್ರಿಕೆಯ ಇನ್ನೊಂದು ಹಾಡು ಸಿಕ್ಕಿತು: ಅಷ್ಟೇ.

ಅವುಗಳಲ್ಲಿ "ರುಗ್ಮ ಭೂಷಣ.." ಇದನ್ನು ಕಂಡುಹಿಡಿದವರು ಬನ್ನಂಜೆ ಗೋವಿಂದಾಚಾರ್ಯರು. 'ಉಡುಪಿ-ಪಾಸ್ಟ್ ಅಂಡ್ ಪ್ರೆಸೆಂಟ್' ಎಂಬ ತಮ್ಮ ಪುಸ್ತಕದಲ್ಲಿ ಅದನ್ನು ಮುದ್ರಿಸಿದ್ದಾರೆ. ಆದರೆ ಅದಾರೊ ಅಂಕಿತ ಪಲ್ಲಟ ಮಾಡಿದ್ದರಿಂದ ಹಯವದನ ಎಂಬುದಾಗಿ – ಶ್ರೀ ವಾದಿರಾಜರ ಸಂಗ್ರಹದಲ್ಲಿಯೂ ಸೇರಿದೆ. ಅದು ನಿಜವಲ್ಲ. ಇದೇ ವಿಷಯವುಳ್ಳ ಸಂಸ್ಕೃತ ರಚನೆಯೊಂದು ಶ್ರೀ ರಘುವರ್ಯತೀರ್ಥರ ಹೆಸರಿನಲ್ಲಿದೆಯಾದ್ದರಿಂದ, ಮತ್ತು ಅದೇ ಮುದ್ರಿಕೆ ಇಲ್ಲಿಯೂ ಇರುವದರಿಂದ ಈ ಕನ್ನಡ ಹಾಡು ಶ್ರೀ ರಘುವರ್ಯತೀರ್ಥರದೇ ಎನ್ನಬಹುದು.

ಈ ಕೃತಿಗೆ ಐತಿಹಾಸಿಕ ದಾಖಲೆಯ ಮಹತ್ವವಿದೆ. ಅದುವೆ ಶ್ರೀ ಮಧ್ವಾಚಾರ್ಯರು ಪ್ರತಿಷ್ಠಾಪಿಸಿದ ಶ್ರೀಕೃಷ್ಣನ ಪ್ರತಿಮೆ. ಸದ್ಯದ ಭಾವುಕ ತಿಳಿವಳಿಕೆಯಂತೆ ದ್ವಾರಕೆಯಿಂದ ಬಂದ ಹಡಗು ಬಿರುಗಾಳಿಗೆ ಸಿಕ್ಕು ಹೊಯ್ದಾಡುತ್ತಿತ್ತು. ಆಗ ಶ್ರೀ ಮಧ್ವಾಚಾರ್ಯರು ತಮ್ಮ ಶಾಟೆಯನ್ನು ಬೀಸಿ ಹಡಗನ್ನು ದಂಡೆಗೆ ತಂದು ನಿಲ್ಲಿಸಿದರು. ಅದರಿಂದ ಪ್ರೀತನಾದ ಹಡಗಿನ ಯಜಮಾನನು ಆಚಾರ್ಯರಿಗೆ ಏನಾದರೂ ಸಲ್ಲಿಸಬೇಕೆಂದು ಯೋಚಿಸಿ ಹಾಗೆಂದು ಹೇಳಿದನು. ಅದಕ್ಕೆ ಆಚಾರ್ಯ ಮಧ್ವರು ಹಡಗದಲ್ಲಿದ್ದ ಗೋಪಿಚಂದನದ ದೊಡ್ಡ ಮೂಟೆಯನ್ನು ಕೇಳಿದರು. ಮತ್ತು ಅದರ ಒಳಗಿದ್ದ ಕಡಗೋಲು ಕೃಷ್ಣನ ಮೂರ್ತಿಯನ್ನು ಉಡುಪಿಗೆ ತಂದು ಪ್ರತಿಷ್ಠಾಪಿಸಿದರು. ಇದು ಪ್ರಚಲಿತವಿರುವ ಕತೆ.

ಆದರೆ ಶ್ರೀ ರಘುವರ್ಯರ ಈ ಹಾಡಿನಲ್ಲಿ ಹಡಗು ಒಡೆದು ಮುಳುಗಿತ್ತು. ಆಗ ಶ್ರೀಮಧ್ವಾಚಾರ್ಯರು ಸಮುದ್ರ ತಳದಲ್ಲಿದ್ದ ಶ್ರೀಕೃಷ್ಣ ಪ್ರತಿಮೆಯನ್ನು ಎತ್ತಿಕೊಂಡು ತಂದರು. ಸದ್ಯದ ಸ್ಥಳದಲ್ಲಿ ಪ್ರತಿಷ್ಠಾಪಿಸಿದರು ಎಂದಿದೆ. ವಾಸ್ತವವೆನಿಸುವ ರೀತಿ ಇಲ್ಲಿದೆ.

ದಕ್ಷಿಣ ಕನ್ನಡ ಪ್ರದೇಶದವರ ಈ ಸಂಗ್ರಹ-ಸಂಪುಟಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ. ಒಂದನೆಯದು ದ್ವೈತಾದ್ವೈತ ಸಂಪ್ರದಾಯದ ಹಾಡುಗಳಿರುವುದು. ಇನ್ನೊಂದು ವರಾಹತಿಮ್ಮಪ್ಪನಂತಹ ಮೇಧಾವಿ ಹರಿದಾಸರ ಹಾಡುಗಳನ್ನು ಒಳಗೊಂಡಿರುವುದು.

ಈ ಸಂಪುಟದಲ್ಲಿ ದಕ್ಷಿಣ ಕನ್ನಡ ಪ್ರದೇಶದ (ಉಡುಪಿ ಜಿಲ್ಲೆ ಮತ್ತು ದ.ಕ.ಜಿಲ್ಲೆ ಸೇರಿದ) ೧೩ ಜನ ಹರಿದಾಸರ ಹಾಡುಗಳನ್ನು ಕೊಟ್ಟಿದೆ. ಇವರುಗಳನ್ನುಳಿದು ಶ್ರೀ ವಾದಿರಾಜರು, ತುಪಾಕಿ ವೆಂಕಟರಮಣಾಚಾರ್ಯ ಹಾಗೂ ಪಾವಂಜೆ ಲಕ್ಷ್ಮೀನಾರಣಪ್ಪ, ಈ ಮೂವರು ಆಗಿ ಹೋಗಿದ್ದು ಅವರ ಕೃತಿಗಳು ಈ ನಮ್ಮ ಸಮಗ್ರ ದಾಸಸಾಹಿತ್ಯ ಪ್ರಕಟನೆ ಯೋಜನೆಯನ್ವಯ ಬೆಳಕಿಗೆ ಬರಲಿವೆ.*

ಆದಾಗ್ಯೂ ಕರ್ನಾಟಕದ ಉಳಿದ ಪ್ರದೇಶ/ಜಿಲ್ಲೆಗಳಿಗೆ ಹೋಲಿಸಿದರೆ ಈ ಭಾಗದ ಹರಿದಾಸರ ಸಂಖ್ಯೆ ಮತ್ತು ಕೃತಿಗಳು ಮೊತ್ತದಲ್ಲಿ ಕಡಿಮೆ ಎನಿಸುವುದು. ಹರಿದಾಸ ಸಾಹಿತ್ಯಕ್ಕೆ ಮೂಲ ಪ್ರೇರಕ ಶಕ್ತಿಯಾದ ಶ್ರೀಮಧ್ವಾಚಾರ್ಯರು ಹಾಗೂ ಉಡುಪಿಯ ಶ್ರೀಕೃಷ್ಣ ಇಲ್ಲಿಯವರೇ ಆಗಿದ್ದರೂ ದಾಸಸಾಹಿತ್ಯ ಇನ್ನಷ್ಟು ರಚಿತವಾಗಿ ಪ್ರಸಿದ್ಧಿಗೆ ಬರಬೇಕಿತ್ತು. ಬೇಸರದ ಇನ್ನೊಂದು ಸಂಗತಿಯೆಂದರೆ ತುಪಾಕಿ ವೆಂಕಟರಮಣರಾಗಲೀ ವರಾಹತಿಮ್ಮಪ್ಪ ಮುದ್ರಿಕೆಯ ನೆಕ್ಕಾರು ಕೃಷ್ಣದಾಸರಾಗಲೀ ಅವರ ಹೆಸರು ಕೂಡ ಅಪರಿಚಿತವಾದದ್ದು. ತುಪಾಕಿಯವರ ಪ್ರಾಚೀನ ಮುದ್ರಿತ ಕೃತಿ ಇಲ್ಲೆಲ್ಲೂ ದೊರೆಯದೆ, ಲಂಡನ್ನಿನ ಲೈಬ್ರರಿಯಿಂದ ತರಬೇಕಾಯಿತು. ವರಾಹತಿಮ್ಮಪ್ಪರ ಕೃತಿಗಳು ಬಾಸೆಲ್ ಮಿಶನ್ನಿನ ಮೊಗ್ಲಿಂಗ್ ಎಂಬವನಿಗೆ ಮೊದಲು ದೊರೆತು, ೧೮೫೨ ರಲ್ಲಿ ತನ್ನ ವಿಸ್ತಾರಿತ ದಾಸರ ಹಾಡುಗಳಲ್ಲಿ ಸೇರಿಸಿದನು. ಅವನನ್ನುಳಿದು ಈಚಿನ ನೂರು ವರ್ಷಗಳ ಅವಧಿಯಲ್ಲಿ ಬೇರಾರ ಗಮನಕ್ಕೂ-ಪಾವಂಜೆ ಗುರುರಾಯರೂ ಸೇರಿದಂತೆ-ಬಾರದಿದ್ದದ್ದು ಎಂಥ ವಿಪರ್ಯಾಸ! ಕ್ರಿ.ಶ.೧೮೭೩ರಲ್ಲಿ ಬೆಂಗಳೂರಿನಿಂದ ಪ್ರಕಟವಾದ ದಾಸರ

* ಈಚೆಗೆ ತಿಳಿದು ಬಂದ ಇನ್ನೊಂದು ಹೆಸರು ಸುಬ್ರಹ್ಮಣ್ಯ ಮಠದ ಸ್ವಾಮಿಗಳಾಗಿದ್ದ ಶ್ರೀವಿದ್ಯಾಭಿರಾಜರದು. ವಿವರಗಳು ದೊರೆತಿಲ್ಲ. ತುಳು ಲಿಪಿಯಲ್ಲಿಯ ಆ ಹಾಡುಗಳು ಮಠದ ಹಸ್ತಪ್ರತಿ ಭಂಡಾರದಿಂದ ಹೊರಬರಬೇಕಿದೆ.

ಹಾಡುಗಳು ಪುಸ್ತಕದಲ್ಲಿ ಮಾತ್ರ ಅವರ ಕೆಲವು ಹಾಡುಗಳು ಸೇರಿಕೊಂಡಿವೆ. ಅವರ 'ಉಡುಪಿ ಶ್ರೀಕಷ್ಣ ಚರಿತೆ' ಎಂಬ ನಾಲ್ಕು ಸಂಧಿಗಳ ಚಿಕ್ಕ ಕಾವ್ಯ ೧೯೧೪ ರಲ್ಲಿ ಮುದ್ರಿತವಾಗಿವೆ. ಈ ಕೃಷ್ಣಚರಿತ್ರೆ ಮತ್ತು ಅವರ ಕೀರ್ತನೆಗಳು, ಇವನ್ನೊಳಗೊಂಡ ಸಂಕಲನವು ನೆಕ್ಕಾರು ಕೃಷ್ಣದಾಸ ಪ್ರತಿಷ್ಠಾನದ ವತಿಯಿಂದ ಪ್ರಕಟವಾಗಿದೆ (೨೦೦೩).

ದಕ್ಷಿಣ ಕನ್ನಡ ಪ್ರದೇಶದವರ ದಾಸ ದೀಕ್ಷೆಯ ವೈಶಿಷ್ಟ್ಯವೆಂದರೆ ಅವರಲ್ಲಿ ಮಾಧ್ವ ಸಂಪ್ರದಾಯದವರು ಇದ್ದರೆ ಅದು ಸಹಜವೇ. ಆದರೆ ಶುದ್ಧ ಶೈವ ಸಂಪ್ರದಾಯದವರೆನ್ನುವವರು ಇದ್ದಂತಿಲ್ಲ. ಬದಲಾಗಿ ಅವೆರಡೂ ಪಂಥದ ವಿಚಾರಗಳನ್ನು ಮೇಳವಿಸಿಕೊಂಡ 'ಶಿವಬ್ರಾಹ್ಮಣ'ರು ಅಥವಾ ಭಾಗವತ ಸಂಪ್ರದಾಯದವರು ನಮಗೆ ಕಂಡುಬರುತ್ತಾರೆ. ಈ ಸಂಪುಟದಲ್ಲಿ ಅವರ ಕೃತಿಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಮಾತ್ರವಲ್ಲದೆ ಶ್ರೀಕೃಷ್ಣ/ಶ್ರೀಹರಿಯನ್ನೇನೊ ಮುಕ್ತ ಮನಸ್ಸಿನಿಂದ ಸ್ತುತಿಸಿದ್ದಾರೆ. ಆದರೆ ಹರ, ಹರಿ ಎಂಬಲ್ಲಿ ದೇವತಾ ತಾರತಮ್ಯವನ್ನು (ಮಾಧ್ವರ ವೈಶಿಷ್ಟ್ಯ) ತಂದಿಲ್ಲ.

ಪ್ರಸ್ತುತ ಸಂಪುಟದ ಸಂಪಾದನ ಕೆಲಸವನ್ನು ಪ್ರೊ. ಎಂ. ರಾಜಗೋಪಾಲಾಚಾರ್ಯ ಅವರಿಗೆ ಒಪ್ಪಿಸಲಾಗಿದ್ದಿತು. ಅವರು ಇಲ್ಲಿ ಬಂದಿರುವ ೧೩ ಜನ ಹರಿದಾಸರ ಪೈಕಿ ೧೧ ಜನರ ಕೀರ್ತನೆಗಳನ್ನು ದೊರಕಿಸಿ, ಅವರುಗಳ ಕಿರುಚರಿತ್ರೆಯನ್ನು ಬರೆದು ಇರಿಸಿದ್ದರು. ಆದರೆ ಈ ಮಧ್ಯೆ ೧೯೮೮ರಲ್ಲಿ ತೀರಿಹೋದರು.

ಉಳಿದ ಕೆಲಸವನ್ನು ಸಂಪಾದನ ಸಮಿತಿಯು ನನಗೆ ಒಪ್ಪಿಸಿದ್ದರಿಂದ, ಅದನ್ನು ಮುಗಿಸಿದ್ದೇನೆ. ವರಾಹ ತಿಮ್ಮಪ್ಪ ಮತ್ತು ಶ್ರೀ ರಘುವರ್ಯತೀರ್ಥರ ಕೀರ್ತನೆಗಳನ್ನು ಸೇರಿಸಿ, ಒಟ್ಟಿನ ಕೃತಿಗಳ ಸಮೀಕ್ಷೆ ಮಾಡಿದ್ದೇನೆ. ಜೊತೆಗೆ ನಾಲ್ಕು ಅನುಬಂಧಗಳನ್ನು ಸಿದ್ಧಪಡಿಸಿದ್ದಾಗಿದೆ.

ಇಲ್ಲಿ ಬಂದಿರುವ ಕೀರ್ತನೆಗಳಲ್ಲಿ ವರಾಹತಿಮ್ಮಪ್ಪರ ರಚನೆಗಳು ಮೌಲಿಕವಾಗಿ ಎದ್ದು ಕಾಣುವಂತಹವು. ಅಲ್ಲದೆ ಕಾಲಮಾನದಿಂದಲೂ ಅವರೇ

ಮೊದಲಿಗರಾಗುತ್ತಾರೆ. ಆದ್ದರಿಂದ ಈ ಸಂಕಲನಕ್ಕೆ ಅವರ ಹೆಸರನ್ನು ಮೊದಲಿಗೆ ಕಾಣಿಸಿದೆ ಮತ್ತು ಸವಿವರ ಕೃತಿಸಮೀಕ್ಷೆ ಮಾಡಲಾಗಿದೆ.

ಪ್ರೊ. ರಾಜಗೋಪಾಲಾಚಾರ್ಯರು ಸಂಸ್ಕೃತ ಕನ್ನಡಗಳಲ್ಲಿ ಉದ್ದಾಮ ಪಂಡಿತರಾಗಿದ್ದರು. ಜೊತೆಗೆ ದಾಸಸಾಹಿತ್ಯವನ್ನೂ ಸಂಗೀತ ಶಾಸ್ತ್ರವನ್ನೂ ಚೆನ್ನಾಗಿ ತಿಳಿದವರಾಗಿದ್ದರು. ಕೆಲ ಕಾಲ 'ಸುಗುಣಮಾಲಾ' ಪತ್ರಿಕೆಯ ಸಂಪಾದಕರೂ ಆಗಿದ್ದರು. ಸಮಗ್ರದಾಸಸಾಹಿತ್ಯ ಪ್ರಕಟನೆ ಸಮಿತಿಯ ಸದಸ್ಯರಾಗಿ ಮೊದಲಿನಿಂದಲೂ ಇದ್ದರು. ಅವರ ಈ ಮಧ್ಯಂತರ ಮರಣದಿಂದ ಈ ಯೋಜನೆಗೆ ವಿಶೇಷ ಹಾನಿಯಾಗಿದೆ. ಈ ಸಂಪುಟವನ್ನು ಅವರ ಸ್ಮರಣಾರ್ಥ ಅರ್ಪಿಸಬಯಸುವೆ.

ಶ್ರೀನಿವಾಸ ಹಾವನೂರ

# ಅನುಬಂಧಗಳು

೧. ಕಠಿಣಶಬ್ದಗಳ ಅರ್ಥ

೨. ಟಿಪ್ಪಣಿಗಳು

೩. ಅಂಕಿತನಾಮಸೂಚಿ

೪. ಕೆಲವು ಸಂಖ್ಯಾ ವಿಶಿಷ್ಟ ಪದಗಳು

೫. ಕೀರ್ತನೆಗಳ ಅಕಾರಾದಿ ಸೂಚಿ

# ಅನುಬಂಧ–೧

## ಕಠಿಣ ಶಬ್ದಗಳ ಅರ್ಥ

ಅಂಗಜಾವರಸುತ – ಪಾರ್ವತಿಯ ಮಗ
ಅಂಬರಕೇಶ – ಶಿವ
ಅಂಬರಮಣಿ – ಸೂರ್ಯ
ಅಂಬಿಕಜ – ಪಾರ್ವತಿಯ ಮಗ
ಅಘಸಂಹರಣ – ಪಾಪನಾಶನ
ಅಜಗರ – ಹೆಬ್ಬಾವು (ಅಘಾಸುರ)
ಅಟ್ಟುಳಿ – ಹಿಂಸೆ
ಅಡಸು – ಗಾಢವಾಗಿ ತಾಗು
ಅನಪತ್ಯ – ಆಪತ್ತು
ಅನಿಮಿಷರು – ದೇವತೆಗಳು
ಅನುವರ – ಯುದ್ಧ
ಅಪಸರ್ಗ – ಮೋಕ್ಷ
ಅರ್ಧಚಂದ್ರಫಾಲ – ಅಷ್ಟಮಿ ಚಂದ್ರನಂತೆ ಹಣೆಯುಳ್ಳವ
ಅಹಿವೇಣಿ – ಸರ್ಪದಂತೆ ಜಡೆಯುಳ್ಳವಳು
ಅಳ್ಗಿ – ಅಳಿಗೆ, ಮಜ್ಜಿಗೆ ಇಡುವ ಮಡಕೆ
ಅಷ್ಟಚಾತುರ್ಲಕ್ಷ– ೮೪ ಲಕ್ಷಯೋನಿಗಳು
ಆಯತನ – ನೆಲೆ, ದೇವಾಲಯ
ಆರೈವು – ಹುಡುಕು
ಆರ್ತ – ಸಂಕಟ
ಆಲಿ – ಕಣ್ಣು
ಇಂದುವಾರ – ಸೋಮವಾರ
ಈಸು – ಇಷ್ಟು
ಉಡುಗಣ – ನಕ್ಷತ್ರ ಪುಂಜ
ಉರುಗವಿಷ್ಟರ – ಶೇಷಶಾಯಿ, ವಿಷ್ಣು
ಉರವಣೆ – ಆಧಿಕ್ಯ
ಉರ್ವಿ – ಭೂಮಿ
ಎಣ್ಣು – ಚಿಂತಿಸು
ಎಯ್ದು – ಎರಡು
ಎರೆ – ಸುರಿಯು
ಒಂಚು – ತುಸು
ಓವಿ – ಪಾಲಿಸಿ
ಒಳಲಂಕೆ – ಮೂಲ್ಕಿ (ಊರು)
ಕಣ್ಣಿ – ಉರಳು, ಹಗ್ಗ
ಕಾಪಥ – ಕಷ್ಟಕರವಾದ ದಾರಿ
ಕೀಶ – ಕಪಿ
ಕುಂಡಿನೇಶ – ಭೀಷ್ಮಕ ರಾಜ
ತನುಜಾತೆ – ರುಕ್ಮಿಣಿ
ಕುಂದರದನ – ಮಲ್ಲಿಗೆ ಮೊಗ್ಗಿನಂತೆ ಹಲ್ಲು ಉಳ್ಳವ
ಕುಂಭಿನಿ – ಭೂಮಿ
ಕುಜನೇಭ ದುರ್ಜನರೆಂಬ ಆನೆಗೆ

## ಗಣೇಶಸ್ತವನ

೧

ಬಾರೊ ಮಹೇಶತನಯ ಗಣೇಶ
ವರ ವಿಷ್ಣುಪದಕಭಿಮಾನಿ ವಿಘ್ನೇಶ ಪ

ನಿನ್ನ ಪೂಜಿಸಿ ಧರ್ಮರಾಜನು ಗೆದ್ದ
ನಿನ್ನ ಪೂಜಿಸದೆ ದುರ್ಯೋಧನ ಬಿದ್ದ
ನಿನ್ನ ಪೂಜಿಸಿ ರಾಮ ಸತಿಯನೆ ಪಡೆದ
ನಿನ್ನನರ್ಚಿಸದ ದಶಕಂಠನು ಕೆಟ್ಟ ೧

ಸುರಮುಖ್ಯರೆಲ್ಲರು ನಿನ್ನ ಪೂಜಿಪರು
ಪರಮಾತ್ಮನಿಗೆ ನೀನು ಮರಿಮಗನಿರುವಿ
ಸುರಮುನಿ ದಿತಿಜಾದಿಗಳಿಗತಿಪ್ರಿಯನೆ
ಸರುವರಿಂದಲು ಮೊದಲು ಪೂಜೆಗೊಂಬನೆ ೨

ರಾಜೀವಾಕ್ಷಗೆ ಸತ್ಯಾದೇವಿಯೊಳ್ಜನಿಸಿ
ಮೂಜಗದಲಿ ನೀನು ಪೂಜ್ಯನೆಂದೆನಿಸಿ
ರಾಜೇಶ ಹಯಮುಖ ಚರಣಾಬ್ಜಭೃಂಗ
ಕಂಜಜತನಯನ ಹೆಮ್ಮಗ ಕಂಡ್ಯಾ ೩

## ಅ. ಶ್ರೀಹರಿ–ಲಕ್ಷ್ಮಿಯರು

೨

ಉದ್ಧವಾ ಬೇಗ ಬಾ ।ಬಾ।
ಶ್ರದ್ಧೆಯಿಂದಿರ್ಪರೆ। ಗೋಪಿಯರೆನ್ನೊಳು ಪ

ಕಾಳಿಯ ಫಣದಲ್ಲಿ ಮೋದದಿಂ ಕುಣಿಯಲು
ಸಾಲು ಸಾಲಾಗಿಯೇ ತವಕದಿಂ ನಿಂತರು ೧

ಬೆಣ್ಣೆಯ ಕದ್ದರೂ ಸಣ್ಣ ಮಾತಾಡರು
ಕಣ್ಣು ಕೆಂಪಾಗಿ ತಾವೆಂದಿಗೂ ನುಡಿಯರು ೨

ಸುಂದರಾಂಗಿಯಾ ಸೀರೆಯ ಸೆಳೆದರೂ
ನಂದನೊಳೆನ್ನಯ ಸುದ್ದಿಯ ಪೇಳರು ೩

ತರುವ ನಾನೇರ್ದರೂ ಸೀರೆಯ ಕದ್ದರೂ
ಕರಗಳ ಜೋಡಿಸಿ ಬೇಡುತ್ತ ನಿಂತರು ೪

ಪತಿಗಳ ಶಿಕ್ಷೆಯನ್ನೀಕ್ಷಿಸದೆ ಎನ್ನೊಳು
ರತಿಸುಖಾಂಬುಧಿಯಲ್ಲಿ ತೇಲಿಕೊಂಡಿರ್ದರು ೫

ಭಜಿಸಿ ರಾಜೇಶನ ಹಯಮುಖ ದೇವನ
ತ್ಯಜಿಸಿ ಶೋಕಂಗಳ ಸುಖಿಗಳಾಗಿರ್ಪರೆ ೬

## ೩

ಏಳಯ್ಯ ಮಹಾರಾಜ ಬೆಳಗಾಯಿತೇಳಯ್ಯ ರಂಗ ಬಾ ಪ

ಬಾಗಿಲಲಿ ಕೂಗುವರು ಸನಕಾದಿ ಮುನಿವರರು
ನಾಗಭೂಷಣನು ಕೈಮುಗಿದು ನಿಂತ ।
ಜಾಗರವ ಮಾಡಿರ್ಪ ಸುರರೆಲ್ಲ ಬಂದಾಯ್ತು
ಯೋಗಿಗಳು ಪೊಗಳುವರು ನಿನ್ನಂಘ್ರಿಯ ೧

ಲಂಕೆಯನು ಬಿಟ್ಟು ವಿಭೀಷಣನು ನಿಂತಿರ್ದ
ಗಂಗೆಯನು ಬಿಟ್ಟೇಳು ಜಗದೀಶನೆ ।
ತಂಗಿಯನು ಬೇಡುವರೆ ಭಾವ ಪಾರ್ಥನು ಬಂದ
ಮಂಗಳದ ನುಡಿ ನಿನಗೆ ಕೇಳಲಿಲ್ಲವೊ ಹರಿಯೆ ೨

ಪುಟ್ಟಾದ ಮುನಿ ಬಂದನಿಷ್ಟ ಭೀಮನು ಬಂದ
ಥಟ್ಟನೆ ಏಳು ಯಾದವರಿಗರಸ ।
ಸೃಷ್ಟಿಗೊಡೆಯನೆ ಕೇಳು ಭೂಸುರನು ರುಕ್ಮಿಣಿಯ
ಪುಟ್ಟ ವಾಲೆಯ ತಂದ ನೀ ನೋಡು ನೋಡು ೩

ಕೋಪಿಗಳರಸಾದಿ ದುರ್ವಾಸ ಮುನಿ ಬಂದ ।
ಇಂಪಾಗಿ ಪಾಡುತಿಪ ಸುರಮುನಿಯು ಬಂದ ।
ಕೋಪದೊಳೊದೆದ ಮುನಿ ಬಂದ ಬೇಗೇಳು
ಪುಷ್ಪಶರ ಮಗ ಬಂದ ಬೇಗೇಳು ರಂಗ ೪

ಸಿರಿದೇವಿ ನಿನ್ನಂಘ್ರಿಗಳನೊತ್ತ ಬಿಡಳೇನೊ ।
ಮಾರುತಿಯ ಜಪವಿನ್ನು ಮುಗಿಯಲಿಲ್ಲೊ ।
ಕರುಣದಿಂದಲಿ ಕಾಯೋ ರಾಜೇಶ ಹಯಮುಖನೆ
ನರರೆಲ್ಲ ನಗುವಂತೆ ಮಾಡದಿರೊ ರಂಗ ೫

## ೪

ಕುದುರೆ ಕಂಡೀರ್ಯಾ ಬಿಳಿ ಕುದುರೆ ಕಂಡೀರ್ಯಾ
ಚೆಲುವ ಕುದುರೆ ಕಂಡೀರ್ಯಾ
ಮಧ್ವರಾಯರಿಗೊಲಿದ ಕುದುರೆ
ವಾದಿರಾಜರ ಪೊರೆದ ಕುದುರೆ
ಇಂದಿರಾ ದೇವಿಯನಪ್ಪಿದ ಕುದುರೆ
ಬಂದರೆ ನರರು ಬೆದರದಂಥ ಕುದುರೆ ೧

ಮಂದರಗಿರಿಯನ್ನೆತ್ತಿದ ಕುದುರೆ
ಚಂದಿರನಂತೆ ಪೊಳೆಯುವ ಕುದುರೆ
ಸೋದೆಯ ಪುರದೊಳಿರುವ ಕುದುರೆ
ಮೋದದಿಂದ ಮೆರೆಯುವ ಕುದುರೆ ೨

ಸುರರಿಗಮೃತವನ್ನಿತ್ತ ಕುದುರೆ
ನರನ ರಥವನು ಏರಿದ ಕುದುರೆ

ಸ್ಮರನ ತಾತನೆನಿಪ ಕುದುರೆ
ಸುರತರುವನೆ ಭೂಮಿಗೆ ತಂದ ಕುದುರೆ ೩

ಕಡಲೆ ಹೂರಣ ಮೆಲುವ ಕುದುರೆ
ಪಂಡರಪುರದಿ ಮೇದ ಕುದುರೆ
ಪುಂಡರೀಕನಿಗೆ ಒಲಿದಿಹ ಕುದುರೆ
ಪಾಂಡವರನೆ ಪೊರೆದ ಕುದುರೆ ೪

ರಾಜನಾಥನೆನಿಪ ಕುದುರೆ
ವಾಜಿವದನ ತಾನೆನಿಪ ಕುದುರೆ
ಕಂಜಸುತಗೆ ಶ್ರುತಿಯನ್ನಿತ್ತ ಕುದುರೆ
ಕಂಜನಾಭನೆನಿಪ ಕುದುರೆ ೫

## ೫

ತಿರುಪತಿ ವೆಂಕಟರಮಣ ನೀನು
ಧರಣಿಯೊಳ್ಸರ್ವರಿಗಧಿಕ
ತಿರುಪತಿ ವೇಂಕಟರಮಣ ಪ

ಸ್ವಾಮಿ ಪುಷ್ಕರಿಣಿಯ ತಟದಿ
ವಾಸ ಮಾಡಿಕೊಂಡಿರುವೆಯೊ ನೀನು ।
ಭೂಮಿಯೊಳಗೆಲ್ಲ ಸಾಧು ಸಜ್ಜನರು
ನೇಮದಿಂದಲಿ ನಿನ್ನ ಸೇವಿಪರು ೧

ಮಂಜುಗುಣಿಯ ಪುರದೊಳಗೆ ಬಂದು
ನಿಂದಿರುವಿ ವೆಂಕಟೇಶ
ಕಂಜಾಕ್ಷ ವರ ಚಕ್ರ ಶಂಖ ಮತ್ತೆ
ಶರಚಾಪಗಳನ್ನೆತ್ತಿ ಮೆರೆದೀ ೨

ಜಗಕೆಲ್ಲ ಶೇಷಾದ್ರಿಯಂಥ
ಕ್ಷೇತ್ರವಿಲ್ಲೆಂದು ತೋರಿಸುತಿರುವಿ ।

ಖಗವರನನ್ನೇರಿ ತಿರುಗಿ ಬಂದು
ತಿರುಪತಿ ಕ್ಷೇತ್ರದೊಳಿರುವಿ ೩

ವಾದಿರಾಜರು ನಿನ್ನ ಬಳಿಗೆ
ಪಾದ ಮುಟ್ಟದೆ ಜಾನುಗಳಿಂದ ।
ಬಂದು ಸಾಲಿಗ್ರಾಮದ ಮಾಲೆಯನ್ನು
ಪಾದಕರ್ಪಿಸಿ ಸ್ತುತಿಸಿದರು ನಿನ್ನ ೪

ಆಕಾಶರಾಜನ ಮಗಳು
ಬಂದು ರಾಜೇಶ ಹಯಮುಖ ನಿನಗೆ ।
ಮಾಲೆ ಹಾಕುತ ಮುಂದೆ ನಿಂದಳು
ಶಂಕೆಯಿಲ್ಲದೆ ನಮಿಸಿದಳು ಮುದದಿ ೫

೬

ದಾಸಗೆ ಭಯವೆಲ್ಲಿ
ವಾಸವನನುಜನ
ದಾಸಗೆ ಭಯವೆಲ್ಲಿ ಪ

ದಾಸನಾಗದವಗೆ ಭಯವೆಂದಿಗು ತಪ್ಪದು
ದಾಸನಾಗಿಹಗೆ ಭಯವೆಂದಿಗು ಬಾರದು ೧

ತರಳ ಪ್ರಹ್ಲಾದಗೆ ಭಯವೆಂದಿಗು ಸೋಂಕಲಿಲ್ಲ
ತರಳನ ಪಿತಗೆ ಭಯವೆಂದಿಗು ತಪ್ಪಲಿಲ್ಲ ೨

ಲಂಕೆಯೊಳಿದ್ದರೂ ದಶಕಂಠನಿಗತಿ ಭಯ
ಲಂಕೆಯ ಬಿಟ್ಟ ವಿಭೀಷಣನಿಗಭಯ ೩

ಹರನ ಪೀಡಿಸಿದಾ ಭಸ್ಮಾಸುರಗೆ ಭಯ
ಹರಿಯ ಸ್ತುತಿಸಿದ ಮಹಾದೇವನಿಗಭಯ ೪

ರಾಜಾಧಿರಾಜನಿಗೂ ಭಯವೆಂದೂ ತಪ್ಪದು
ರಾಜೇಶ ಹಯಮುಖನೊಲಿದವನಿಗಭಯ ೫

೭

ದೇವಾಧಿದೇವ ಶ್ರೀ ತ್ರಿವಿಕ್ರಮರಾಯ
ದ್ಯಾವಾ ಮ್ಯಾಲ್ನಿನ್ನ ಕಾಯ ॥
ಪಾದನಖಾಗ್ರದಿ ಬ್ರಹ್ಮಾಂಡವನ್ನು
ಭೇದಿಸಿ ಗಂಗೆಯ ಜನಿಸಿರ್ದ ಕಾಯ ಪ

ಅಣುರೂಪದಿಂದಿದ್ದು ಕ್ಷಣದೊಳಗದ್ಭುತ
ರೂಪವ ಧರಿಸಿ ಬಲಿಯ ಬಂಧಿಸಿದೆ ।
ರಣ ಶಬ್ದವಿಲ್ಲದೆ ಸರ್ವ ಸಾಮ್ರಾಜ್ಯವ
ನಗ್ರಜಗಿತ್ತಿಹ ಕಾರ್ಯವಾಶ್ಚರ್ಯ ೧

ವಾದಿರಾಜರಿಗೆ ನೀ ಒಲಿದು ಶ್ರೀ ಸೋದೆಯೊಳ್
ನಿಂತಿದ್ದ ತೆರವತಿ ಚೋದ್ಯವಾಗಿಹುದು ।
ಕದನವಾಗಿಲ್ಲ ಭೂಭುಜರಲ್ಲಿ ಒಲಿದುದು
ಹರಿಭಕ್ತರ್ಗತಿ ತೋರ್ಪ ಕಾರ್ಯ ೨

ಕಂಜಾಕ್ಷ ಶ್ರೀಕೃಷ್ಣಗೋಲೆಯರ್ಪಿಸಿದ
ರಾಜೇಶ ಹಯಮುಖ ದಾಸರೆಂದೆನಿಪ ।
ರಾಜ್ಯದೊಳಗತಿ ಮಾನ್ಯ ವಾದಿರಾಜರ ಭಾಗ್ಯ
ದೇವಾಧಿದೇವ ಶ್ರೀ ತ್ರಿವಿಕ್ರಮರಾಯ ೩

೮

ನಾನಾ ವೇಷಗಳಿನ್ನು ನಿನಗ್ಯಾಕೊ ಹರಿಯೆ
ನಿನ್ನ ಭಕ್ತರು ನಿನ್ನ ತಿಳಿಯದೆ ಬಿಡರು ಪ

ಮೀನಾಗಿ ಜಲದೊಳು ತಿರುಗುವದ್ಯಾಕೊ
ಚಾರಣನೆಂದೆನಿಸಿ ಭಾರವ ಪೊತ್ತುದ್ಯಾಕೊ ೧

ಹಂದ್ಯಾಗಿ ದಿತಿಜನ ಬಡಿದೆ ನೀನ್ಯಾತಕೋ
ಕಂದನ ಪೊರೆಯೆ ಕಂಬದಿ ತೋರಿದ್ಯಾಕೊ ೨

ವಟುವಾಗಿ ಭೂಮಿಯ ಬೇಡಿದೆ ಏತಕೊ
ಹಟವು ರಾಯರ ಮೇಲೆ ನಿನಗ್ಯಾಕೆ ಬೇಕೋ ೩

ಮಲತಾಯಿ ನುಡಿಗಾಗಿ ವನವಾಸ ನಿನಗ್ಯಾಕೊ
ಬಲದಿ ತಂದೆಯ ಬಂಧ ಬಿಡಿಸಿದ್ದು ಸಾಕೊ ೪

ರಾಜೇಶ ಹಯಮುಖ ಬತ್ತಲೆ ನಿಂತೆ ಏಕೊ
ತೇಜಿಯನೇರ್ದು ತೋರುವ ಶೌರ್ಯ ಸಾಕೊ ೫

## ೯

ನಾನೇನ ಮಾಡಿದೆ ತಪ್ಪುಗಳನ್ನ
ನಾನೇನ ಮಾಡಿದೆ ದೇವರದೇವ ಪ

ನಿನ್ನ ದಾಸರ ತಪ್ಪನೆಣಿಸದೆ ಪೊರೆಯುವೆ
ನಾನೊಬ್ಬ ದಾಸನೆಂದರಿದು ನೀ ಪೊರೆಯೊ ೧

ಭೃಗುವಂತೆ ನಿನ್ನಯ ಎದೆಗೆ ತುಳಿಯಲಿಲ್ಲ
ನಗವೈರಿಯಂತೆ ಯುದ್ಧವ ಮಾಡಲಿಲ್ಲ ೨

ಅಂಗಾಧಿಪತಿಯಂತೆ ಕೊಂದೆನೆಂದರಿತಿಲ್ಲ
ಗಂಗೆಯ ಸುತನಂತೆ ಘಣಿಗೆ ಹೊಡೆಯಲಿಲ್ಲ ೩

ನಿನ್ನಣ್ಣನಂತೆ ನೀ ವಂಚಿಸಿದೆಯೆಂದು
ನಿನ್ನ ಬಿಟ್ಟನ್ಯ ದೇಶಕೆ ಪೋಗಲಿಲ್ಲಾ ೪

ಭಾವ ಫಲ್ಗುಣ ವಿಪ್ರಶಿಶುವ ಪಾಲಿಪೆನೆಂಬ
ಭಾವದಿ ನುಡಿದಂತೆ ನಿನಗೇನು ಪೇಳಿಲ್ಲ ೫

ನಿನ್ನಾ ಕುವರರು ಸುಭದ್ರೆಯ ಮದುವೆಯ
ಚೆನ್ನಾಗಿ ತಡೆದಂತೆ ತಡೆಯಲಿಲ್ಲವೊ ನಾನು ೬

ವಸುದೇವ ದೇವಕಿ ಮುಖ್ಯರಂತೆ ನಿನ್ನ ಮಾ–
ನುಷನೆಂದು ನಾನೇನು ತಿಳಿದುಕೊಂಡಿಲ್ಲ ೭

ಮಲಗಿದ್ದ ಸಮಯದ ಕಂಡು ಬಲಿಯು ಬಂದು
ಮೌಲಿಯ ಕದ್ದಂತೆ ಕದ್ದುಕೊಂಡಿಲ್ಲ ೮

ರಾಜೇಶಹಯಮುಖ ಭಜಕರೊಳಗೆ ಮತ್ತೆ
ಋಜುಗಳಲ್ಲದೆ ನಿತ್ಯ ಭಕ್ತರಾರಿಹರು ೯

## ೧೦

ಪಾತಾಳದೊಳಗಿಂದ ಬಂದ ವರ
ಚಿಂತಾಮಣಿ ನಾರಸಿಂಹ ಪ

ಪಾಹಿ ಕರುಣಾಸಾಗರ ಶ್ರೀಹರಿಯೆ ಅ

ಯೋಗಿ ನೀ ಗಣಗಳ ಕೊಂದು
ನಾಗಭೂಷಣನಿಗೊಲಿದಂಥ
ರಾಗದಿ ದೋಷವಿದೂರರ
ರಾಗದಿಂದಲಿ ಪಾಲಿಸುತಿರುವೆ ದೊರೆಯೆ ೧

ಕೋಲಾವತಾರದ ಹರಿಯ ದಿವ್ಯ
ಲೋಲ ನೇತ್ರದಿ ಬಂದ ನದಿಯ
ವೇಲೆಯೊಳಗಿದ್ದು ಶೋಭಿಸುವ ವನ–
ಮಾಲಾದಿ ಭೂಷಿತನಿರುವಿ ೨

ಬಾಲಗೊಲಿದೆ ಕಂಬದಲ್ಲಿ ಮತ್ತೆ
ಶೂಲಿಗೊಲಿದೆ ಪಾತಾಳದಲ್ಲಿ
ಚೆಲ್ವ ರಾಜೇಶಮುಖ ಹರಿಯೇ ನಿನ್ನ
ಬಲ್ಲಿದ ಜನರಿಗೆ ಸುಲಭ ೩

## ೧೧

ಪಾಲಿಸೊ ಪಂಕಜನೇತ್ರ ರಘು
ಕುಲಾಂಬುಧಿ ಚಂದ್ರ ಶ್ರೀ ರಾಮಚಂದ್ರ ಪ

ಒಂದೇ ಭಾಷಣ ನಿನಗೊಂದೇ ಮಾರ್ಗ ಸಾಕು
ಒಂದೇ ಸ್ಥಾನದೊಳಾಶ್ರಿತರನೇ ನಿಲ್ಲಿಸುವಿ
ಒಂದೇ ಬಾರಿಯೆ ಕೊಟ್ಟುದ್ಧರಿಸುವೆ ಭೃತ್ಯರ
ಒಂದೇ ಪತ್ನಿಯು ನಿನಗೆಂಬುದು ಬಿರುದು ೧

ನಿನ್ನ ತಮ್ಮನು ನಿನ್ನ ರಾಣಿಯ ಭೃತ್ಯನು
ನಿನ್ನಂಥ ಭಾಗ್ಯ ಮತ್ತೆಲ್ಲಿ ತೋರುವುದು
ಘನ್ನ ಮಹಿಮ ನೀನು ಮಲತಾಯಿ ನುಡಿಯಲು
ತನ್ನ ರಾಜ್ಯಗಳನ್ನು ತಮ್ಮನಿಗೊಪ್ಪಿಸಿದೆ ೨

ಭರತನು ನಿನ್ನಡಿಗಾಗಿ ಬೇಡಿದರೂ ನೀ
ಹರುಷದಿಂದಲಿ ಕಾಲಾಂತರವ ಪೇಳಿರುವಿ
ಮರಳಿ ರಾಜ್ಯದಿ ಬಂದು ರಾಜೇಶ ಹಯಮುಖ
ಕರುಣಿಸಿ ಪಟ್ಟಾಭಿಷಿಕ್ತನಾಗಿರುವಿ ೩

## ೧೨

ಬಾರೊ ಸುದಾಮ ಬಾರೆನ್ನ ಮಿತ್ರ
ದಾರಿ ನಮ್ಮಲ್ಲಿಗೆ ತೋರಲಿಲ್ಲೇನೊ ಪ

ನಿನ್ನಯ ಪತ್ತೆಯು ಸಿಕ್ಕಲಿಲ್ಲೆನಗೆ
ಎನ್ನಯ ಪತ್ತೆಯು ನಿನಗತಿ ಸುಲಭ
ಎನ್ನತ್ತಿಗೆ ಕ್ಷೇಮದಿಂದಿರುವಳೆ ಪೇಳೊ
ನಿನ್ನತ್ತಿಗೆ ಕ್ಷೇಮದಿರುವಳು ಕೇಳು ೧

ಸತಿಸುತರನು ಕಾಣದುಂಟೇನೊ ಚಿಂತೆ
ಸತಿಸುತರನ್ನಿಲ್ಲಿ ಕರೆಸುವೆ ಕಾಣೊ
ನೀ ತಂದ ಒಡವೆಗಳೇನೇನು ತೋರೊ
ಪೃಥುಕದ ಗಂಟನೆ ಬಿಚ್ಚೊ ನೀ ಬೇಗ ೨

ಪೃಥುಕೈಕ ಮುಷ್ಟಿಯ ತಿಂದಾಗುತಿರಲು
ಕ್ಷಿತಿಪತಿ ಕರವನೆ ಪಿಡಿದಳು ಭೈಷ್ಮೀ
ಪೃಥುಕದ ಮುಷ್ಟಿಗೆ ಮೋಕ್ಷವ ಕೊಡುವಿ
ಮತ್ತಿನ್ನು ತಂದರೆ ಕೊಡುವುದೇನರಸ ೩

ತಟ್ಟಿ ಮುದ್ದಾಡಿ ಸುದಾಮನ ಬಿಡನು
ಕಷ್ಟವನರುಹಲು ತಿಳಿಯದು ಹರಿಗೆ
ಪುಟ್ಟಾದ ಮಕ್ಕಳ ಬಿಟ್ಟು ಬಂದಿರುವಿ
ಕಷ್ಟವು ನಿನಗೇನೊ ಮಿತ್ರ ನಾನಿರಲು ೪.

ರಾಜೇಶ ಹಯಮುಖ ಚರಣಾಬ್ಜಗಳನು
ಭಜಿಸುತ್ತ ನೀ ಪೋಗು ಮರೆಯದೆ ಮಿತ್ರನ
ತ್ಯಜಿಸುತ್ತಲಿರುವೆ ನೀ ವಿಷಯದ ಸುಖವ
ಮೂಜಗದೊಳಗಿಂಥ ಮಿತ್ರನೆಲ್ಲಿಹನು ೫

## ೧೩

ಭೀಮಾನದೀ ತೀರಾವಾಸ
ಪಾಹಿ ಪಾಹಿ ಪಾಂಡುರಂಗ ಪ

ಜಾರಚೋರನೆಂಬರೆಂದು
ಗೋಕುಲವ ಬಿಟ್ಟು ಬಂದೆ

ಜಾರಚೋರನೆಂದು ನಿನ್ನ
ಪುಂಡರೀಕ ಮುನಿಕರೆದ ॥ಪಾಂಡುರಂಗ॥ ೧

ಅನ್ಯ ಭೋಗಗಳನು ಬಿಟ್ಟು
ನಿನ್ನ ಪಾದವ ಧ್ಯಾನಿಸುವರ
ಮನದಿಷ್ಟವನೀವನೆಂದು
ತೋರಿಸುವೇ ಚಿಹ್ನೆಯಿಂದ ॥ಪಾಂಡುರಂಗ॥ ೨

ರಾಜೇಶ ಶ್ರೀಹಯಮುಖ
ಜ್ಞಾನಶೂನ್ಯಾರ್ತರ್ಗೆ ಸಾಯುಜ್ಯವಿತ್ತು ಪೊರೆವ ವಿಠಲ–
ನೆಂದು ಭೂಮಿಯೊಳು ಮೆರೆವ ॥ಪಾಂಡುರಂಗ॥ ೩

## ೧೪

ಭೂವರಾಹ ಪಾಲಿಸೆನ್ನ ಶ್ಯಾಮಲಾಂಗ ಕಾಮ ತಾತ
ಪಾವಮಾನ ಕರಗಳಿಂದ ಸೇವ್ಯಮಾನ ಚಾರು ಚರಣ ಪ

ಧರೆಯನ್ನೆತ್ತಿ ತೊಡೆಯೊಳಿಟ್ಟು
ಕರಗಳಿಂದಲಪ್ಪಿಕೊಂಬ
ಕರುಣದಿಂದ ಸುರರಿಗಭಯ
ವಿತ್ತ ದಿವ್ಯ ಕೋಲಮೂರ್ತಿ ೧

ಎರಡನೆಯ ಹಿರಣ್ಯಾಕ್ಷ
ದೈತ್ಯನನ್ನು ಮಥಿಸಿದಂಥ
ಧರಣಿಯಲ್ಲಿ ನರಕವನ್ನು
ಜನಿಸಿದಂಥ ಮಂಗಲಾಂಗ ೨

ದೇಶದೊಳ್ ಶ್ರೀಮುಷ್ಣವೆನಿಪ
ಕ್ಷೇತ್ರದೊಳಗೆ ನೆಲಸಿದಂಥ
ಶೇಷ ಶಿರದೊಳ್ ಚರಣವಿತ್ತ
ರಾಜನಾಥ ಹಯಮುಖಾತ್ಮ ೩

## ೧೫

ಯಾತರ ಭಯವಿದೆ ಹರಿಯ ಕಿಂಕರಗೆ
ಪಾರ್ಥಸೂತನ ದಯವಿದ್ದರೆ ಸಾಲದೇ ಪ

ನಿತ್ಯಕರ್ಮವ ಮಾಡಿ ಹರಿಯ ಪೂಜಿಪಗೆ
ಮತ್ತೆ ಇಂದ್ರಿಯಗಳ ಜಯಿಸಿಕೊಂಬವಗೆ
ಹರಿದಿನ ವ್ರತವನ್ನು ಬಿಡದೆ ಮಾಡುವಗೆ
ಸರ್ವ ಜೀವೋತ್ತಮ ಪ್ರಾಣನೆಂಬವಗೆ
ಜಗದೊಳು ಶ್ರೀ ಮಧ್ವರಾಯರ ಮತವೇ
ನಿಗಮಾರ್ಥವೆಂದು ಡಂಗುರವ ಸಾರುವಗೆ
ತೇಜಿಯನೇರ್ದು ದುರ್ಜನರ ಸಂಹರಿಸುವ
ರಾಜೇಶ ಹಯಮುಖನ ಒಲಿಸಿಕೊಂಬವಗೆ ೧

## ೧೬

ವರದರಾಜ ಪಾಲಿಸೆನ್ನ ಧರಣಿಯೊ–
ಳ್ನಿನ್ನಂಥ ರಸಿಕಾಗ್ರೇಸರರುಂಟೆ
ವರದರಾಜ ಪಾಲಿಸೆನ್ನ ಪ

ಕಾಂತೆಯ ಕಾಂತಿಯೊಳಿರುವೆ ನಿನ್ನಯ ಭಾವವರಿಯದ
ರಸಿಕರಾರಿಹರು
ಪರಮ ಪುರುಷ ನಿನ್ನ ಚರಣ ಸೇರಿದ ಭಕ್ತ ಜನರೆಲ್ಲ ರಸಿಕರಾಗಿಹರು ೧

ಅಜನ ಪೂಜೆಯ ಕೈಕೊಂಡಿರುವಿ
ದ್ವಿಜವರರಿಗಿಷ್ಟವ ಪಾಲಿಸಿರುವಿ
ಅಜನ ನೀನೆಂದು ತೋರಿಸುವಿ
ಯಜ್ಞಭೋಜನವನ್ನು ಮಾಡುತಿರುವಿ ೨

ಚೇತನಾಚೇತನಗಳಿಗೆ ಶ್ರೇಷ್ಠನರಸೂತ ರಾಜೇಶ ಹಯಮುಖ ನಿನ್ನ
ವಾತವಿಧಿ ಹರ ಮುಖ್ಯರು ಭಜಿಸುತಲಿ ನಿತ್ಯ
ಮುಕ್ತರಾದರು ಎಂದೊರೆಯುವುದು ಶ್ರುತಿಯು ೩

## ೧೭

ವಿಷ್ಣು ಮೂರ್ತಿಯೆ ಪಾಹಿ ಭುಕ್ತಿಪುರೇಶ
ಜಿಷ್ಣು ನಂದನಸೂತ ವೃಷ್ಣಿಕುಲೇಶ ಪ

ಮೃಷ್ಟಾನ್ನ ಭೋಜನವಿತ್ತ ಸಜ್ಜನರಿಗೆ
ಕಷ್ಟವ ಪರಿಹರಿಸೀಷ್ಟವ ಕೊಡುವಿ ।
ಶ್ರೇಷ್ಠ ನಾನೆಂಬುವ ಹೆಮ್ಮೆಯುಳ್ಳವರಿಗೆ
ಇಷ್ಟವ ಕೊಡದೇನೆ ದೂರ ಕೂಡಿಸುವಿ ೧

ಆರ್ತನಾಗುತ ನಿನ್ನ ಪಾದವ ಸೇರಿದ
ಭಕ್ತರಭೀಷ್ಟವ ಪೂರ್ತಿಗೊಳಿಸುವಿ ।
ಶಕ್ತ ಅಶಕ್ತನು ಎಂಬ ಭೇದಗಳಿಲ್ಲ
ಭಕ್ತನೆಂದರೆ ಸಾಕು ಪಾಲಿಸುತಿರುವಿ ೨

ಬಾಲಕನಾದರು ಕೊಟ್ಟ ನೈವೇದ್ಯವ
ಆಲಸ್ಯವಿಲ್ಲದೆ ಸ್ವೀಕರಿಸಿರುವಿ
ಬಾಲಕ ಪಿತ ಬಂದು ಪಾತ್ರವ ಕೇಳಲು
ಜಲದೊಳಗುಂಟೆಂದು ಸ್ವಪ್ನದಿ ನುಡಿದಿ ೩

ಬೇಸಿದ ಮಾವಿನ ಫಲದೊಳು ಪ್ರೇಮವೊ
ಬಾಲನ ನುಡಿಯೊಳಗಾಯ್ತೇನೊ ಪ್ರೇಮ ।
ದಾಸರೊಳ್ನಿನಗಿಪ್ಪ ಪ್ರೇಮವ ಜಗಕೆಲ್ಲ
ಬಾಲನಿಂದಲಿ ತೋರ್ದೆ ವಿಷ್ಣುಮೂರುತಿಯೆ ೪

ರಾಜೇಶ ಹಯಮುಖಕಿಂಕರಾಗ್ರಣಿ ವಾದಿ–
ರಾಜರಾಯರಿಗಿಷ್ಟವಿತ್ತು ಪಾಲಿಸಿದಿ ।
ಇಷ್ಟದ ಶಿಶುಗಳು ಬೇಡದಿದ್ದರು ಮಾತೆ
ಇಷ್ಟವಿತ್ತಂತೆ ನೀ ಪೊರೆಯುವೆ ದೊರೆಯೆ ೫

## ೧೮

ವೇದವ್ಯಾಸ ಮೂರುತೀ ಬದರಿಯೊಳಗಿರುತಿ
ಮೇದಿನಿಯೊಳ್ ನಿನ್ನ ಕೀರುತಿ ಪಸರಿಸುತಿರುತಿ ಪ

ಮಧ್ವಮುನಿಗಾನಂದದಿ ವೇದ ಶಾಸ್ತ್ರಾಂಬುಧಿಯೊಳು
ಇಂದಿಗಾಯ್ತೊಂಭತ್ತು ಶತವು ಚಂದದಿಂ ವತ್ಸರಗಳು ೧

ಕೀಟದಿಂದ ರಾಜ್ಯಭಾರ–
ವಾಟದಂತೆ ನಡೆಸಿದಿ ।
ಪುಟ್ಟತನದಿ ಮಾತೆಗೊಲಿದು
ಶ್ರೇಷ್ಠ ನೀನೆಂದೆನಿಸಿದಿ ೨

ರಾಜ ಧರ್ಮತನಯನಿಂದ
ರಾಜಸೂಯ ನಡೆಸಿದಿ ।
ರಾಜನಾಥ ಹಯಮುಖ ನೀ
ಮೂಜಗದಿ ಮೆರೆಯುತಿ ೩

## ೧೯

ಹರಿ ಬಂದ ನರಹರಿ ಬಂದ
ಕರಿಯ ಮೋಚಿಸಿದ ಸಿರಿವರ ಬಂದ ಪ

ದೇವ ಬಂದ ಪಾಂಡವರ ಭಾವ ಬಂದ
ಗೋವುಗಳ ಕಾವ ಕೃಪಾಸಿಂಧು ಬಂದ ೧

ಖ್ಯಾತ ಬಂದ ಪಾರ್ಥಸೂತ ಬಂದ
ವಾತಸುತ ಭೀಮಸೇನಪ್ರಿಯ ಬಂದ ೨

ಮುನಿ ಬಂದ ಜಾಮದಗ್ನ್ಯ ಬಂದ
ಭಾನುಕೋಟಿಸುಪ್ರಕಾಶ ವ್ಯಾಸ ಬಂದ ೩

ರಾಜ ಬಂದ ದಶರಥಸುತ ಬಂದ ।
ತೇಜಿಯೇರಿ ಮೆರೆದ ಕಲ್ಕಿದೇವ ಬಂದ ೪

ಶ್ರೀಶ ಬಂದ ಮಹಿದಾಸ ಬಂದ
ಭಾಸುರಾಂಗ ದೇವ ಶ್ರೀನಿವಾಸ ಬಂದ ೫

ನೀಲ ಬಂದ ಬಾಲಕೃಷ್ಣ ಬಂದ
ಬಾಲಧ್ರುವರಾಯಗೊಲಿದ ರಂಗ ಬಂದ ೬

ಕೋಲ ಬಂದ ಬಲಭದ್ರನ ತಮ್ಮ ಬಂದ
ರಾಜೇಶ ಶ್ರೀಹಯಮುಖ ದೇವ ಬಂದ ೭

## ಲಕ್ಷ್ಮೀಸ್ತುತಿ

### ೨೦

ದೇವಿ ಇಂದಿರೆ ನಿನ್ನೊಳ್ ದೇವ ಶ್ರೀಹರಿಗಿಪ್ಪ
ಪ್ರೇಮವ ಬಣ್ಣಿಸಲಸದಳ ಕಂಡ್ಯ ಪ

ಜಕ್ಕ ಜವ್ವನ ಪೋಗಬಾರದೆಂದೆನುತಲಿ
ಮಕ್ಕಳ ನಿನ್ನೊಳು ಜನಿಸನು ಕಂಡ್ಯ
ಪೊಕ್ಕಳೊಳಗೆ ತಾನೆ ಮಕ್ಕಳ ಪುಟ್ಟಿಸಿದ
ಅಕ್ಕರೆಯನು ಶ್ರೀದೇವಿ ನೀ ಕಂಡ್ಯ ೧

ಉರದೊಳು ತೊಡೆಯೊಳು ಕೊಳಲೊಳಾಭರಣದೊಳು
ಕರಗಳಿಂದಲಿ ಪಾರ್ಶ್ವದೊಳಗಾಲಿಂಗಿಸಿದಾ
ನೀರೊಳಕ್ರೂರಗೆ ಒಲಿಯುವಾಗಲು, ಮಹಾ
ನೀರೊಳು ಪ್ರಳಯದಿ ನಿನ್ನನು ಬಿಡನು ೨

ರಾಜಾಧೀರಾಜರು ಬಹುದಾರರೆಂಬರು
ರಾಜೀವಾಕ್ಷನಿಗೆ ನೀನೊಬ್ಬಳೆ ಕಂಡ್ಯ
ರಾಜೇಶಹಯಮುಖನಂಥ ಪ್ರೇಮಿಗಳುಂಟೆ
ರಾಜೇಶ ಶ್ರೀರಾಮನರಸಿಯೊಬ್ಬಳೆ ಕಂಡ್ಯ ೩

## (ಆ) ವಿವಿಧ ದೇವತಾ ಸ್ತುತಿ

### ೨೧

### ಬ್ರಹ್ಮನ ಸ್ತುತಿ

ಚತುರವದನಗೊಂದಿಸುವೆನು
ಮದನನಯ್ಯನ ಜ್ಯೇಷ್ಠಕುವರ
ಚತುರವದನಗೊಂದಿಸುವೆನು ಪ

ಜಗವ ಸೃಷ್ಟಿಪ ಗುರುವರನ ಮೂ-
ಜಗದೊಡೆಯನ ನಿತ್ಯ ನೋಡುತಿಹನ
ನಗವೈರಿಮುಖಸುರಪ್ರಿಯನ
ನಿಗಮೋಕ್ತ ಯಾಗ ಮಾಡುವನ ೧

ಸುರರು ಅಸುರರೆಂಬ ಭೇದ
ವಿರದೆ ಸರ್ವರಿಗಿಷ್ಟವೀವನೆ
ಪುರಹರಾದ್ಯಖಿಲಾಮರರು ನಿನ್ನ
ಸ್ಮರಿಸುತಾಜ್ಞೆಯ ಧರಿಸುವರು ೨

ಯಜ್ಞಕುಂಡದೊಳುದ್ಭವಿಸಿದ ಸ-
ರ್ವಜ್ಞ ರಾಜೇಶ ಹಯಮುಖ
ಸುಜ್ಞಾನ ವೇದಾರ್ಥಗಳನು ಬೋಧಿಸಿಷ್ಟ ಸಾ-
ಯುಜ್ಯವ ನಿನಗೆ ಕೊಟ್ಟಿಹನು ೩

## ೨೨

ವಾಣಿ
ವೀಣಾಪಾಣಿ
ಬ್ರಹ್ಮನರಾಣಿ
ಪಾಹಿ
ಕಿಂಕರ ಪಾಪಕೃಪಾಣೀ ಪ

ಖ್ಯಾತೇ ವೇದಮಾತೇ
ನಾಗಭೂಷಣ ಮಾತೇ
ಮಾಲಾಪುಸ್ತಕ ಶೋಭಿತಹಸ್ತೇ ೧

ಭವ್ಯೇ ಭವ್ಯಕೃತ್ಯೇ ಭವ
ಮುಖ್ಯರಿಗಭಯವನಿತ್ತೇ
ಮತ್ತೆ ಗಿರಿಜಾದಿಗಳಿಗೆ ನೀನತ್ತೆ ೨

ಶುಕ್ಲೇ ಪರಶುಕ್ಲೇ
ಶುಕ್ಲಹಂಸದಿ ಮೆರೆದಿರ್ಪೆ
ಶುಕ್ಲ ರಾಜೇಶ ಹಯಮುಖ ಭಕ್ತೇ ೩

## ೨೩

ಕಾಯೋ ಪ್ರಾಣೇಶ ಕೀಶಕುಲೇಶ
ವಾಯುಸುತನೆಂದು ಮೆರೆವ ಜೀವೇಶ ಪ

ಅಂಜನಾದೇವಿಯೊಳ್ ಜನಿಸಿಕೊಂಡಿರುವಿ
ಅಂಜದೆ ಲಂಕೆಗೆ ಬೆಂಕಿ ಹಚ್ಚಿರುವಿ
ಸಂಜೀವನವ ತಂದು ಕಪಿಗಳನುಳಿಸಿದಿ
ಕಂಜಾಕ್ಷಿ ಸೀತೆಗುಂಗುರವ ತಂದಿತ್ತೆ ೧

ಕುಂತಿದೇವಿಯ ಗರ್ಭದೊಳಗುದ್ಭವಿಸಿದಿ
ಪಾರ್ಥರೊಳ್ನೀನಗ್ರಗಣ್ಯನೆಂದೆನಿಸಿ
ಪಂಥದಿ ಮಗದಾಧಿಪತಿಯ ಸಂಹರಿಸಿ
ಕಾಂತೆಯ ತಲೆಯ ಕೂದಲನೆ ಕಟ್ಟಿಸಿದಿ ೨

ಪಾಜಕ ಕ್ಷೇತ್ರದೊಳ್ ನೀನವತರಿಸಿ
ರಾಜತಾಸನದಿ ಶ್ರೀಕೃಷ್ಣನನಿರಿಸಿ
ರಾಜೇಶ ಹಯಮುಖ ಕಿಂಕರನೆನಿಸೀ
ಮೂಜಗದಲಿ ಶ್ರೇಷ್ಠಗುರು ನೀನೆಂದೆನಿಸಿ ೩

## ೨೪

ಭಾರತಿ ಮರುತನ ರಾಣಿ ಶುಭ
ವಾಣಿಯಾಗಿರುವಿ ಕಲ್ಯಾಣಿ
ನಾರಸಿಂಹನ ಸೊಸೆಯಾದಿ ಸರ್ವ
ನಾರಿಯರಿಗೂ ನೀ ಮೇಲಾದಿ ಪ

ಭೀಮನು ಶೂದ್ರನೆಂದಿರಲು ನೀನು
ಶೂದ್ರೆಯೆಂದೆನಿಸುತಲಿರುವಿ
ಕಾಮಿ ಕೀಚಕನಿಗೆ ಮೃತ್ಯುವಾಗಿ ನಿನ್ನ
ಪ್ರೇಮವನೇನು ಬಣ್ಣಿಸಲಿ ೧

ಜುಟ್ಟನು ಕೈಯೊಳು ಸೆಳೆದ
ದುಷ್ಟ ದೈತ್ಯನ ಪಂಥದಿ ಮಥಿಸಿ
ಪಟ್ಟದರಸನು ತೋರಿದುದದ್ಭುತವು
ಸಿಟ್ಟು ನಿನಗಾಗಿ ತೋರ್ದುದಾಶ್ಚರ್ಯ ೨

ರಾಜಧರ್ಮನು ಸುಮ್ಮನಿರಲು
ರಾಜನಾಥ ಶ್ರೀಹಯಮುಖ ದಾಸ

ರಾಜ ಭೀಮನು ತೋರ್ದ ಶಾಂತತೆಯ
ರಾಜೀವಾಕ್ಷ ನಿನ್ನೊಳು ತೋರಿದ ಕರುಣ ೩

## ೨೫

ಶೇಷಮೂರುತಿ ಪೋಷಿಸೆನ್ನ
ಹಾಸಿಗೆಯಾಗಿ ನೀ ಹರಿಯ ಪೊತ್ತಿರುವಿ ಪ

ಶ್ವೇತದ್ವೀಪದ ಮಧ್ಯದಲ್ಲಿ
ದೇವನರಸಿಯ ಕೂಡುತ್ತಲಿರಲು
ಭಕ್ತಿಯಿಂದಲಿ ಕಂಗಳಿಂದ
ಬಿಡದೆ ನೋಡುತಲಿಪ್ಪ ಸಮಯ ೧

ಮಗಳ ಲಜ್ಜೆಯ ಕಂಡು ಪಿತನು
ಹಾಲಿನ ತೆರೆಯಿಂದ ಕಣ್ಣನೆ ಮುಚ್ಚಿಸಿಹನು
ಮಗಳ ಮೇಲಿನ ಪ್ರೀತಿ ಪಿತಗೆ
ಯೆಣಿಸಲಾಗದು ಲೋಕದೊಳಗೆ ೨

ರಾಜೇಶ ಹಯಮುಖ ಹರಿಗೆ
ಮಂಚವೆಂದರೆ ನೀನೆ ಖರೆಯು
ರಾಜರಾಜರಿಗಿಂಥ ಮಂಚ
ದೊರಕದೆಂದೆಂದಿಗೂ ದೇವ ೩

## ೨೬

ಗರುಡದೇವನೇ ಪೊರೆಯೊ ಎನ್ನನು
ಹರಿಯ ವಾಹನನಾಗಿ ಮೆರೆಯುವ
ಗರುಡದೇವನೇ ಪ

ಮಾತೆಯ ಮಾನವನುಳಿಸಲೋಸುಗ ।
ಸುಧೆಯ ಕಲಶವ ಪೊತ್ತು ತಂದೆಯೋ ೧

ಹರಿಯು ನಿನ್ನೊಳು ಪೇಮದಿಂದಲೀ
ಧರಣಿಯೊಳವತರಿಸಲೊಲ್ಲನು ೨

ರಾಕ್ಷಸಾರಿ ರಾಜೇಶ ಹಯಮುಖ
ಪಕ್ಷಿರಾಜನೊಳಿಪ್ಪ ಭಾಗ್ಯವು ೩

## ೨೭

ಕೈಲಾಸನಾಥ ಮಹೇಶ ಈಶ
ಶೈಲೇಶ ತನಯೇಶ ಬಾಲಾರ್ಕ ಸಮಭಾಸ ಪ

ಶೂಲಾಕ್ಷ ಡಮರುಗಳಿಂದ ಶೋಭಿಪ ಹಸ್ತ
ತಾಲಾಂಕನನುಜನೊಳ್ಸಮರಗೈದೀರ್ಪ
ಫಾಲಾಕ್ಷದಿಂದಲಿ ಕಾಮನ ದಹಿಸಿರ್ಪ
ಶೂಲಿಯ ಮಹಿಮೆಯನೇನು ಬಣ್ಣಿಸಲಿ ೧

ವೈಷ್ಣವಾಗ್ರಣಿಯೆಂದು ಪೆಸರುಗೊಂಡಿರುವ
ವಿಷ್ಣುಭಕ್ತರೊಳಗತಿ ಪ್ರೇಮವಿರುವ
ಕೃಷ್ಣ ದ್ವೈಪಾಯನರ ಸುತರಾಗಿ ಶೋಭಿಪ
ಸನಕಾದಿಗಳ ಶಿಷ್ಯ ದುರ್ವಾಸರೆನಿಪ ೨

ನಂಜುಂಡನೆನಿಸಿರ್ಪ ಪ್ರಖ್ಯಾತ ಮಹಾದೇವ
ಕಂಜಜಾತನ ಸುತನೆನಿಸಿರ್ದ ದೇವ
ರಾಜೇಶ ಹಯಮುಖ ಭಕ್ತಪುಂಗವ ನೀನು
ಅಂಜಲಿ ಬಂಧದಿಂ ನಮಿಪೆ ನಿನ್ನಡಿಗೆ ೩

## ೨೮

ದೇವಿ ನೀ ಗಿರಿಜಾತೆಯು
ನಿನ್ನಯ ಕಾಂತ ರಜತಾಖ್ಯಗಿರಿನಾಥನು
ನೀನು ಭವಾನಿಯು ನಿನ್ನ ಕಾಂತನು ಭವದೇವನಾಗಿರುವ ಪ

ನಿನ್ನ ಯೌವನಭಂಗದ ಭೀತಿಯ ಕಂಡು
ವಿಘ್ನೇಶನನು ಪುಟ್ಟಿಸಿ
ಪ್ರಣಾತ್ಮಗಳನೊಬ್ಬ ತನುಜಗೆ ಕಲ್ಪಿಸಿ
ಕೃತಕೃತ್ಯನಾದ ನಿನ್ನರಸ ಕಾಣಮ್ಮ ೧

ನಿನ್ನ ಕಾಂತನು ಪಾರ್ಥನಿಗೆ ಬಾಣವನೀಯಲು
ನೀನು ಅಂಜಲಿಕಾಸ್ತ್ರವನು ಪ್ರೇಮದಿ
ನಿನ್ನ ಕಾಂಚನ ಚಿತ್ತವರಿತು ಕೊಡಲು ನಿನ್ನೊಳ್
ಪಾರ್ಥಸೂತನ ದಯವೆಷ್ಟೆಂಬೆ ೨

ರಾಜೇಶ ಹಯಮುಖನ ದಯದಿಂದ ನಿನ್ನ ಪತಿ
ವಿಷವ ಜೀರ್ಣಿಸಿಕೊಂಡನು
ರಜತಾದ್ರಿಯೊಳಗಿರುವ ಶಿತಿಕಂಠ ಶಂಕರನ
ಮಹಿಮೆಯದ್ಭುತವಲ್ಲವೇ ಪೇಳು ಗಿರಿಜೆ ೩

## ೨೯

ಧೀರ ಕುಮಾರ ಮಾರಾವತಾರ
ಪಾಹಿ ತ್ರ್ಯಂಬಕನ ಕುಮಾರ ಪ

ತಾರಕಾಸುರ ಸಂಹಾರ ದೇವ
ನಿನ್ನಲಿ ದೇವಸೈನ್ಯದ ಭಾರ
ಗಿರಿಜಾದೇವಿಯ ಮೋಹದ ಕುವರ
ಪೊರೆಯೊ ಎನ್ನನು ಕರುಣಾಸಾಗರ ೧

ಅಮರಸೇನೆಗೆ ನೀನಗ್ರೇಸರ
ಭೂಸುರ ಹತ್ಯಾ ಪಾಪಸಂಹಾರ
ಸಮರದೊಳಗೆ ನೀನು ಶೂರ
ನಮಿಸುವರಿಗಿಷ್ಟ ಫಲವೀವ ವೀರ ೨

ವಿಪ್ರಜನರಿಗತಿಪ್ರಿಯ
ವಲ್ಲೀಸೇನೆಗೆ ಪ್ರಾಣಪ್ರಿಯ
ವ್ಯಾಪ್ತ ರಾಜೇಶ ಹಯಮುಖನ
ಚಕ್ರಾಭಿಮಾನಿ ಮೂರುತಿಯಾಗುತಿರುವಿ ೩

## ೩೦

ಗಂಗೆ ಮಂಗಲ ತರಂಗೆ ಪಾಹಿ
ಪಾಪಭಂಗೆ ಹರಿಪಾದಸಂಗೆ ಪ

ಗಂಗೆ ಹರಿಪಾದದಿಂದ ಉದ್ಭವಿಸಿದೆ
ಪರಮೇಷ್ಠಿಯ ಪಾತ್ರೆಯೊಳಗೆ ನಿಂತೆ
ಹರಶಿರದೊಳು ನಿತ್ಯ ನೆಲಸಿದೆ
ಮತ್ತೆ ಸ್ಮರಿಪರ ಚಿತ್ತದೊಳ್ ವಾಸಿಸಿದೆ ೧

ಸಗರಪುತ್ರರ ಪವಿತ್ರಿಸಿದೆ
ಗಗನದೊಳ್ ಹರಿಯುವ ನದಿಯಾದೆ
ನಗವರ ಕೈಲಾಸಕ್ಕಿಳಿದೆ
ಜಗವರಿಯೆ ಜಹ್ನುತನಯೆಯಾದೆ ೨

ರಾಜೇಶ ಹಯಮುಖ ತನಯೆ
ರಾಜಧರ್ಮನು ನಿನ್ನ ತಟದಲ್ಲಿ
ಮೂಜಗವು ತಾ ಪೊಗಳುವಂದದಿ
ವಾಜಿಮೇಧನ ಗೈದನಾದರದಿ ೩

## ೩೧

ರಜತಪೀಠವೆ ಭೂ ವೈಕುಂಠ
ಇಲ್ಲಿ ಮಧ್ವ ಪುಷ್ಕರಿಣಿಯೆ ವಿರಜೆ
ಅಲ್ಲಿ ರಾಜಿಪರಷ್ಟಮಹಿಷಿಯರು
ಇಲ್ಲಿ ರಾಜಿಪರಷ್ಟಯತಿಗಳು ಪ

ಅಲ್ಲಿ ಎಲ್ಲರೊಳಿರುವದು ಭಕ್ತಿ
ಇಲ್ಲಿ ಎಲ್ಲಿ ನೋಡಲು ವಿರಕ್ತಿ
ಅಲ್ಲಿಪ್ಪ ಜನರಿಗೆ ಮುಕ್ತಿ
ಇಲ್ಲಿ ಎಲ್ಲಿ ನೋಡಿದರಲ್ಲಿ ಭುಕ್ತಿ ೧

ಅಲ್ಲಿ ಮತ್ತಿಲ್ಲ ಜನರಿಗೆ ಪುಣ್ಯ
ಇಲ್ಲಿ ಲಭಿಸುವುದೆಲ್ಲವೂ ಪುಣ್ಯ
ಅಲ್ಲಿ ಹೋದವರಿಗಿಲ್ಲಾಗಮನವು
ಇಲ್ಲಿ ಬಂದವರಿಗಿಲ್ಲ ಮರು ಜನನ ೨

ಪೂಜೆಯ ವೈಕುಂಠದೊಳಗೆ
ಸರ್ವಜನರು ಮಾಡಬೇಕೆಂದಿಹರು
ರಾಜೇಶ ಹಯಮುಖಕೃಷ್ಣ
ಮಧ್ವಾಚಾರ್ಯರೊಬ್ಬರ ಪೂಜೆಗೊಂಬ ೩

## ೩೨

ಸೋದಾಕ್ಷೇತ್ರವೆ ದಿವ್ಯ ಕ್ಷೇತ್ರ
ಬಂದ ಜನರಿಗಿಷ್ಟವನೀವ ಕ್ಷೇತ್ರ
ವಾದಿರಾಜರು ವಾದದಿಂದ ವಾದಿಸಿ
ವೀರಶೈವರ ಗೆದ್ದ ಕ್ಷೇತ್ರ ಪ

ಒಂದು ಭಾಗದಿ ರೂಪ್ಯಪೀಠ ಮ–
ತ್ತೊಂದು ಭಾಗದಿ ಸೋದಾಕ್ಷೇತ್ರ

ಕುಂದು ಎಳ್ಳಷ್ಟಿಲ್ಲದೆ ತೋರ್ಪು
ದೆಂದು ಹರಿಭಕ್ತರಾದರಿಸುವರು ೧

ಒಂದೇ ಸ್ಥಾನದಿ ಶ್ವೇತದ್ವೀಪ ಮತ್ತೆ
ವೈಕುಂಠನಂತಾಸನಗಳು
ಒಂದಾಗಿ ಶೋಭಿಸುತಿರುವ
ಚೆಂದವೇನೆಂದು ಪೇಳಲಿ ಮನವೆ ೨

ರಾಜೇಶ ಹಯಮುಖ ಚರಣ
ಕಂಜ ಮಧುಪನಂತಿರುವ ಶ್ರೀಭಾವಿ–
ಕಂಜಜಾತನ ಪದಕರುಹ
ವಾದಿರಾಜರಾಯರ ದಿವ್ಯ ಕ್ಷೇತ್ರ ೩

## ೩. ಗುರುನಮನ

### ೩೩

ವಿಷ್ಣುತೀರ್ಥರೆ ಪಾಲಿಸೀ ನಿರಂತರ
ಪೂರ್ಣಪ್ರಜ್ಞರ ಸೋದರ
ಮಧ್ಯಗೇಹರ ಸುತನೆನಿಸಿರ್ದ ಗುರುವರ ಪ

ಮಧ್ವಶಾಸ್ತ್ರವು ಜೀರ್ಣವಾಗುವ ಸಮಯದಿ
ಬದ್ಧಾದರದಿ ಬಂದುದ್ಧರಿಸುವ ಗುರುವರ ೧

ಅಣ್ಣನೊಳ್ನಿಮಗಿಪ್ಪ ಶ್ರದ್ಧೆಯ ಕಂಡರೆ
ಜಾನಕೀಪತಿಯೊಳು ಲಕ್ಷುಮಣನಂತೆ ೨

ವಾಲ್ಮೀಕಿಗಳ ಶಿಷ್ಯಕುಶಲವರಂತೆಯೇ
ಚೆಲ್ವ ವ್ಯಾಸರು ಅನಿರುದ್ಧರು ನಿಮಗೆ ೩

ಪಾಜಕ ಕ್ಷೇತ್ರದೊಳ್ಸನ್ಯಾಸಾಶ್ರಮಿಯಾಗಿ
ರಾಜೇಶ ಹಯಮುಖ ಕೃಷ್ಣನರ್ಚಿಸಿದ ೪

## ೩೪

ಜಯ ಜಯ ಜಯ ಮುನಿವರ್ಯ
ಜಯ ಮಧ್ವಶಾಸ್ತ್ರ ವ್ಯಾಖ್ಯಾನಾತಿಗೇಯ ಪ

ಮಂಗಲವೇಡೆಯೊಳುದುಭವಿಸುತ ಜಗ–
ನ್ಮಂಗಲಕರವಾದ ಟೀಕೆಯ ರಚಿಸಿ
ಮಂಗಲಮೂರುತಿ ರಾಮನ ಭಜಿಸುತಾ–
ನಂಗನ ಜಯಿಸಿದ ಮುನಿಕುಲ ತಿಲಕ ೧

ವಿದ್ಯಾರಣ್ಯನೆಂಬ ಖಾಂಡವ ವನವನೆ
ಯಾದವೇಶನ ಸಖನಂತೆ ನೀ ದಹಿಸಿ
ಮಧ್ವಶಾಸ್ತ್ರವೆಂಬ ರತ್ನವ ಜನರಿಗೆ
ಸುಧೆಯಂತೆ ಕುಡಿಸಿದ ಯತಿವಂಶ ರತ್ನ ೨

ಮಾಧ್ವಗ್ರಂಥವ ನೀನು ಬಂಧುವೆಂದೆಣಿಸುತ
ರಾಜೇಶ ಹಯಮುಖ ಶ್ರೀರಾಮಚಂದ್ರ
ಪಾಂದಾಂಬರುಹವನ್ನೆ ಬಿಡದೆ ಸೇವಿಸುತಲಿ
ವಾದೀಭಗಳಿಗೆ ಮೃಗೇಂದ್ರನಾಗಿರುವಿ ೩

## ೩೫

ಭಳಿರೆ ವಾಗೀಶ ತೀರ್ಥಾಖ್ಯ ಮುನಿವರ್ಯ
ಇಳೆಯೊಳು ನಿನಗೆಣೆ ಕಾಣೆ ನಾ ಯತಿವರ್ಯ ಪ

ಜಗದೊಳು ದುರ್ವಾದಿ ಮತವ ಖಂಡಿಸಿದ
ಜಗದೀಶ ಹರಿಯೆ ಸರ್ವೋತ್ತಮನೆಂದು

ನಿಗಮಾರ್ಥವನು ಜಗದಿ ಸಾರಿದಾ ಕುಜನೇಭ
ಮೃಗರಾಜ ವಾದಿರಾಜರಿಗೆ ಗುರುವೆನಿಸಿದೆ ೧

ಭಾವೀ ಸಮೀರ ಶ್ರೀವಾದಿರಾಜರ ಜನ್ಮೋ–
ತ್ಸವ ಕಾಲವರಿತಾಗ ಸುಮಪುರಕೆ ನೀನು
ತವಕದಿಂದಲಿ ಪೋಗಿ ಬಾಲಕನ ರಕ್ಷಿಸಿ
ಅವನನೆ ಯತಿರಾಜ ಪಟ್ಟದೊಳಿರಿಸಿದಿರಿ ೨

ಗುರು ಮಧ್ವರಂತೆ ನೀ ಸರ್ವಶಾಸ್ತ್ರವ ಮಾಡಿ
ಧರಣಿಯೊಳು ರಾಜೇಶ ಹಯಮುಖನ ಚರಣ
ಸ್ಮರಿಸಿ ನೂರಿಪ್ಪತ್ತು ವತ್ಸರದ ಕಾಲದಲಿ
ಇರುವಿರೆನುತಲಿ ಅವರ ಹರಸಿದಿರಿ ದೊರೆಯೆ ೩

## ೩೬

ಜನ್ಮ ಸಫಲ ಕಾಣಿರೋ
ನಮ್ಮ ಗುರು ವಾದಿರಾಜರಾಯರ ಕಂಡು
ಜನ್ಮ ಸಫಲ ಕಾಣಿರೋ ಪ

ಯುಕ್ತಿ ಮಲ್ಲಿಕೆಯೆಂಬ ಗ್ರಂಥ ಮಾಡಿಹರು
ಮತ್ತೆ ಮುತ್ತಿನ ಸಿಂಹಾಸನವನೇರಿಹರು
ಮತ್ತೆ ದುರ್ವಾದೀಭಗಳಿಗೆ ಮೃಗೇಂದ್ರರು
ಸೂತ್ರನಾಮದಿ ಮುಂದೆ ಮೆರೆವರು ೧

ವ್ಯಾಸಕೂಟಗಳಲ್ಲಿ ಶ್ರೇಷ್ಠರಾಗಿಹರು
ದಾಸಕೂಟಗಳಲ್ಲಿ ರತ್ನದಂತಿಹರು
ಭಾಸುರಕಾಯದಿ ನೂರ ಇಪ್ಪತ್ತು
ವರ್ಷಗಳೊಳಗಿದ್ದು ಮೆರೆದವರು ೨

ಮೂಜಗದೊಳಗಿಂಥ ಗುರುಗಳೆಲ್ಲಿಹರು
ಕಂಜಸುತನ ಪದವೇರುವವರು
ರಾಜೇಶ ಹಯಮುಖ ಕಿಂಕರಾಗ್ರಣಿಗಳು
ರಾಜಿಪ ಶ್ರೀಸೋದಾಪುರದೊಳಗಿಹರು ೩

## ೩೭

ಭಾವಿಸಮೀರ ಗುರು ಶ್ರೀ ವಾದಿರಾಜ
ನಿಮ್ಮ ಸೇವಿಪ ಜನರಿಗಭೀಷ್ಟವನೀವ ಪ

ಹನುಮ ಭೀಮ ಮಧ್ವರೊಡಗೂಡಿ ವೃಂದಾವನ-
ದೊಳು ಮೆರಸುವ ಮುಂದಿನ ಸೊಬಗ
ಪಂಥದಿ ವೀರಶೈವರ ಗುರುವನೆ ಗೆದ್ದು
ಹತ್ತಿದೆ ಮುತ್ತಿನ ದಿವ್ಯ ಪೀಠವನು ೧

ಕುಂಡಿನೇಶನ ತನುಜಾತೆಯ ಪತ್ರವ
ಪುಂಡರೀಕಾಕ್ಷನಿಗರ್ಪಿಸಿದ್ಯಲ್ಲೋ
ಮದುವೆಯ ಸಮಯದಿ ಶಪಥದಿಂದಲಿ ಬಂದು
ವಧುವಿನ ಭಾಗ್ಯವನುಳಿಸಿದೆಯಲ್ಲೋ ೨

ಅರಿತುಂಡು ವಿಷವ ನೀನರಗಿಸಿಕೊಂಡ್ಯಲ್ಲೊ
ನರಪತಿತನಯನ ಬದುಕಿಸಿದ್ಯಲ್ಲೋ
ಭಜಿಸುತ ರಾಜೇಶ ಹಯಮುಖನಂಘ್ರಿಯ
ತ್ರಿಜಗದೊಳಧಿಕ ಸೋದಾಪುರದೊಳು ನಿಂದ್ಯೋ ೩

## ೩೮

ರಾಜರ ಭಾಗ್ಯವಿದು
ವಾದಿರಾಜರ ಭಾಗ್ಯವಿದು ಪ

ಸೋದೆರಾಜರ ಭಾಗ್ಯವಿದು
ರಾಜರ ಭಾಗ್ಯವನೆಂತು ವರ್ಣಿಪೆನು ನಾ
ವಾಜಿವದನನ ಸದಾ ಪೂಜಿಪ ಭಾಗ್ಯವು ೧

ಐದು ಪರ್ಯಾಯದಿ ಕೃಷ್ಣನ ಪೂಜೆಯ-
ನಾದರದಲಿ ರಚಿಸಿರ್ದ ವಿಭವವಿದು ೨

ಸುರರಭಿಮಾನವ ತಡೆದು ನಿಲ್ಲಿಸಿದ
ಮರುತನ ಪದವ ಮುಂದೇರುವ ಭಾಗ್ಯವು ೩

ಬದರಿಕಾಶ್ರಮದಿಂದ ನದಿಯ ಪೆತ್ತನ ತಂದು
ಸದನದೊಳಿರಿಸಿದುದತಿ ವಿಭವಾ ೪

ಸೋದೆಯ ಪುರದಿ ರಾಜೇಶ ಹಯಾಸ್ಯನ
ಪಾದವ ಭಜಿಸುತ ನಿಂದಿಹ ಭಾಗ್ಯವು ೫

## ೩೯

ವಾದಿರಾಜರ ಪದವ ಸ್ಮರಿಸುವೆ ಅ–
ಗಾಧ ಮಹಿಮರ ಸದಯ ಹೃದಯರ ಪ

ಮೋದತೀರ್ಥರಾಗಮದ ಸಾರವ
ಸಾಧು ಜನರಿಗೆ ಬೋಧಿಸಿರ್ಪರ
ವಾದದಿಂದಲಿ ವೀರಶೈವರ
ಗೆದ್ದು ಮುತ್ತಿನ ಪೀಠವೇರ್ದರ ೧

ಪಾದದಿಂದಲಿ ಸಕಲ ತೀರ್ಥವ
ಮೋದದಿಂದ ಚರಿಸಿ ತೀರ್ಥ ಪ್ರ–
ಬಂಧ ಗ್ರಂಥವ ರಚಿಸಿ ಮಾನ್ಯರಾ
ಗಿರ್ದ ಗುರುಗಳನೆಂತು ಬಣ್ಣಿಪೆ ೨

ರಾಜಸಭೆಯೊಳು ರಾಜಭೀಷ್ಮಕ
ತನುಜೆಯರಸನ ಸ್ತುತಿಪ ಕಾವ್ಯವ
ಈ ಜಗತ್ತಿನೊಳ್ ಶ್ರೇಷ್ಠ ಕಾವ್ಯವೆಂ
ದಿದನೆ ಗಜದೊಳು ಮೆರೆಸಿದರಸನು ೩

ಒಂದುನೂರ ಇಪ್ಪತ್ತು ವರ್ಷದೊಳ್
ಸಿಂಧುಶಯನನ ಸೇವಿಸುತ್ತಲಿ

ಇಂದ್ರದತ್ತ ವಿಮಾನದಿಂದಲಿ
ಸತ್ಯಲೋಕವನ್ನೈದಿದ ಗುರುವರ ೬

ಯುಕ್ತಿಮಲ್ಲಿಕಾ ಗ್ರಂಥದಿಂದ
ರಾಜೇಶ ಹಯಮುಖಾನಂತ ಗುಣಗಳ
ಪೊಗಳುತಿರ್ಪರ ರಾಗಶೂನ್ಯರ
ಋಜು ಗಣೇಶರ ಜ್ಞಾನಪೂರ್ಣರ ೫

## ೪೦

ವೇದವೇದ್ಯರ ವಂದಿಸುವೆನು
ವಾದಿರಾಜರ ಪ್ರಿಯ ಶಿಷ್ಯರ
ವೇದವೇದ್ಯರ ವಂದಿಸುವೆನು ಪ

ವಾದಿರಾಜರ ಪಾರ್ಶ್ವದಲ್ಲಿಹ
ವಾದಿಗಳ ದುರ್ವಾದ ಕೆಡಿಸಿದ
ಮಧ್ವಶಾಸ್ತ್ರವನುದ್ಧರಿಸಿದ
ವೇದನಿಧಿಗಳ ತಾತರಾಗಿಹ ೧

ರೂಪ್ಯಪೀಠದಿ ಕೃಷ್ಣಮಂದಿರ
ರೂಪಳಿದುದನುದ್ಧಾರ ಮಾಡಿದ
ಪಾಪರಹಿತರ ಕೋಪಶೂನ್ಯ ಸೋ-
ದಾಪುರದೊಳಗೆ ಇರ್ಪ ಯತಿಗಳ ೨

ಯಾದವೇಶ ರಾಜೇಶ ಹಯಮುಖ
ಪಾದಕಮಲವ ಬಿಡದೆ ಸ್ಮರಿಸುವ
ಸಾಧುಜನರಿಗಾಧಾರರಾಗಿಹ
ವಾದಿರಾಜರ ಪದದೊಳಿರ್ಪರ ೩

## ೪೧

ವೃಂದಾವನಾಚಾರ್ಯರ ಭಾವಿಸಮೀರರ
ವೃಂದಾವನದಿ ಶಾಸ್ತ್ರದ ವೃಂದವನೆ ಪಠಿಸುತ
ಚಂದದಿ ಲೋಕದೊಳಗತ್ಯಂತ ಪೂಜ್ಯರ
ನಮಿಸುವೆನು ವಿಶ್ವಪ್ರಿಯರ ಪ

ವಿಷ್ಣುತೀರ್ಥರ ಪೀಠದಿ ವಾಸಿಸಿ ವಾಸಿಷ್ಠ
ಕೃಷ್ಣನ ದಯದಿ ದ್ವಾದಶಾಬ್ದಗಳಲ್ಯುಪೋಷಣ
ಕೃಷ್ಣನೊಳಗರ್ಪಿಸಲು ಪ್ರೇಮದಿ ಕೃಷ್ಣ
ಭೂಪನು ರತ್ನ ಮಂಟಪವನ್ನ ನಿಮಗರ್ಪಿಸಿದನು ೧

ಕೇರಳ ನೃಪವರ್ಯನು ನಿಮ್ಮಯ ಶಿಷ್ಯವರ್ಯ–
ನಾಗಿರುತಿಹನು ಸಾರಮಧ್ವಾಗಮವ
ನಿಮ್ಮೊಳಗೋದಿ ಪಂಡಿತವರ್ಯ–
ನೆನಿಸುತ ವೀರ ವಿಷ್ಣುಭಕ್ತನಾದನು ೨

ರಾಜೇಶ ಹಯಮುಖನ ಕಿಂಕರರೊಳು
ನಿಮಗೆಣೆ ನಾ ಕಾಣೆನು
ರಾಜರಾಜರು ಪೊಂದದಿರುತಿಹ ನಾಕಿನಾಥನ
ಪದವನೇರುವ ಗುರುವರ್ಯರನೆ ನಮಿಪೆ ೩

## ೪೨

ವರ ಮಂತ್ರಾಲಯದೊಳು ಘನವಾಗಿ ನೆಲಸಿರ್ಪ
ಪರಮ ಸದ್ಗುರುವರ್ಯ ಶ್ರೀ ರಾಘವೇಂದ್ರ ಪ

ಭುವನಾದ್ರಿಯೊಳಗುದುಭವಿಸುತ್ತ ರವಿಯಂತೆ
ತವಕದಿಂ ದಿನದಿನವು ತೇಜವನು ಬೆಳಗುವೆ ೧

ನರನಂತೆ ಮೆರೆಯುವ ಜಯಮುನಿಕೃತಶಾಸ್ತ್ರ
ಪರಿಮಳವನು ನೀನು ಪಸರಿಸಿದೆಯಲ್ಲವೆ ೨

ಮಧ್ವಮತವೆಂಬ ದುಗ್ಧಸಾಗರದೊಳು ।
ಉದ್ಭವಿಸಿದ ಪೂರ್ಣ ಹಿಮಕರ ತೇಜ 3

ಅಸುರನಂದನನಾಗಿ ನರಹರಿಯನೆ ಕಂಡ
ಮಸ್ಕರಿವರ ಸಿರಿ ಗುರುರಾಘವೇಂದ್ರ ४

ರಾಜೇಶ ಹಯಮುಖ ಭಜಕರೊಳಗೆ ನೀನು
ರಾಜಿಪ ಸುರತರುವಂತಿರ್ಪೆ ಗುರುವೆ ೫

## ೪೩

ಭೂತನಾಥ ಪಾಲಿಸೆನ್ನ ನಾರಾಯಣ
ಭೂತನಾಥನೆ ಪಾಲಿಸೆನ್ನ ಪ

ಕರ್ಣವಿಕರ್ಣಾದಿಗಣಗಳಿಂದಲಿ ಕೂಡಿ
ಸ್ವರ್ಣದಿ ಭಾಸುರಾಂಗ ಶ್ರೀರಾಜರ
ಸ್ವರ್ಣದ ಪಾಲಕಿಯನ್ನು ಮುಂಭಾಗದಿ
ಭಕುತಿಯಿಂದಲಿ ಪೊತ್ತ ಶ್ರೀ ಭೂತರಾಜ ೧

ಬದರಿಕಾಶ್ರಮದಿಂದ ನದಿಯ ತಾತನ ದಿವ್ಯ
ಸದನವ ಶ್ರೀಸೋದಾಕ್ಷೇತ್ರಕ್ಕೆ ತರಲು
ಬೆದರದೆ ವಿಘ್ನವ ತಂದ ದೈತ್ಯನ ರಥ
ಚಕ್ರದಿಂದಲಿ ಕೊಂದು ರಥವ ಬೇಗದಿ ತಂದೆ ೨

ಧನಪನ ಕೋಶದೊಳಿಪ್ಪ ಮೌಳಿಯ ವೇಗ –
ದಿಂದಲಿ ನೀ ತಂದು ವಾದಿರಾಜರಿಗಿತ್ತೆ
ಅನುಮಾನವಿಲ್ಲದೆ ತಂದು ಶ್ರೀರಾಜೇಶ
ಹಯಮುಖನನ ಚರಾಗ್ರಣಿಯಾಗಿ ಮೆರೆದೆ 3

## ೪೪

ಭೂತರಾಜ ಕರುಣಿಸೊ ಭೂತರಾಜ
ಮುಂದೆ ಬೆಳ್ಳಿಯ ಗಿರಿನಾಥನೆಂದೆನಿಸುವ ಭೂತರಾಜ ಪ

ವಾದದಿಂದಲಿ ಸೋತು
ವಾದಿರಾಜರ ಸೇರ್ದೆ
ಭೂತಾದಿಗಳ ಬೇಗದಿಂದಲೋಡಿಸುವಿ ೧

ವಾದಿರಾಜರ ಬಲಭಾಗದಿ ನಿಂತಿರ್ದೆ
ಬಂದ ಜನರಿಗಿಷ್ಟ
ಕೊಟ್ಟು ಪೋಷಿಸುವಿ ೨

ರಾಜೇಶ ಹಯಮುಖ–
ನೊಲಿಸಿ ಕೊಂಡಿಹ ಋಜು
ಗಣನಾಥ ಶ್ರೀವಾದಿರಾಜ ಕಿಂಕರವರ್ಯ ೩

## ೪೫

ವಿಶ್ವಾಧೀಶರ ನಮಿಪೆ
ಗುರುವರ್ಯ ವಿಶ್ವಪ್ರಿಯ ಶಿಷ್ಯರ ಪ

ಆಂಗ್ಲದೇಶದ ರಾಣಿಯು ನಿಮ್ಮಯ
ಶಾಸ್ತ್ರ ಸಂಪದ ಮಹಿಮೆಯನು
ಆಂಗ್ಲೇಯ ಜನರಿಂದ ತಿಳಿದು ತಾ ಬಹುಮಾನ–
ವಾಂಗ್ಲೇಯ ಭಾಷೆಯೊಳಿತ್ತಳಾದರದಿ ೧

ನ್ಯಾಯಸುಧೆಯ ಪಾಠವ ಯತಿವರ್ಯ
ವಿಬುಧಪ್ರಿಯರೆ ಮುಖ್ಯರು
ಆಯಾಸವಿಲ್ಲದೆ ಪಠಿಸುತ್ತ ನಿಮ್ಮೊಳು
ಪಂಡಿತಾಗ್ರಣಿಯಾದರು ೨

ಅರುವತ್ತನೆಯ ವರ್ಷದಿ ಪ್ಲವಾಬ್ದದಿ
ರಾಜೇಶ ಹಯಮುಖನ ಚರಣವ ಸ್ಮರಿಸುತ್ತ
ಸ್ಮರತಾತನನ್ನೈದಿದ ಕರುಣಾಸಮುದ್ರರ
ಚರಣಕ್ಕೆ ನಮಿಸುವೆ ೩

# ಅ. ಶ್ರೀಹರಿ ಲಕ್ಷ್ಮಿಯರು

## ೪೬

ಅನುಮಾನವೇತಕೆ ಅನುಗುಣವಾಗಿಯೇ
ಪ್ರಣವರೂಪನ ಹೋಗಿ ನೋಡಿ ಬರುವುದಕೆ ಪ

ಹೋಗುವಯೆಂದೆಂಬ ಮಾತು ನಿಶ್ಚಯವಾಗಿ
ಬೇಗದ ಪಯಣದಲಿ
ನಾಗಗಿರೀಶನ ಕಂಡು ಕಾಣಿಕೆಯಿತ್ತು
ಸಾಗಿ ಬರುವ ಊರಿಗೆ ಇವರಿಗೆ ೧

ಕೋನೇರಿನಾಸನ ನಾ ಹೋಗಿ ನೋಡಲು
ಮಾನವ ಜನುಮದಲಿ
ಹೀನ ವೃತ್ತಿಯ ಬಿಟ್ಟು ಜ್ಞಾನ ಬುತ್ತಿಯ ಕಟ್ಟಿ
ಕಾಣಲು ಇಹಪರವಾತ ತಾನೆರೆವ ೨

ರಾಮನ ಶಿಕ್ಷೆಯು ರಾಮನ ರಕ್ಷೆಯು
ರಾಮನ ನಿಜ ಮತವು
ರಾಮ ಆಂಜನೆಯನ ಗಿರಿಯೊಳು ನಿಂತಿಪ್ಪ
ಭೂಮಿ ವರಾಹ ತಿಮ್ಮಪ್ಪ ೩

## ೪೭

ಎಲ್ಲಿ ಹೋಗುವೆ ಮನದಿ ನಿಲ್ಲೊಂದು ಘಳಿಗೆ
ಸೊಲ್ಲ ಲಾಲಿಸು ಲಕ್ಷ್ಮೀವಲ್ಲಭನೆ ನೀನು ಪ

ನಡುನೀರೊಳಾಡುವೆಯೊ ಅನಿಮಿಷನು ನೀನಾಗಿ
ಕಡುಭಾರದಿಂದಿಳಿವ ಗಿರಿಯನೆತ್ತುವೆಯೊ
ಅಡವಿಯೊಳು ಚರಿಸುವೆಯೊ ಬಗೆದು ಬೇರನು ತಿನ್ನ
ಲೊಡೆಯುವೆಯೊ ಕಂಭವನು ಘನ ಮಹಿಮೆಯಿಂದ ೧

ಬೇಡಿ ದೈತ್ಯನ ನೀನು ಮೂರಡಿಯ ಭೂಮಿಯನು
ಕಡು ಚೆಲ್ವ ಪಾದದಿಂದದಳೆಯ ಪೋಗುವೆಯೊ
ಕೊಡಲಿಯೊಳು ಭೂಭುಜರ ಸಂತತಿಯ ಕೋಪದಿಂ
ಕಡಿಕೊಂಬೆ ನೀನೆಂದು ಜಗವೆಲ್ಲ ಹೊಗಳುತಿದೆ ೨

ವಾರಿಧಿಯ ಕಟ್ಟುವೆಯೊ ಬೆಟ್ಟವನು ತಂದಿಕ್ಕಿ
ನಾರಿಯರ ಸೇರುವೆಯೊ ಕಡು ಮಮತೆಯಿಂದ ಶ–
ರೀರದೊಳು ನಾಚಿಕೆಯ ಹೊರಗಿಡುವೆಯೊ ನೀನು
ವಾರುವನನೇರುವೆಯೊ ಈರೈದ ತೋರುವೆಯೊ ೩

ಬೆಟ್ಟದೊಳು ನಿಲ್ಲುವೆಯೊ ಕಟ್ಟುವೆಯೊ ರೊಕ್ಕವನು
ಶೆಟ್ಟಿಗಾರನುಯೆಂದು ಪೆಸರಿಟ್ಟೆಯೊ
ಸೃಷ್ಟಿಪಾಲಕ ವರಾಹ ತಿಮ್ಮಪ್ಪನೆಂಬುದನು
ದೃಷ್ಟಿಯಲಿ ನೋಡಿ ಕಿವಿಗೊಟ್ಟು ಮಾತಾಡು ೪

## ೪೮

### ಶ್ರೀಹರಿ

ಪೂಜೆಯ ಕೈಕೊಳ್ಳೊ ಮೂಜಗದೊಡೆಯ
ಮೂಜಗದೊಳು ನೀನು ತೇಜವುಳ್ಳವನಾಗಿ ಪ

ಕಾಲದಿ ನಿನ್ನಯ ಮೇಲಿಹ ನಿರ್ಮಾಲ್ಯ
ಮಾಲೆಯನೆಲ್ಲ ವಿಸರ್ಜಿಸಿ ತೊಳೆದು
ನೀಲಮಾಣಿಕ ವಜ್ರಮಯವಾದ ಪೀಠದ
ಮೇಲೆ ವಾಲಗವಾಗಿ ಲೀಲೆಯ ತೋರುತ ೧

ಮೊದಲು ಸಂಕಲ್ಪಿಸಿ ತುಳಸಿ ಶ್ರೀಗಂಧದಿ
ಉದಕ ಶುದ್ಧವ ಮಾಡಿ ಅದರೊಳು ಬಳಿಕ
ವಿಧಿಸಿಯೆ ಮತ್ತೇಳು ನದಿಯನುಚ್ಚರಿಸಲು
ಒದಗಿ ಬಾರೆಲೊ ಕರಚರಣ ಮಜ್ಜನಕೀಗ ೨

ಧ್ಯಾನ ಆಹ್ವಾನ ಆಸನ ಪಾದ್ಯವು
ಮಾನಸದರ್ಘ್ಯವು ಆಚಮನಗಳು
ನಾನಾ ಪಂಚಾಮೃತ ಫಲವಭಿಷೇಕವು
ಗಾನ ಸೂಕ್ತಗಳಿಂದ ಮಧುಪರ್ಕಾದಿಗಳು ೩

ವಸ್ತ್ರವಾಭರಣವು ಯಜ್ಞಸೂತ್ರವ ತೊಡಿಸಿ
ಚಿತ್ರವಾಗಿಹ ಗಂಧ ಅಕ್ಷತೆವಿಡಿಸಿ
ಪತ್ರಪುಷ್ಪವು ಶ್ರೀತುಳಸಿ ಮಾಲೆಗಳಿಂದ
ಸ್ತೋತ್ರವು ಸಾಹಸ್ರನಾಮಗಳಾಯಿತು ೪

ಧೂಪಮಾಧೂಪಯ ದೀಪದ ದರುಶನವು
ಆದಷ್ಟು ಸರ್ವೋಪಚಾರಗಳು
ಸೂಪ ಫಲಾದಿ ಕದಳಿ ನಾರಿಕೇಳವು
ಈ ಪರಿ ನೈವೇದ್ಯ ದಯಾಪರಮೂರ್ತಿ ೫

ಆಗರದೊಳು ಬೆಳೆದ ನಾಗವಲ್ಲಿಯ ದಳ
ಪೂಗಿಯಫಲ ಸಹ ನಾಗಶಯನಗಿಟ್ಟು
ಬೇಗದಿ ಮಂಗಳ ಪದಗಳ ಹೇಳಿ ಲೇ
ಸಾಗಿ ಎತ್ತುವ ಅಮೋಘದಾರತಿಗಳ ೬

ಮಾಡಿದ ಪೂಜೆಯ ನೋಡಿ ಕರುಣದಿಂದ
ಬೇಡಿದಿಷ್ಟವನೀಯೊ ರೂಢಿಯ ಒಡೆಯ
ಪಾಡಿ ಪೊಗಳುವೆ ನಿನ್ನ ಪಂಥ ಬೇಡೆನ್ನೊಳು
ಕೂಡಿರು ಅನುದಿನ ವರಾಹ ತಿಮ್ಮಪ್ಪ ೭

## ೪೯

ಭಯ ನಿವಾರಣವಾದ ಪರಿಯ ನಾಮಗಳು
ದಯಾನಿಧಿ ತೋರಿದ ಎನ್ನ ಜಿಹ್ವೆಯೊಳು ಪ

ವಸುದೇವಾತ್ಮಜನಾದ ಕೇಶವ ದೇವಕಿ
ಬಸುರೊಳಗುದಿಸಿದ ನಾರಾಯಣನು
ಎಸೆದು ನಿಂದನು ಗೋಕುಲದೊಳು ಮಾಧವ
ಕುಸುಮನಾಭನು ಗೋವಿಂದ ನಂದ ನಂದನಕಂದ ೧

ದುಷ್ಟಪೂತನಿಯನ್ನು ವಿಷ್ಣುವೆ ಕೊಂದನು
ತೊಟ್ಟಿಲ ಶಿಶುವಾಗಿ ಮಧುಸೂದನ
ಮೆಟ್ಟಿ ಕೊಂದನು ತ್ರಿವಿಕ್ರಮ ಶಕಟನ
ಕಟ್ಟಿಗೆ ಸಿಲುಕಿದನು ವಾಮನ ಯಶೋದೆಗೆ ೨

ಬೆಣ್ಣೆಯ ಮೆದ್ದನು ಮಿಣ್ಣನೆ ಶ್ರೀಧರ
ಕಣ್ಣಿಯ ಕರುವನು ಹೃಷಿಕೇಶನು
ಉಣ್ಣಬಿಟ್ಟನು ತಾಯ ಮೊಲೆಯ ಪದ್ಮನಾಭ
ಸಣ್ಣವ ಕ್ಷಣದೊಳು ದಾಮೋದರನಾದ ೩

ವಾಸುದೇವನು ದ್ವಾರಾವತಿವಾಸನೆನಿಸಿದ
ಸಾಸಿರ ನಾಮನು ಸಂಕರುಷಣನು
ಆಸುರವಾಗಿಯೆ ಪ್ರದ್ಯುಮ್ನನೆಸೆದನು
ದೋಷರಹಿತನಾದ ಅನಿರುದ್ಧನು ೪

ಉತ್ತಮನಾಗಿ ಪುರುಷೋತ್ತಮನೆಸೆದನು
ಅರ್ಥಿಯಿಂದಲೆ ಅಧೋಕ್ಷಜ ನಾಮದಿ
ಮೃತ್ಯುವಾದನು ದೈತ್ಯಕುಲಕೆಲ್ಲ ನರಸಿಂಹ
ಮುಕ್ತಿದಾಯಕನಾದನಚ್ಯುತ ನಾಮದಿ ೫

ಕಡಲ ನಡುವೆ ಜನಾರ್ದನನೆನಿಸಿ ತಾನು
ಹಡಗನು ಸೇರಿಯೆ ಬಂದನುಪೇಂದ್ರನು
ಉಡುಪಿಯ ಸ್ಥಳದೊಳು ಹರಿಯೆಂಬ ನಾಮದಿ
ಕಡಗೋಲ ಕೈಯೊಳು ಹಿಡಿದು ನಿಂದಿಹ ಕೃಷ್ಣ ೬

ಇಪ್ಪತ್ತು ನಾಲ್ಕು ನಾಮದ ಸ್ವಾಮಿಯು
ತಪ್ಪದೆ ಒಂಬತ್ತು ಪೂಜೆಯಗೊಂಬನು
ಸರ್ಪಗಿರಿಯ ವರಾಹ ತಿಮ್ಮಪ್ಪರಾಯನು
ಒಪ್ಪುಗೊಂಡನು ಮಧ್ವರಾಯನಾಗಮದೊಳು ೭

## ೫೦

ರಕ್ಷಿಸೊ ಎನ್ನ ರಕ್ಷಿಸೋ ಪ

ರಕ್ಷಿಸು ಎನ್ನನು ಅಕ್ಷಯಗುಣಪೂರ್ಣ
ಲಕ್ಷುಮಿರಮಣನೆ ಪಕ್ಷಿವಾಹನನೇ ಅ.ಪ

ಪಾದವಿಲ್ಲದೆ ಜಲದೊಳು ಮುಳುಗಾಡಿ
ವೇದಚೋರಕನನ್ನು ಸೀಳಿ ಬೀಸಾಡಿ
ವೇದಾಚಲದೊಳು ನಿಂತು ಕೈ ನೀಡಿ
ಸಾಧು ಸಜ್ಜನಪಾಲ ನೀ ದಯಮಾಡಿ ೧

ವಾರಿಧಿ ಮಥನದಿ ಸುರರಿಗೆ ಒಲಿದು
ಮೇರು ಮಂದರವನ್ನು ನೀ ಹೊತ್ತೆ ಒಲಿದು
ವಾರಿಜಾಕ್ಷನೆ ವೈಕುಂಠದಿಂದಿಳಿದು
ಊರಿದೆ ಚರಣವ ಗಿರಿಯೊಳು ನಲಿದು ೨

ಧರಣಿಯ ಒಯ್ದ ದಾನವಗಾಗಿ ನೀನು
ಹರಣದ ಸೂಕರನಂತಾದುದೇನು
ಚರಣ ಸೇವಕರಿಗೆ ನೀ ಕಾಮಧೇನು
ಕರುಣದಿ ಸಲಹೆನ್ನ ನಂಬಿದೆ ನಾನು ೩

ತರಳನು ಕರೆಯೆ ಕಂಬದೊಳುದಿಸಿದೆಯೊ
ದುರುಳ ದಾನವರ ಪ್ರಾಣವ ವಧಿಸಿದೆಯೊ
ಕರಳಮಾಲೆಯ ಕೊರಳೊಳು ಧರಿಸಿದೆಯೊ
ಮರಳಿ ಬಂದವ ಫಣಿಗಿರಿಯನೇರಿದೆಯೊ ೪

ಕೋಮಲ ರೂಪದಿ ಭೂಮಿಯನಳೆದೆ
ಆ ಮಹಾಬಲಿಯ ಪಾತಾಳಕ್ಕೆ ತುಳಿದೆ
ಸ್ವಾಮಿ ಪುಷ್ಕರಣಿಯ ತೀರದಿ ಬೆಳೆದೆ
ಪ್ರೇಮದಿ ಭಕ್ತರ ಕಾಮಿಸಿ ಪೊರೆದೆ ೫

ತಾತನಪ್ಪಣೆಯಿಂದ ಮಾತೆಗೆ ಮುನಿದೆ
ಜಾತಿಕ್ಷತ್ರಿಯರ ವಿಘಾತಿಸಿ ತರಿದೆ
ನೂತನವಾಗಿಹ ನಾಮದಿ ಮೆರೆದೆ
ಧಾತುಗೆಟ್ಟೆನು ಸ್ವಧೈರ್ಯಗಳಿರದೆ ೬

ದಶರಥನುದರದಿ ಶಿಶುವಾಗಿ ಬಂದೆ
ವಸುಮತಿ ತನುಜೆಯ ಕುಶಲದಿ ತಂದೆ
ಅಸುರರ ಹೆಸರನುಳಿಸದೆ ನೀ ಕೊಂದೆ
ಕುಸುಮನಾಭನೆ ಶೇಷಗಿರಿಯಲ್ಲಿ ನಿಂದೆ ೭

ಮಧುರೆಯೊಳುದಿಸಿ ಗೋಕುಲದಲ್ಲಿ ಬೆಳೆದೆ
ಉದಧಿಯ ಮಧ್ಯದಿ ದುರ್ಗವ ಬಲಿದೆ
ಹದಿನಾರು ಸಾವಿರ ಸತಿಯರ ನೆರೆದೆ
ಉದಯವಾದೆಯೊ ವೇದಗಿರಿಯೊಳು ನಲಿದೆ ೮

ಶಶಿಮುಖಿಯರನು ಮೋಹಿಸುವಂಥ ಬಗೆಗೆ
ವ್ಯಸನವ ಬಿಡುವುದುಚಿತವೇನೊ ನಿನಗೆ
ವಸುಧೆಗುತ್ತಮವಾಗಿ ಎಸೆವಂಥ ಗಿರಿಯೊಳು
ಹಸನಾಗಿ ನಿಂತಿಹ ಚರಣ ಸನ್ನಿಧಿಯೊಳು ೯

ವಾಜಿಯನೇರಿಯೆ ನೇಜಿಯ ಪಿಡಿದೆ
ಮಾಜುವ ಕಲಿಯನ್ನು ಕಡೆಯೊಳು ಕಡಿದೆ
ಮೂಜಗದೊಡೆಯನ ಮನದೊಳು ಇಡುವೆ
ಮಾಜ ಬೇಡೆಲೊ ವೇಂಕಟೇಶ ಎನ್ನೊಡವೆ ೧೦

ಹತ್ತವತಾರದ ವಿಸ್ತಾರದಿಂದ
ಕರ್ತು ವರಾಹತಿಮ್ಮಪ್ಪನು ನಿಂದ
ಭೃತ್ಯವತ್ಸಲನಾಗಿ ಭೂಮಿಗೆ ಬಂದ
ಅರ್ಥಿಯೊಳ್ಭಕ್ತರ ಸಲಹುವೆನೆಂದ ೧೧

## ೫೧

ಯಾರ ಭಯವೇನಿಹುದು ಶ್ರೀವೇಂಕಟೇಶ
ನೀನೆ ದಯವಾದ ಮೇಲ್ಯಾರ ಹಂಗೇನು ಪ

ಪೊಡವಿಯಾಳುವ ದೊರೆಯು ಒಡವೆವೊಯ್ದರೆಯೇನು
ಅಡವಿಯೊಳು ಮೃಗಬಂದು ತಡೆದರೇನು
ತೊಡೆಯನೇರುವ ಮಗನ ಅಡವಿಗಟ್ಟಿದರೇನು
ಮಡುವಿನಲಿ ನೆಗಳು ಕಾಲ್ಪಿಡಿದರೇನು ೧

ವ್ಯಾಳ ಬಹುರೋಷದಲಿ ಕಾಲು ಸುತ್ತಿದರೇನು
ಕಾಳ ರಾಕ್ಷಸ ಕೈಯ ಪಿಡಿದರೇನು
ಜ್ವಾಲೆ ನಾಲ್ದೆಸೆಯಿಂದ ಮೇಲೆ ಮುಸುಕಿದರೇನು
ಹಾಲೊಳಗೆ ಹಗೆ ತನಗೆ ವಿಷವಿಕ್ಕಲೇನು ೨

ಯಾಗಕೋಸುಗ ಮೃಗವ ಹೋಗಿ ತರುವೆನುಯೆಂದು
ರಾಗದೊಳು ಬಲವಂತ ಕರೆಯಲಾಗಿ
ಕೂಗುತಲೆ ಮೃಗ ಬಂದು ಬಾಗಿಲೊಳು ಕಾಲ್ಪಿಡಿಯೆ
ಆಗ ಬಿಡಿಸಿದವರಾರು ನಾಗಗಿರಿವಾಸ ೩

ಕಡುಗಲಿಯು ದ್ರೌಪದಿಯ ಉಡಿಮಡಿಯ ಸೆಳೆವಂದು
ಒಡೆಯ ರಕ್ಷಿಸುಯೆಂದು ನಡುಗುತಿರಲು
ಮಡದಿಗಕ್ಷಯವಿತ್ತು ನುಡಿದ ಭಾಷೆಯ ಸಲಿಸಿ
ಕೊಡಲಿಲ್ಲವೆ ನೀನು ಒಡೆಯ ಗಿರಿವಾಸ ೪

ಕೆಡೆನುಡಿದು ಬಾಲಕನ ಅಡವಿಗಟ್ಟಲು ಪಿತನು
ಸಡಗರದ ಮಡದಿಯಳ ಮಾತ ಕೇಳಿ
ಒಡೆಯ ನೀನೆಯೆಂದು ಕಡುತಪವನರ್ಚಿಸಲು
ಉಡುಗಣಕೆ ಮೇಲಾದ ಪದವ ತೋರಿದೆಲಾ ೫

ಸೊಂಡಿಲಹ ಮೃಗ ಜಲದ ಹೊಂಡದೊಳಗಾಡುತಿರೆ
ಕಂಡು ಕಡು ರೋಷದಲಿ ಕಾಲ್ಪಿಡಿಯಲು
ಪುಂಡರಿಕಾಕ್ಷನನು ಭಯಗೊಂಡು ಕರೆದರೆ
ತುಂಡಿಸಿದೆ ಚಕ್ರದೊಳು ನೆಗಳ ಗಂಟಲನು ೬

ಒಬ್ಬನೆ ಪಥದೊಳಗೆ ಸರ್ಬಬಲನೈದುತಿರೆ
ಹೆಬ್ಬಾವು ಆತನನು ಮೈಸುತ್ತಲು
ಗರ್ಭದೊಳು ನಡುನಡುಗಿ ಉಬ್ಬಸವ ಬಿಡುತಿರಲು
ಎಬ್ಬಿಸಿದರಾರಲ್ಲಿ ನಿರ್ಭಯವ ತೋರಿ ೭

ದುರುಳ ದೈತ್ಯನು ತನ್ನ ಕುವರನನು ಕೊಲುವುತಿರೆ
ಭರದಿಂದ ಕಂಬದೊಳು ಹೊರಟು ಬಂದು
ನರಹರಿಯ ರೂಪದಲಿ ಕರುಳ ಮಾಲೆಯ ಧರಿಸಿ
ತರಳನನು ಕಾಯಿದವರಾರು ಶ್ರೀಹರಿಯೆ ೮

ಉರಿಯ ಮನೆಯಂದರಿಯದರಸರೈವರ ಹೊಗಲು
ಇರಿಸಿರ್ದ ಬಾಗಿಲೊಳು ಉರಿ ಮುಸುಕಲು
ಬೆರಸಿರ್ದ ನಿದ್ರೆಯೊಳು ಇರಿಸಿ ಕಾಯಿದವರಾರು
ಕರೆಸಿ ದ್ರೌಪದಿಯನ್ನು ಕೊಡಿಸಿದವರಾರು ೯

ಚಂದ್ರಹಾಸನು ವಿಷವ ತಿಂದು ಸಾಯಲಿಯೆಂದು
ತಂದೆ ಬರೆದಿಹ ಲಿಖಿತ ನಂದನನು ನೋಡಿ
ಮಂದಗಮನೆಯ ಕೊಟ್ಟು ಚಂದ್ರಹಾಸನ ನಿಲಿಸಾ
ನಂದಳಿದ ಮಾಯವೇನೆಂದು ಹೇಳಯ್ಯ ೧೦

ಯಾರ ಭಯವೆನಗಿಲ್ಲ ಕಾಯ ಭಯ ಹೊರತಾಗಿ
ಮೀರಿದಾಪತ್ತಿನಲಿ ಕಡೆ ಸೇರಿಸೊ
ಭೂರಮಣ ವರಾಹತಿಮ್ಮಪ್ಪ ಚರಣವನು
ಸಾರಿದೆನು ಭಯಗಿರಿಗೆ ಕುಲಿಶ ನೀನಾಗು ೧೧

## ೫೨

ವೆಂಕಟಾಚಲನಿವಾಸ ಸಲಹಯ್ಯ
ಪಂಕಜಾಕ್ಷನೆ ಶ್ರೀನಿವಾಸ ಪ

ವಾರಿಯೊಳು ಮುಳುಗಾಡಿದೆ, ಮಂದರದ
ಮೇರು ಬೆನ್ನೊಳು ತಾಳಿದೆ
ಕಾರಡವಿಯೊಳು ಚರಿಸಿದೆ, ಕಂಬದೊಳು
ಘೋರ ರೂಪವ ತೋರಿದೆ ೧

ವಟುವಾಗಿ ಧರೆಯನಳೆದೆ, ಕೊಡಲಿಯೊಳು
ಪಟುತರದ ನೃಪರ ಗೆಲಿದೆ
ಅಟವಿ ವಾಸವ ಮಾಡಿದೆ, ರಣದೊಳಗೆ
ಚಟುಳ ವಾಜಿಯ ನಡೆಸಿದೆ ೨

ಅಂಗದಂಬರವ ಮರೆದೆ, ಕಡೆಯೊಳು, ತು
ರಂಗವನು ಏರಿ ನಲಿದೆ
ಬಂಗಾರದದ್ರಿಯೊಳು ಮೆರೆದೆ, ವರಾಹ
ರಂಗ ತಿಮ್ಮಪ್ಪ ಒಲಿದೆ ೩

## ೫೩

ಮಂಗಳಂ ಜಯ ಮಂಗಳಂ ಪ

ಆದಿನಾರಾಯಣನೆನಿಸಿದಗೆ
ಪಾದದಿ ಗಂಗೆಯ ಪಡೆದವಗೆ
ಸಾಧುಸಜ್ಜನರನ್ನು ಸಲುಹುವ ದೇವಗೆ ವಿ
ನೋದ ಮೂರುತಿಯಾದ ವೆಂಕಟಗೆ ೧

ಶಂಖ ಚಕ್ರಧರಿಸಿಪ್ಪವಗೆ
ಪಂಕಜ ಹಸ್ತವ ತೋರ್ಪವಗೆ
ಬಿಂಕದೊಳಸುರರ ಕೆಡಹಿದ ಧೀರಗೆ ಮೀ
ನಾಂಕನ ಪಿತನಾದ ವೆಂಕಟಗೆ ೨

ಪೀತಾಂಬರಧರನೆನಿಸಿದಗೆ
ನೂತನ ನಾಮದಿ ಮೆರೆವವಗೆ
ಪಾತಕನಾಶನ ಪರಮಪಾವನಗೆ ಅ
ತೀತ ಮಹಿಮನಾದ ವೆಂಕಟಗೆ ೩

ಖಗವಾಹನನೆಂದೆನಿಸಿದಗೆ
ನಗಧರನಾಗಿಹ ಅಘಹರಗೆ
ಮೃಗಧರರೂಪಗೆ ಮುಂಚಕಲಾಪಗೆ
ಜಗದಾಧಾರಕ ವೆಂಕಟಗೆ ೪

ಲೋಕನಾಯಕನಾದ ಕೇಶವಗೆ
ಶೋಕಭಂಜನನಾದ ಮಾಧವಗೆ
ಸಾಕಾರ ರೂಪಗೆ ಸರ್ವಾತ್ಮಕನಿಗೆ
ಶ್ರೀಕರನೆನಿಸುವ ವೆಂಕಟಗೆ ೫

ಆಲದ ಎಲೆಯೊಳ್ಪೊರಗಿದಗೆ ಆ
ಕಾಲದಿ ಅಜನನು ಪೆತ್ತವಗೆ

ನೀಲಮೇಘಶ್ಯಾಮ ನಿಗಮ ವಿದೂರಗೆ
ಕಾಲಕಾಲಾಂತಕ ವೆಂಕಟಗೆ ೬

ಸ್ವಾಮಿ ಪುಷ್ಕರಣಿಯ ವಾಸನಿಗೆ
ಭೂಮಿ ವರಾಹತಿಮ್ಮಪ್ಪನಿಗೆ
ಪ್ರೇಮದಿ ಜಗವನು ಸಲುಹುವ ನಾಮದ
ಸೋಮ ಸನ್ನಿಭನಾದ ವೆಂಕಟಗೆ ೭

## ೫೪

ಕಾಣದಿದ್ದರೆ ನಮ್ಮ ಪ್ರಾಣ ಉಳಿಯದು
ಜಾಣರಾಯಗೆ ಇಟ್ಟ ಕಾಣಿಕೆಯನು ಕೊಟ್ಟು ಪ

ಕಷ್ಟಗಳೆಲ್ಲವು ಬೆನ್ನಟ್ಟಿ ಬರುವಾಗ
ಕಟ್ಟಿದ ಹರಕೆಗಳೆಲ್ಲವನು
ಸಿಟ್ಟು ಮಾಡುವ ಸ್ವಾಮಿ ಇಟ್ಟುಕೊಂಡರೆ ಇನ್ನು
ಮುಟ್ಟಿಸಿಕೊಡಬೇಕಲ್ಲಿ ತಿಮ್ಮಪ್ಪನಲ್ಲಿ ೧

ಗಂಡ ಹೆಂಡತಿಯು ಮಕ್ಕಳು ಸಹವಾಗಿ
ದಂಡು ಮಾಳ್ಪೆವು ತಾವು ಎನುತಲಿ
ಉಂಡೆವು ಸ್ಥಿರವಾರ ಊಟವ ಏಕವ
ಕಂಡು ಬಹರೆ ಹೋಗುವ ದಯವಾಗುವ ೨

ಕಟ್ಟಿದ ಕಾಣಿಕೆ ಇಟ್ಟು ಚರಣದಲ್ಲಿ
ಸಾಷ್ಟಾಂಗವು ಎರಗಿದರೆ
ದೃಷ್ಟಿಯಿಂದಲೆ ನೋಡಿ ದಯಮಾಡಿ ಕಳುಹುವ
ಬೆಟ್ಟದ ವರಾಹ ನಮ್ಮಪ್ಪ ತಿಮ್ಮಪ್ಪನು ೩

## ೫೫

ನಿನಗೇನು ಘನವೇನು ವನಜಾಕ್ಷ ವೆಂಕಟೇಶ
ಮನಕೆ ಬೇಕಾದುದ ಇತ್ತು ರಕ್ಷಿಸುವರೆ ಪ

ದೇಶ ನಿನ್ನದು ಬಹುಕೋಶ ನಿನ್ನದು ಜಗ
ದೀಶ ನಿನ್ನನು ಭಾಗ್ಯಲಕುಮಿ ಸೇವಿಸುವಳು
ಆಸೆಯಿಂದಲಿ ನಿನ್ನ ಚರಣವ ಮೊರೆಹೊಕ್ಕೆ
ದೋಷವ ಕಳೆದು ಎನ್ನ ಲೇಸಿತ್ತು ಸಲಹಯ್ಯ ೧

ಅಣುವಾಗಲೂ ಬಲ್ಲೆ ಮಹತ್ತಾಗಲೂ ಬಲ್ಲೆ
ಅಣುಮಹತ್ತಿನೊಳಗೆ ಗುಣವ ತೋರಲು ಬಲ್ಲೆ
ಕ್ಷಣಕೆ ಮುನಿಯ ಬಲ್ಲೆ ಆ ಕ್ಷಣಕೆ ರಕ್ಷಿಸಬಲ್ಲೆ
ಗುಣಗಳವಗುಣಗಳ ನೋಡದೆ ಸಲಹಯ್ಯ ೨

ಹುಟ್ಟಿದೆ ನರಜನ್ಮದಿ ಬಹಳ ಬಳಲಿಯೆ ಕಷ್ಟ
ಬಟ್ಟೆನು ಕೈಯ ಮುಟ್ಟಿ ರಕ್ಷಿಪರಿಲ್ಲ
ಬೆಟ್ಟದೊಡೆಯ ಮನದಭೀಷ್ಟವೆಲ್ಲವನಿತ್ತು
ದೃಷ್ಟಿಯಿಂದಲೆ ನೋಡಿ ಒಟ್ಟೈಸಿ ಸಲಹಯ್ಯ ೩

ತಂದೆ ತಾಯಿಗಳಿಲ್ಲ ಬಂಧು ಬಾಂಧವರಿಲ್ಲ
ಕುಂದು ಹೆಚ್ಚಿಯೆ ನಿರ್ಬಂಧ ಬಡಿಸುತಿದೆ
ಮಂದರಾದ್ರಿಯ ಗೋವಿಂದ ನಿನ್ನಯ ಪಾದ
ದ್ವಂದ್ವವ ತೋರಿಸಿ ಚಂದದಿ ಸಲಹಯ್ಯ ೪

ಮನದ ಸಂಕಲ್ಪಕೆ ಅನುಗುಣವಾಗಿಯೆ
ಘನವಿತ್ತು ಕರೆದೊಯ್ದು ವಿನಯದಿ ಮನ್ನಿಸಿ
ಮನೆಗೆ ಕಳುಹು ನಮ್ಮ ವರಾಹತಿಮ್ಮಪ್ಪನೆ
ತನು ಮನದೊಳಗನುದಿನದಿನ ಸಲಹಯ್ಯ ೫

೫೬

ನೋಡುವ ಬನ್ನಿರೆಲ್ಲರು ಲೋಕ ನಾಯಕ ಚೆಲ್ವ
ಮೂಡಲ ಗಿರಿವಾಸ ಶ್ರೀವೆಂಕಟೇಶನ ಪ

ಭೂಮಿಗೆ ವೈಕುಂಠವೆಂದು ತೋರುತ ನಿಂತ
ಸ್ವಾಮಿ ಪುಷ್ಕರಣಿಯ ತೀರದೊಳು
ಪ್ರೇಮದಿ ಭಕ್ತರ ಸಲಹಿಕೊಂಬುವನಂತೆ
ಕಾಮಿತಾರ್ಥವನಿತ್ತು ಕಳುಹುವನಂತೆ ೧

ಬ್ರಹ್ಮಾದಿ ಸುರರಿಂದ ಪೂಜಿಸಿಕೊಂಬನಂತೆ
ನಿರ್ಮಲ ರೂಪದಿ ತೋರ್ಪನಂತೆ
ಕರ್ಮಬಂಧಗಳನ್ನು ಕಡಿದು ಕೊಡುವನಂತೆ
ಹೆಮ್ಮೆಯ ಪತಿಯೆಂದು ತೋರ್ಪನಂತೆ ೨

ಆಡಿ ತಪ್ಪುವರಿಗೆ ಕೇಡ ಬಗೆವನಂತೆ
ನೋಡಿಯೆ ನಡೆಯಲು ಕೊಡುವನಂತೆ
ಮೂಡಿದ ಆದಿತ್ಯ ಶತಕೋಟಿ ತೇಜನಂತೆ
ರೂಢಿಗೊಡೆಯ ನಮ್ಮ ವರಾಹತಿಮ್ಮಪ್ಪನಂತೆ ೩

೫೭

ಪಾಲಿಸೈ ತಿಮ್ಮಪ್ಪ ಪರಮ ಪಾವನನಪ್ಪ
ಮೇಲು ಗಿರಿಯೊಳಿಪ್ಪ ತಿರುಪತಿ ತಿಮ್ಮಪ್ಪ ಪ

ಪ್ರಾಣದಾಸೆಗಳಿಂದ ಕಾಣ ಬರುವೆವೆಂದ
ಆಣೆ ಭಾಷೆಯನೊಂದ ಮಾಣೆನೊ ಗೋವಿಂದ
ಕಾಣಿಕೆಯ ಕರದಿಂದ ತ್ರಾಣ ಮೀರಿಯೆ ಬಂದ
ಜಾಣರಾಯನೆ ಚಂದಗಾಣಿಸೊ ಶುಭದಿಂದ ೧

ಸ್ವಾಮಿ ನೀನೇ ಹೊಣೆ ಭೂಮಿಯೊಳು ರಕ್ಷಣೆ
ಕಾಮಿತ ಸ್ಯೆರಣೆ ನಾಮಕಲ್ಪನೆಯು
ಪ್ರೇಮವಾಗಿಹ (ಹಣೆ)[೧] ನಾಮದ ಮನ್ನಣೆ
ಸೌಮನಸ್ಯದ ಮಾಣೆ ತಾಮಸಕ್ಕಿಡಿಗಾಣೆ ೨

ಸೇವಕ ಸಂಕಲ್ಪ ಕಾವನಾಯಕನಿಪ್ಪ
ತಾವಿಗಾಗಿಯೇ ಪೋಪ ಭಾವದಿಯಿರುತಿಪ್ಪ
ಜೀವನ ತಾನಪ್ಪ ದೇವ ಕಾಣು ಈ ಕಪ್ಪ
ಈವೆನೆನುತ ಬಪ್ಪ ಭೂವರಾಹತಿಮ್ಮಪ್ಪ ೩

## ೫೮

ವೆಂಕಟೇಶ ಎನ್ನ ಮುಂದೆ ನಿಂತಿದಂತಿದೆ ಪ

ದೆಸೆಗೆ ಪ್ರಜ್ವಲಿಸುವ ಎಸೆವ ಕಿರೀಟ
ನೊಸಲೊಳು ತಿದ್ದಿದ ನಾಮದ ಮಾಟ
ಅಸಮ ನೇತ್ರಗಳಿಂದ ನೋಡುವ ನೋಟ
ಬಿಸಜಭವನ ಪರಿಚರಿಯದ ಆಟ ೧

ತಿಲಪುಷ್ಪದಂದದಿ ಚಲುವನಾಸಗಳು
ಬಿಳಿಯ ಮುಗುಳ್ನಗೆ ಸಾಲು ದಂತಗಳು
ಗಳದಿ ಮೂರೇಖೆಯು ವೈಜಯಂತಿಗಳು
ಹೊಳೆವ ಮೌಕ್ತಿಕದಂತೆ ಕಿರು ಬೆವರುಗಳು ೨

ಶ್ರೀವತ್ಸ ಕೌಸ್ತುಭ ಎಡಗೈಯ ಶಂಖ
ಕಿರು ನೇಸರಂದದಿ ಚಕ್ರದ ಬಿಂಕ
ಕರದೊಳು ಜಗವನು ತೋರುವ ವೆಂಕ
ಮುರುಕ ಕಟಿಯೊಳು ಇರಿಸಿದ ನಿಃಶಂಕ ೩

---

೧. ಯಣಿ

ತೋರ ಮುತ್ತಿನ ಸರ ಮಕರಕುಂಡಲವು
ತೋರುವ ಭುಜಕೀರ್ತಿ ಚಕ್ರದ ಸರವು
ಹಾರ ಹೀರಾವಳಿ ಬೆರಳುಂಗುರವು
ಚಾರು ಭಾಪುರಿ ಘಂಟೆ ಸರಪಣಿಯಿರವು ೪

ಕಿರುಡೊಳ್ಳಿಗೊಪ್ಪುವ ನಾಭಿಯ ಸಿರಿಯು
ಸರಸಿಜಮಿತ್ರನ ತೇಜದ ಪರಿಯು
ಮರುಗು ಮಲ್ಲಿಗೆ ಜಾಜಿ ಸಂಪಿಗೆ ಸರಿಯು
ಪರಿಮಳಿಸುವ ಮೈಯ ಪುಳಕದ ಸಿರಿಯು ೫

ಉಡಿಯ ಪೀತಾಂಬರ ಮೇಲುಡುದಾರ
ಕಡಹದಂದದಿ ಚಲ್ವ ಕಾಲ್ಗಳ ತೋರ
ಅಡಿಯಿಟ್ಟು ನಿಂದಿಹ ಬೆಡಗಿನ ವೀರ
ಮಡದಿ ಮಹಾಲಕ್ಷ್ಮೀ ಪುಡುಮಿಯುದಾರ ೬

ಸ್ವಾಮಿ ಪುಷ್ಕರಣಿಯ ತೀರ ನಿವಾಸ
ಭೂಮಿ ವರಾಹತಿಮ್ಮಪ್ಪನ ದಾಸ
ಪ್ರೇಮದಿ ರಚಿಸಿದನಿದರೊಳು ಪ್ರಾಸ
ತಾಮಸವಿದ್ದರು ತಿದ್ದಲು ಲೇಸ ೭

## ೫೯

ವೆಂಕಟೇಶ ನಿನ್ನ ನಂಬಿದೆ ಎನ್ನ
ಸಂಕಟವನು ಪರಿಹರಿಸಯ್ಯ ನೀನು ಪ

ಒಡಲೆಂಬ ಕಡಲೆಡೆಗೊಂಡಿಹ ಹಡಗು
ಕಡೆಯ ಕಾಣ ಬಹು ಜಡದಿಂದ ಗುಡುಗು
ಜಡಿಯುತ್ತ ಬರುತಿಹ ಮಳೆ ಮುಂದೆ ತೊಡಗು
ದಡವ ಸೇರಿಸೊ ಎನ್ನ ಒಡೆಯ ನೀ ಕಡೆಗು ೧

ಅಣುರೇಣು ತೃಣಕಾಷ್ಠದೊಳಗಿದ್ದು ನೀನು
ಕ್ಷಣ ಕ್ಷಣ ಆರೈವ ಗುಣ ನಿನ್ನದೇನು
ಪ್ರಣವ ರೂಪನೇ ನಿನ್ನ ಚರಣಕ್ಕೆ ನಾನು
ಮಣಿವೆನು ಮನ್ನಿಸು ವರ ಕಾಮಧೇನು ೨

ನಾರಾಯಣ ನರಹರಿ ಜಗನ್ನಾಥ
ದಾರಿದ್ರ್ಯ ದುಃಖ ನಿರ್ಮುಕ್ತ ನೀ ತಾತ
ಸಾರಿದವರ ಸಂಸಾರದ ದಾತ
ಮಾರಿದ ಮನವಕೊಂಬರೆ ನೀನೆ ಪ್ರೀತ ೩

ಉತ್ತಮವಾದ ಶ್ರೀಶೈಲ ನಿವಾಸ
ಭಕ್ತರ ಸಲಹುವ ಬಿರುದುಳ್ಳ ಈಶ
ಚಿತ್ತವು ತಿಳಿದೆನ್ನ ಕಾಯೊ ಸರ್ವೇಶ
ನಿತ್ಯ ಮಂಗಲವೀವ ವಸ್ತು ಲಕ್ಷ್ಮೀಶ ೪

ವರಾಹತಿಮ್ಮಪ್ಪನು ಒಲಿದೆನ್ನ ಕರೆದು
ಆರಿದ ಬಾಯೊಳು ಅಮೃತವನೆರೆದು
ದೂರವಾಗದೆ ಅಡಿಗಡಿಗೆನ್ನ ಹೊರೆದು
ಏರುಗಂಡಪರಾಧ ಎಲ್ಲವ ಮರೆದು ೫

## ೬೦

ಸುಮ್ಮನೊಲಿವನೆ ಪರಬೊಮ್ಮನಾದ
ತಿಮ್ಮರಾಯ ಸುಮ್ಮನೊಲಿವನೆ ಪ

ಮಂದವಾರ ದಿವಸದಲ್ಲಿ
ಮಿಂದು ಮಡಿಯನುಟ್ಟುಕೊಂಡು ಗೋ
ವಿಂದ ಎನುತ ನಾಮವಿಕ್ಕಿ
ವಂದನೆಯ ಮಾಡದನಕ ೧

ಗರ್ವವನು ಉಳಿದು ಮನದಿ
ಸಾರ್ವಭೌಮನನ್ನು ನೆನೆದು
ನಿರ್ವಹಿಸಿ ಶೇಷನು ಸುತ್ತಿದ
ಪರ್ವತವನ್ನು ಏರದನಕ ೨

ಕಾಸು ದುಡ್ಡು ಚಕ್ರ ನಾಣ್ಯ
ವೀಸವುಳಿಯದಂತೆ ಬಡ್ಡಿ
ವಾಸಿಯಿಕ್ಕಿ ಗಂಟ ಕಟ್ಟಿ
ಈಸುಕೊಂಡು ಸೂಸದನಕ ೩

ದೇಶ ದೇಶದಿಂದ ಕಪ್ಪ
ಗಾಸಿಯಾಗದಂತೆ ತರಿಸಿ
ಕೋಶಕಿಕ್ಕಿ ಕೊಂಬ ಲಕ್ಷ್ಮಿಯ
ಈಶನನ್ನು ನೆನೆಯದನಕ ೪

ಗುಡವ ಕದಡಿಕೊಂಡು
ಸಂಗಡ ಕಡಲೆಯನ್ನು ನೆನಸಿಯಿಟ್ಟು
ಒಡೆದ ನಾರಿಕೇಳವು ಸಹಿತ
ಒಡೆಯಗೆಂದು ಇಡದ ತನಕ ೫

ಆಶಾಪಾಶವನ್ನು ಬಿಟ್ಟು
ದೇಶವನ್ನು ತೊಳಲಿ ಬಳಲಿ
ಕೇಶವಾದಿ ನಾಮದೊಳಗೆ
ವಾಸುದೇವನ ನೆನೆಯದನಕ ೬

ಸೃಷ್ಟಿಪಾಲ ಮೆಟ್ಟಿದಂಥ
ಬೆಟ್ಟವನ್ನು ಏರಿ ಹೋಗಿ
ದೃಷ್ಟಿಯಲ್ಲಿ ವರಾಹ ತಿಮ್ಮ
ಶೆಟ್ಟಿಯನ್ನು ನೋಡದನಕ ೭

## ೬೧

ಲೋಕಕ್ಕೆ ನೀ ತಾಯಿ ಲೋಕಕ್ಕೆ ನೀ ತಂದೆ
ಸಾಕುವಾಕೆಯೆ ನೀನು ಲೋಕಕ್ಕೆ ನೀ ತಾಯಿ ಪ

ಬೇಸರಿಸಿ ಧರಿಸಿದಳು ಜನನಿ ಎನ್ನನು ದಶ–
ಮಾಸ ಗರ್ಭದೊಳಿದ್ದು ಬಹಳ ಬಳಲಿದೆನು
ಹೇಸಿಕೆಯ ವಿಣ್ಮೂತ್ರ ರಾಶಿಯೊಳುಗುದಿಸಿದರೆ
ಆಸುರದಿ ಕೈಯೆತ್ತಿ ಪಿಡಿದು ರಕ್ಷಿಸಿದೆ ೧

ಮಲ ಮೂತ್ರ ಮೈಲಿಗೆಯ ಮೈಯೊಳಗೆ ಧರಿಸಿದರು
ತಿಲ ಮಾತ್ರ ಹೇಸಿದೆಯ ಎನ್ನೊಳಗೆ ನೀನು
ಜಲಜಮುಖಿ ಎನ್ ತಾಯಿ ಎಲೆಯ ಓಗರವಿಟ್ಟು
ತೊಳೆದ ಹಸ್ತದಿ ಎನಗೆ ಕೊಳೆಯನಿಕ್ಕಿದಳು ೨

ಮಗುವೆಂದು ಯೋಚಿಸದೆ ಉಗುಳುತ್ತ ಎಂಜಲನು
ಒಗೆದು ಬೀಸಾಡಿದಳು ಎಡದ ಹಸ್ತದಲಿ
ಜಗಳವಾಡಲು ಪಿತನು ಮಗನ ಮೋಹದ ಮೇಲೆ
ತೆಗೆಯಬಾರದೆ ಮಲವನೆಂದು ಜರೆದಪಳು ೩

ಪಡೆದ ತಾಯ್ತಂದೆಗಳು ಅಡಗಿ ಹೋದರು
ಎನ್ನ ಬಿಡದೆ ಸಲಹಿದೆ ನೀನು ಪೊಡವಿ ದೇವತೆಯೆ
ಕಡೆಗಾಲದೊಳು ಕೈಯ ಪಿಡಿದು ರಕ್ಷಿಸದೆನ್ನ
ಒಡಲ ದುಃಖವ ನೋಡಿ ನುಡಿಯದಿರಬಹುದೆ ೪

ಬಲವಾಗಿ ಕೈವಿಡಿದೆ ವರಾಹತಿಮ್ಮಪ್ಪನಿಗೆ
ಗೆಲವಿಂದ ಭೂರಮಣನೆನಿಸಿ ಮೆರೆವ
ಜಲಜನಾಭನೆ ಎನ್ನ ಪಿತನು ಮಾತೆಯು ನೀನು
ಸುಲಭದೊಳು ಮೈದೋರು ಫಲಿತವಹ ಪದವ ೫

## ೬೨

ಸ್ವಾಮಿ ಸರ್ವೋತ್ತಮಳೆ ಸಕಲ ಜನಕಾಧಾರೆ
ಕಾಮಿತಾರ್ಥವನೀವ ಕರುಣಿ ಭೂದೇವಿ ಪ

ಹರಿಯ ಪಾದದಲುದಿಸಿ ಹರಿಗೆ ವಧುವೆನಿಸಿ
ಹರಿಗೆ ಸುತೆಯನು ಇತ್ತು ಹಿರಿಯಳಾದೆ
ಹರಿನಾಮ ಕೀರ್ತನೆಯ ಹೊರೆವ ಧಾರುಣಿ ನಿನ್ನ
ಮೊರೆಹೊಕ್ಕೆ ಮರೆಯದಿರು ಕರುಣದೋರೆನಗೆ ೧

ಕ್ಷಮೆ ದಮೆಯು ಶಾಂತ ಸದ್ಗುಣವೊಪ್ಪುವಳೆ ನಿನಗೆ
ಭ್ರಮೆಬಟ್ಟು ಭೂಭುಜರು ಕಡಿದುಕೊಳುತಿಹರು
ಅಮಿತ ಮಹಿಳೆ ನಿನ್ನ ನಿಜವ ಬಲ್ಲವರಾರು
ತಮಗೆ ಋಣವಿದ್ದುದನು ಕೊಂಡೊಯ್ವರಲ್ಲದೆ ೨

ಚಿನ್ನ ಭಂಡಾರಗಳು ನಿನ್ನೊಡಲೊಳೊಪ್ಪಿದವು
ಉನ್ನಂತ ರತುನಗಳು ನಿನ್ನೊಳಡಗಿಪವು
ಅನ್ನ ಪಾನಂಗಳಿಗೆ ಬೀಜ ಮೂಲವೆ ನೀನು
ನಿನ್ನ ಮರೆತಿಹ ಜನಕೆ ಮುನ್ನ ಸುಖವುಂಟೆ ೩

ಒಬ್ಬ ರಾಯನ ಗೆಲುವೆ ಒಬ್ಬ ರಾಯನಿಗೊಲಿವೆ
ಒಬ್ಬನಿಗೆ ಮೈಯ ನೀನು ಕೊಡುವೆ
ಒಬ್ಬರಾದರು ನಿನ್ನ ನಿಜದಿ ಬಾಳ್ದವರಿಲ್ಲ
ಗರ್ಭಜಾತನ ಹರಿಯ ಕೈಯ ಕೊಲಿಸಿದೆಲಾ ೪

ಅಂಬುಧಿಯೆ ವಸನಗಳು ಕುಂಭ ಕುಚಗಳೆ ಗಿರಿಯು
ಸಂಭ್ರಮದ ನದಿ ಕಾಲುವೆ ನಿನ್ನ ಬೆವರುಗಳು
ಎಂಭತ್ತನಾಲ್ಕು ಲಕ್ಷ ಜೀವರಾಶಿಗಳೆಲ್ಲ
ತುಂಬಿಕೊಂಡಿರುತಿಹುದು ಅಂಗೋಪಾಂಗದಲಿ ೫

ಮೂಢನಾದೆನು ನಿನ್ನ ಬೇಡಿಕೊಂಬರೆ ಮನದಿ
ನೋಡದಿರು ಅವಗುಣವ ರೂಢಿ ದೇವತೆಯೆ
ಮಾಡು ದಯವನು ನೀನು ಮನದಭೀಷ್ಟವನೆಲ್ಲ
ಪಾಡು ಪಂಥವು ಬೇಡ ಪಡೆದ ಮಗನೊಡನೆ ೬

ನಂಬಿದೆನು ನಾ ನಿನ್ನ ಕುಂಭಿನಿಯೆ ಕೈವಿಡಿದು
ಇಂಬಾದ ಪದವಿಯನು ಸಂಭ್ರಮದಿ ಕೊಡುತ
ಬೆಂಬಡದೆ ವರಾಹತಿಮ್ಮಪ್ಪ ಕರುಣದಲಿ
ಹಂಬಲಿಪ ತೆರದಿಂದ ಸಲಹುವುದು ಜಗದಿ ೭

## ೬೩

ಸ್ವಾಮಿ ವೆಂಕಟರಮಣ ಭೂಮಿಪಾಲಕ ದೇವ
ಕಾಮಿತಾರ್ಥವನೀವ ಕರುಣ ಸಂಜೀವ ಪ

ಸುರರು ಅಸುರರೆಲ್ಲ ಶರಧಿಯ ಮಥಿಸಲು
ಸಿರಿಯು ಜನಿಸಿ ಬಂದು ಹರಿಯ ಸೇರಿದಳು ೧

ಪತಿ ನೀನೇ ಗತಿಯೆಂದು ಸತಿ ಕುಸುಮಮಾಲೆಯನು
ಅತಿ ಹರುಷದಿ ಜಗತ್ಪತಿಗೆಯಿಕ್ಕಿದಳು ೨

ವಾರಿಧಿಯಾಕ್ಷಣ ಧಾರೆಯನೆರೆಯಲು
ವಾರಿಜಾಂಬಕ ಲಕ್ಷ್ಮಿ ಒಡನೆ ನಿಂದಿರಲು ೩

ಫಣಿಪತ್ರ[1]ಸೆಮಣಿಯೊಳು ರಮಣಿಯನೊಡಗೊಂಡು
ಗುಣನಿಧಿಯು ಒಪ್ಪಿರಲು ತರುಣಿಯರೆಲ್ಲ ೪

ಪಚ್ಚವ ಧರಿಸಿ ನವ ಸ್ವಚ್ಛವಾಗಿಯೆ ತುಳಿದು
ಅಚ್ಯುತ ಮಹಾಲಕ್ಷ್ಮಿ ಗಚ್ಚಬೇಕೆನುತ ೫

---

೧.ಯ

ಸಣ್ಣ ಮಲ್ಲಿಗೆ ಎಣ್ಣೆ ಬಣ್ಣವಾದರಿಸಿನವ
ಪುಣ್ಯವಂತೆಗೆ ಕೈಗರ್ಣವ ಕೊಡಲು ೬

ಮೊದಲು ಪಾದವ ತೊಳೆದು ಜಲವನ್ನು ಸಿರಿ ತನ್ನ
ತಲೆಗೆ ಪ್ರೋಕ್ಷಿಸಿಕೊಳಲು ಹರಿಯು ಮೆಚ್ಚಿದನು ೭

ಗಟ್ಟಿಯಾದರಿಸಿನವ ಬಟ್ಟಲೆಣ್ಣೆಯಗೂಡಿ
ಮುಟ್ಟಲಂಜಿಯೆ ನಿಲಲು ಸೃಷ್ಟಿಪಾಲಕನ ೮

ಅಂಗೈಯ ಅರಿಸಿಣವ ಮುಂಗೈಗೆ ಒರಸುತ್ತ
ರಂಗನ ಸಿರಿಮೊಗವ ಕಂಗಳಿಂದೀಕ್ಷಿಸುತ ೯

ಅಭಯ ಹಸ್ತವನಿತ್ತ ತ್ರಿಭುವನದೊಡೆಯನು
ಅಬುಜಲೋಚನೆ ಮುಖಾಂಬುಜಕೆ ತಿಮುರಿದಳು ೧೦

ಅತಿ ಹರುಷವ ತಾಳಿ ಸತಿ ಕೈಯ ಅರಿಶಿಣವ
ಪತಿಯಾದಿಕೇಶವನ ನುತಿಸಿ ಊರಿದಳು ೧೧

ಸಿರಿಯೆನೆತ್ತಿದ ಕೈಯ ಹರಿ ತಾನು ತೋರಿಸಲು
ಸಿರಿ ನಾರಾಯಣ ಎಂದು ಅರಿಶಿಣವ ತಿಮುರೆ ೧೨

ಶಂಖವ ಧರಿಸಿದ ಪಂಕಜಾಕ್ಷನೆ ವಿಷ್ಣು
ವೆಂಕಟೇಶನ ಕರಪಂಕಜಕೆ ತಿಮುರೆ ೧೩

ಕದನದೊಳ್ ಖಳರನು ಸದೆದು ಮರ್ದಿಸಿ ಗೆಲಿದು
ಮಧುಸೂದನ ಶ್ರೀವತ್ಸದೆದೆಯ ತೋರೆನುತ ೧೪

ಚಕ್ರವ ಪಿಡಿದು ಪರಾಕ್ರಮಿಯೆನಿಸಿಯೇ
ಅಕ್ರೂರಗೊಲಿದ ತ್ರಿವಿಕ್ರಮಗೆ ತಿಮುರೆ ೧೫

ವಾಮನನನಾಗೆ ಶ್ರಮವನು ಪಟ್ಟೆನುತ
ಭೂಮಿಯ ಅಳೆದ ಪಾದವಿತ್ತಲು ತಾರೆನುತ ೧೬

ಕಾದಲನು ಕಾಣುತ್ತ ಪಾದವನಿತ್ತನು
ಶ್ರೀಧರನೆನುತಲಿ ಅರಸಿನವ ತಿಮುರೆ ೧೭

ವಾಮಪಾದವ ಕಂಡು ಭಾಮಿನಿ ತಾರೆನೆಲು
ಸೋಮಸನ್ನಿಭ ಹೃಷಿಕೇಶ ತಾನಿತ್ತ ೧೮

ಪದ್ಮಬಾಂಧವ ತೇಜ ಪದ್ಮಸಂಭವ ಪೂಜ
ಪದ್ಮನಾಭಗೆ ಪದ್ಮಗಂಧಿ ತಾ ತಿಮುರೆ ೧೯

ಆ ಮಹಾ ನಾಮದ ದಾಮೋದರನ ಕಂಡು
ಭಾವೆ ಮಹಾಲಕ್ಷುಮಿ ವೀಳ್ಯವ ಕೊಡಲು ೨೦

ವಾಸುದೇವನು ತನ್ನ ಅರಸಿ ಮಾಲಕ್ಷ್ಮಿಗೆ
ಪೂಸಿದನರಿಸಿನದ ಎಣ್ಣೆಯ ಮೊಗಕೆ ೨೧

ಪಂಕಜಾಕ್ಷನ ಕಂಡು ಕಂಕಣದ ಹಸ್ತವನು
ಕುಂಕುಮದೆಣ್ಣೆಯ ಸಂಕರ್ಷಣ ತಿಮುರೆ ೨೨

ಬುದ್ಧಿವಂತೆಯ ಎಡದ ಮುದ್ದು ಹಸ್ತವ ನೋಡಿ
ಉದ್ಧರಿಸಿ ನವ ಪ್ರದ್ಯುಮ್ನ ನಗುತ ೨೩

ಮುನಿಜನ ವಂದ್ಯನು ಅನಿರುದ್ಧ ನಗುತಲೆ
ಘನಕುಚಮಂಡಲಕೆ ಅರಿಸಿನವ ತಿಮುರೆ ೨೪

ಪುರುಷರೊಳು ಉತ್ತಮನು ಹರುಷವನು ತಾಳಿಯೆ
ಅರಸಿ ಮಹಾಲಕ್ಷುಮಿಗೆ ಅರಿಸಿನವ ತಿಮುರೆ ೨೫

ಅಧೋಕ್ಷಜನು ತನ್ನ ತುದಿವೆರಳ ಅರಿಸಿನವ
ಪದುಮನೇತ್ರೆಯ ಪದದೊಳಗೆ ಮಿಡಿದಿರ್ದ ೨೬

ನಾರಸಿಂಹನು ಸತಿಯ ಮೋರೆಯಿಂದಾರಭ್ಯ
ಓರಣವಾಗಿಯೇ ಅರಿಸಿನವ ತಿಮುರೆ ೨೭

ನೆಚ್ಚಿಯೆ ಹರಿ ತಾನು ಅಚ್ಚ ಕರ್ಪೂರದೆಲೆಯ
ಆಶ್ಚರ್ಯವಾಗಿಯೆ ಅಚ್ಯುತ ಕೊಡಲು ೨೮

ಮನದಿ ಲಜ್ಜಿತೆಯಾಗಿ ಘನಮಹಿಮ ಮುನಿವಂದ್ಯ
ತನಗೆ ವಲ್ಲಭ ನಿಜನಾದನೆನುತ ೨೯

ಆ ಪರಮಹಿಮನು ರೂಪಸಂಪನ್ನ ದ–
ಯಾಪರನಾಗಿಯೆ ಉಪೇಂದ್ರ ತಾನೊಲಿದು ೩೦

ಹರಯೆಂಬ ನಾಮದಿ ಹರದಿ ಮಾಲಕ್ಷ್ಮಿಯ
ವರಿಸಿದ ಶ್ರೀಹರಿಯು ಹರದಿಯರ್ಪೊಗಳೆ ೩೧

ಬೆಟ್ಟದೊಡೆಯನೆನಿಸಿ ದೃಷ್ಟಿಗೋಚರವಾದ
ಶ್ರೀಕೃಷ್ಣ ಮಾಲಕ್ಷುಮಿಗೆ ಆರತಿಯ ತಿಮುರೆ ೩೨

ವರಮಹಾಲಕ್ಷುಮಿಗೆ ವರಾಹತಿಮ್ಮಪ್ಪಗೆ
ಅರಸಿನದೆಣ್ಣೆಯ ರಚಿಸಿದ ಪರಿಯು ೩೩

## (ಆ). ವಿವಿಧ ದೇವತಾ ಸ್ತುತಿ

### ೬೪

### ರುದ್ರದೇವರು

ಬೇಡಿಕೊಂಬೆನು ನಾನು ರೂಢಿಗೊಡೆಯನಾಗಿ
ಆಡುವನಂತೇಶನಿದಿರೊಳು ಮೂಡಿದ ಚಂದ್ರಶೇಖರನ ಪ

ಇಪ್ಪತ್ತುಯೇಳುಳ್ಳ ತಾರೆಯ ಗಂಡನ
ಒಪ್ಪುವ ಶಿರದೊಳಗೆ
ಸರ್ಪನ ಮೇಲೊರಗಿಪ್ಪನ ಮಗಳನ್ನು
ಒಪ್ಪದಿ ಧರಿಸಿದನ ೧

ಮುಪ್ಪುರಹರನೆಂದು ಮೂರು ದೃಷ್ಟಿಗಳುಳ್ಳ
ಕಪ್ಪುಕೊರಳ ದೇವನ
ರೌಪ್ಯದ ಪುರವರಧೀಶನೆಂದೆನಿಸಿಯೆ
ಇಪ್ಪಂಥ ಪರಶಿವನ ೨

ಗಿರಿಯ ನಂದನೆಯನ್ನು ಉರದೊಳು ಧರಿಸಿಯೆ
ಕರಿಚರ್ಮ ಪೊದ್ದವನ
ಗರುಡನ ಭಯಕಂಜಿ ಮೊರೆಹೊಕ್ಕ ಶರಣನ
ಕರುಣದಿ ಕಾಯ್ದವನ ೩

ಉರಗಾಭರಣವ ಸುತ್ತಿಕೊಂಡಿರುವಂಥ
ಗರುವ ದೇವರ ದೇವನ
ಚರಣ ಸೇವಕರನ್ನು ಸ್ಥಿರವಾಗಿ ಸಲುಹುವ
ಬಿರುದುಳ್ಳ ಪರಶಿವನ ೪

ದ್ವಾರಕಿವಾಸನಾಚಾರ್ಯನ ಮುಖದಿಂದ
ಸೇರಿಸಿಕೊಂಡವನ

ಧಾರುಣಿ ಸುರರಿಗೆ ಶೈವ ವೈಷ್ಣವವೆಂಬ
ಚಾರವ ತೋರಿದನ ೫

ಮೀರಿದ ದಾರಿದ್ರ್ಯವೆಂಬ ವೃಕ್ಷದ ಬೇರ
ಹಾರಿಸಿ ತರಿದವನ
ಸಾರಿದ ಭಕ್ತರ ಸಲುಹುತ್ತ ಮುಂದಣ
ದಾರಿಯ ತೋರ್ಪವನ ೬

ಬತ್ತೀಸ ಗ್ರಾಮಕ್ಕೆ ಕರ್ತನೆಂದೆನಿಸಿಯೆ
ಅರ್ತಿಯಿಂ ನಲಿವವನ
ಪಾರ್ಥಸಂಗರದೊಳು ಮೆಚ್ಚಿಯೆ ಶರವಿತ್ತು
ಕೀರ್ತಿಯ ಪೊತ್ತವನ ೭

ಸ್ಮಾರ್ತರ ನಿಂದಿಸಿ ರಚಿಸುವ ಯಾಗಕ್ಕೆ
ಮೃತ್ಯುವನೊಟ್ಟಿದನ
ಮೃತ್ಯುಂಜಯನೆಂದು ಮೊರೆಹೊಕ್ಕ ನರರ ಕಾ–
ಯುತ್ತಲಿರ್ಪವನ ೮

ಕೊಡಲಿಯ ಪಿಡಿದವ ಪಡೆದಿಹ ಕ್ಷೇತ್ರದಿ
ಉಡುಪಿನ ಸ್ಥಳವೆಂಬುದು
ಪಡುವಲು ಮೂಡಲು ಎರಡಾಗಿ ತೋರುವ
ಒಡಲೊಂದೆ ಮೃಡನೊಬ್ಬನೆ ೯

ಕಡಗೋಲ ಪಿಡಿದಿಹ ಕೃಷ್ಣ ನಿಂತದರಿಂದ
ಪೊಡವಿಯುತ್ತಮವಾದುದು
ಬಡವರ ಬಡತನ ಉಡು (ಪಿಯ)[೧] ಕಾಣಲು
ಸಡಲಿತು ಸುಲಭದಲಿ ೧೦

ಚಿಂತೆಗಳೆನ್ನನು ಭ್ರಾಂತಿ(ಬ)[೨] ಡಿಸುತಿದೆ
ಅಂತಕಾಂತಕ ಲಾಲಿಸು
ಪಂಥವ ಮಾಡದೆ ಏಕಾಂತ ಭಕ್ತರಿಗೆಲ್ಲ
ಸಂತೋಷವನು ಪಾಲಿಸು ೧೧

ಪಿಂತೆನ್ನ ಕೃತ್ಯ ಬೆನ್ನಾಂತು ಬಂದರು ಇಭ-
ವಾಂತದಿ ನೀ ಹಾರಿಸು
ಸಂತತ ಎನ್ನನು ಸಲಹಯ್ಯ ಪಾರ್ವತೀ
ಕಾಂತನೆ ಕಡೆ ಸೇರಿಸು ೧೨

ಹರ ಹರ ಮಹಾದೇವ ಪರದೈವ ಶಂಕರ
ಮೆರೆವ ಆ ವೃಷಭಧ್ವಜ
ವರದ ಕೃತ್ತಿವಾಸ ಸ್ಮರನಾಶ ದೇವೇಶ
ಸಿರಿಕಂಠ ಪುರಹರನೆ ೧೩

ಗಿರಿಯ ಮಗಳ ಗಂಡ ಉರಿಗಣ್ಣ ಮಹಾರುದ್ರ
ಸ್ಥಿರವಾದ ಶಿವಬೆಳ್ಳಿಯ
ಪುರಪತಿ ಅನಂತೇಶ ವರಾಹತಿಮ್ಮಪ್ಪನ
ಸರಿಯೆಂದು ತೋರ್ಪವನ ೧೪

## ೬೫

ಸಕಲವೆಲ್ಲವು ಶಿವನ ಲಿಂಗದೊಳಗಡಗಿದುದು
ಲಿಂಗವೆ ಮಾಲಿಂಗವಾಗಿ ತೋರುವುದು ಪ

ಭಕುತಿಕರು ಮಮತೆಯೊಳು ಸ್ಥಾಪಿಸಿಯೆ ಅರ್ಚಿಸಲು
ಸುಕೃತಫಲವನು ಅಳೆವ ಕೊಳಗವನು ಕಾಣೆ ಅ.ಪ

ಆ ಮಹಾ ಸಹಸ್ರನಾಮದೊಳಗತ್ಯಧಿಕ
ಸೊಮೇಶನೆಂದೆಂಬ ಸ್ವಾಮಿಯನು ಕಂಡು
ಸೋಮವಾರದ ದಿವಸ ಸಾಮರುದ್ರವ ಜಪಿಸಿ
ನೇಮದಿಂ ಪೂಜಿಸಲು ಕಾಮಿತದ ಫಲವು ೧

ಇನ್ನೇನ ವರ್ಣಿಸುವೆ ಈಶ ನಿನ್ನಯ ಮಹಿಮೆ
ಉನ್ನಂತವಾಗಿ ಜಗದೊಳು ಚರಿಸಿತು

ಪನ್ನಗೇಶನ ಬಲದ ಪಶ್ಚಿಮದ ದೆಸೆಯೊಳ್ ಪ್ರ-
ಸನ್ನವಾದನು ಸೋಮನಾಥನೆಂದೆನುತ ೨

ಸ್ವಾಮಿ ನಿನ್ನಯ ಪಾದ ಪ್ರತ್ಯಕ್ಷವಾಗಿಯೆ
ಸೋಮೇಶನೆಂದೀಗ ತಾ ಮೆರೆದುದು
ಭೂಮಿಯ ಜನರಿಗೆ ಭುಕ್ತಿ ಮುಕ್ತಿಯನಿತ್ತು
ಪ್ರೇಮದಿಂ ಸಲಹುತ್ತ ಕಾಮಿತಾರ್ಥವನೀವ ೩

ಲೋಕೋಪಕಾರಕ್ಕೆ ಸೋಮೇಶ ನೀ ಬಂದೆ
ಗೋಕರ್ಣ ಶ್ರೀಶೈಲ ಕಾಶಿ ರಾಮೇಶ್ವರವು
ಬೇಕೆಂಬುದಿಲ್ಲಿನ್ನು ಎನ್ನ ಭೀತಿಯ ಗಿರಿಯ
ನೂಕುವತಿಶಯ ಕುಲಿಶ ನೀನು ಜಗದೀಶ ೪

ಜೋಕೆಯೊಳು ಮನದೊಳಗೆ ಅಡಗಿಸಿಯೆ ಭಜಿಸಿದರೆ
ರಾಕೇಂದುಧರ ತನ್ನ ಪದವನೀವ
ಯಾಕೆ ಮನದೊಳು ಬಿಡುವೆ ಶಿವನಾಮವನು ನೀನು
ಏಕೆ ಕಡೆಯಲಿ ಕೆಡುವೆ ಮರುಳು ಜೀವನವೆ ೫

ಸಡಗರದಿ ಸರ್ವವೂ ನಿನ್ನಲ್ಲಿ ಅಡಗಿದುದು
ಜಡೆಯೊಳಗೆ ಅಡಗಿದುದು ಪೊಡವಿಗುತ್ತಮ ನದಿಯು
ಉಡುಪತಿಯು ಅಡಗಿದನು ಊರ್ಧ್ವ ಫಣೆಯೊಳಗೆ
ಪಿಡಿಯೊಳಗೆ ಅಡಗಿದುದು ವೇದ ಮೃಗರೂಪಾಗಿ ೬

ಕಿಚ್ಚು ಅಡಗಿತು ಅವನ ಅಚ್ಚ ಹಣೆಗಣ್ಣಿನೊಳು
ಮುಚ್ಚಿ ತೆರೆವಕ್ಷಿಯೊಳು ಮೂಜಗದ ಬೆಳಕು
ಬಿಚ್ಚಿಟ್ಟಿ ವಿಷಕಂಠದೊಳು ಲೋಕವನು
ಎಚ್ಚರಿಪ ಮಂತ್ರಗಳು ಬಾಯೊಳಗಡಗಿದುದು ೭

ಶುದ್ಧ ಸ್ಫಟಿಕ ಥರದ ಕಾಯಕಾಂತಿಗಳುಳ್ಳ
ಬದ್ಧಿಗೆಯ ದಾರದಂದದಿ ಉರಗನೊಪ್ಪುಗಳು
ಉದ್ದಿಶ್ಯವಾಗಿ ಭಜಿಸಿದ ಭಕ್ತರುಂಡಗಳು
ತಿದ್ದಿಟ್ಟಿ ಆಭರಣ ತಿರಿಶೂಲಧರಣ ೮

ಪುಲಿಕರಿಯ ಪೊಳಪುಗಳು ನಳನಳಿಪ ವಸನಗಳು
ಹೊಳೆವ ಮುಖತೇಜಗಳು ನಳಿನನೇತ್ರಗಳು
ನಲಿವಗಣ ಕೋಟಿಗಳ ಮಧ್ಯದೊಳು ಕೈಲಾಸ
ಇಳಿದು ಬಂದನು ನಮ್ಮ ಬಳಿಗೆ ಸೋಮೇಶ ೯

ನಾಸಿಕದಿ ಕೌಮಾರಿಗವಧಿಯಾಗಿಹ ಸ್ಥಳ ವಿ–
ಶೇಷವಾಗಿಹ ಶುದ್ಧ ರೌಪ್ಯಪುರದೊಳಗೆ
ಭೂಸುರೋತ್ತಮಗೊಲಿದು ಭೂರಿಭಾಗ್ಯವನಳೆದು
ವಾಸವಾದೆಯೊ ಜಗದೀಶ ಸೋಮೇಶ ೧೦

ಭಾಳನೇತ್ರನೆ ನೀಲಕಂಠ ಶೂಲಾಸ್ಥಿಧರ
ಕಾಲರುದ್ರ ವ್ಯಾಳಭೂಷ ಸರ್ವೇಶ
ಲಾಲಿಸೈ ಬಿನ್ನಪವ ಪಾಲಿಸೆನ್ನನು ಬೇಗ
ಬಾಲಕನು ಅಲ್ಲವೇ ಭಕ್ತಸುರಧೇನು ೧೧

ಸಾರಿ ನೋಡಿರೊ ಮೂರು ಲಿಂಗವನು ನೀವೀಗ
ಧಾರುಣಿಯಳೊಂದು ಶಿವಲಿಂಗವನು ಬೇಗ
ಮೇರುವಿಗೆ ಸಮವಾದ ಹೇಮವನು ವಿಪ್ರರಿಗೆ
ಧಾರೆಪೂರ್ವಕವಾಗಿ ಇತ್ತ ಫಲ ಒದಗುವುದು ೧೨

ಶಿವನ ಪೂಜೆಯೆ ಭಕ್ತಿ ಶಿವನ ಪೂಜೆಯೆ ಮುಕ್ತಿ
ಶಿವಮಂತ್ರವೆ ಶಕ್ತಿ ಶಿವನೆ ಪರಶಕ್ತಿ
ಶಿವನಾಮವನು ಭಜಿಸಿ ಸಿರಿಯ ಪಡೆದನು ಹರಿಯು
ಶಿವನ ಮರೆಯದೆ ಭಜಿಸು ಇಹಪರವ ಸೃಜಿಸು ೧೩

ನಿನ್ನನೇ ನಂಬಿದೆನು ಉನ್ನತಾನಂತೇಶ
ಮನ್ನಿಸಿ ದಯದೋರು ಚಂದ್ರಮೌಳೀಶ
ಇನ್ನು ಭಯವಿಲ್ಲೆನಗೆ ಹರಸೆನ್ನ ಸೋಮೇಶ
ಎನ್ನೊಡೆಯ ಶ್ರೀಕೃಷ್ಣ ವರಾಹತಿಮ್ಮಪ್ಪ ೧೪

## ೬೬

ಸಾರಿದ ಭಕ್ತಸಂಸಾರಿ ಮಾಲಿಂಗ
ಕ್ಷೀರ ಗ್ರಾಮದಿ ನಿಂತ ಧೀರ ಮಾಲಿಂಗ ಪ

ಹರ ಹರ ಮಹಾದೇವ ಶಿವಮಾಲಿಂಗ
ವರ ಶಂಭೊ ಗಿರಿವಾಸ ಶಂಕರ ಮಾಲಿಂಗ
ಉರಗ ಭೂಷಣ ಗಂಗಾಧರನೆ ಮಾಲಿಂಗ
ಪರದೈವ ಶಶಿಮೌಳಿ ಗರುವ ಮಾಲಿಂಗ ೧

ಖಂಡಲಪತಿಯೆ ದೋರ್ದಂಡ ಮಾಲಿಂಗ
ತಂಡದ ಸುರರೊಳ್ ನಂಜುಂಡ ಮಾಲಿಂಗ
ರುಂಡಮಾಲೆಯ ಧರಿಸಿಕೊಂಡ ಮಾಲಿಂಗ
ಕೆಂಡಾಕ್ಷತೇಜ ಮಾರ್ತಾಂಡ ಮಾಲಿಂಗ ೨

ಮಾರಹರನೆ ಶ್ರುತಿಸಾರ ಮಾಲಿಂಗ
ಧೀರ ಬಾಣನ ದ್ವಾರ ಸಾರಿ ಮಾಲಿಂಗ
ಮೂರುಪುರ ವೀರ ಸಂಹಾರಿ ಮಾಲಿಂಗ
ಘೋರ ಸಂಸಾರ ಭವದೂರ ಮಾಲಿಂಗ ೩

ಬ್ರಹ್ಮಾದಿ ಸುರವಂದ್ಯ ಹರ್ಮಿ ಮಾಲಿಂಗ
ನಿರ್ಮಲ ರೂಪಕ ಧರ್ಮಿ ಮಾಲಿಂಗ
ಕರ್ಮಬಂಧದ ನರವರ್ಮಿ ಮಾಲಿಂಗ
ಉರ್ವಿಯೊಳು ನೀ ಬಹಳ ಪೆರ್ಮಿ ಮಾಲಿಂಗ ೪

ನೀಲಕಂಠನೆ ನಿಗಮಶೀಲ ಮಾಲಿಂಗ
ಪಾಲ ಕರಶೂಲ ಕಪಾಲಿ ಮಾಲಿಂಗ
ಕಾಲ ಕಲ್ಪಾಂತಕ ಜಾಲ ಮಾಲಿಂಗ
ಲೋಲಾಸ್ಥಿಮಾಲ ಸುರಮೂಲ ಮಾಲಿಂಗ ೫

ಪ್ರಣವ ರೂಪಕ ಪಾರ್ವತಿ ಮಾಲಿಂಗ
ತ್ರಿಣಯ ಗಣಸೇವಪರ ಧಣುರೆ ಮಾಲಿಂಗ

ಫಣಿ ಫಣ ಮಣಿ ಕರ್ಣಾಭರಣ ಮಾಲಿಂಗ
ಅಣುಮಹಾರೂಪ ಗುಣನಿಧಿಯೆ ಮಾಲಿಂಗ ೬

ಪಂಥ ಬೇಡೆನ್ನೊಳು ನಿಶ್ಚಿಂತ ಮಾಲಿಂಗ
ಸಂತತ ಸಲಹೆನ್ನ ಕಾಂತ ಮಾಲಿಂಗ
ಅಂತರಾತ್ಮಕನಾದ ಶಾಂತ ಮಾಲಿಂಗ
ಚಿಂತಿತಾರ್ಥವ ತೋರುವಂಥ ಮಾಲಿಂಗ ೭

ಬೇಡಿದ ವರಗಳ ನೀಡೊ ಮಾಲಿಂಗ
ರೂಢಿಯ ಒಡೆಯ ಮಾತಾಡೊ ಮಾಲಿಂಗ
ಮಾಡಿದ ಸೇವೆಯ ನೋಡೊ ಮಾಲಿಂಗ
ಜೋಡಾಗಿ ನಿನ್ನೊಳು ಕೂಡೊ ಮಾಲಿಂಗ ೮

ಭೂಮಿಗೆ ವರಾಹತಿಮ್ಮಪ್ಪನಂತೆ
ಗ್ರಾಮ ಮಂದಿರದೊಳು ನೆಲಸಿಹನಂತೆ
ಪ್ರೇಮದಿ ಅದನೆಲ್ಲ ಕಡಿದುಕೊಡುವಂತೆ
ಈ ಮಹಾ ಮಾಲಿಂಗ ಸ್ವಾಮಿ ದಯವಂತೆ ೯

## ೬೭

ಮಂಗಳಂ ಜಯ ಮಂಗಳಂ
ಲಿಂಗಾಕಾರದ ಪರಶಿವಗೆ ಪ

ರಜತಾದ್ರಿಪುರದೊಳು ನಿಂದವಗೆ
ಭಜಕರ ಸಲುಹಲು ಬಂದವಗೆ
ನಿಜಸುರ ಸೇವಿತ ಗಜಚರ್ಮಾಂಬರ
ತ್ರಿಜಗ ವಂದಿತನಾದ ಪರಶಿವಗೆ ೧

ಬಾಣನ ಬಾಗಿಲ ಕಾಯ್ದವಗೆ
ತ್ರಾಣದಿ ತ್ರಿಪುರವ ಗೆಲಿದವಗೆ

ಕಾಣದ ಅಸುರಗೆ ಪ್ರಾಣಲಿಂಗವನಿತ್ತು
ಮಾಣದೆ ಭಕ್ತರ ಸಲುಹುವಗೆ ೨

ಗಂಗೆಯ ಜಡೆಯೊಳು ಧರಿಸಿದಗೆ
ಸಿಂಗಿಯ ಕೊರಳೊಳು ನುಂಗಿದಗೆ
ತಿಂಗಳ ಸೂಡಿಯೆ ಅಂಗ ಭಸ್ಮಾಂಗದಿ
ಕಂಗಳು ಮೂರುಳ್ಳ ಕೃಪಾಂಗನಿಗೆ ೩

ಅಸ್ಥಿಯ ಮಾಲೆಯ ಧರಿಸಿದಗೆ
ಹಸ್ತದಿ ಶೂಲವ ಪಿಡಿದವಗೆ
ವಿಸ್ತರವಾಗಿಯೆ ಭಸ್ಮಸುವಾಸಿಗೆ
ಸತ್ಯದಿ ವರಗಳನಿತ್ತವಗೆ ೪

ಅಂಬಿಕಪತಿಯೆಂದೆನಿಸಿದಗೆ ತ್ರಿ-
ಯಂಬಕ ಮಂತ್ರದಿ ನೆಲೆಸಿದಗೆ
ನಂಬಿದ ಸುರರಿಗೆ ಬೆಂಬಲವಾಗಿಯೆ
ಇಂಬಾದ ಪದವಿಯ ತೋರ್ಪವಗೆ ೫

ಪಂಚಾಕ್ಷರದೊಳು ಒಲಿದವಗೆ
ಪಂಚಮ ಶಿರದೊಳು ಮೆರೆವವಗೆ
ಪಂಚಮ ಪಾತಕ ಸಂಚಿತ ಕರ್ಮವ
ವಂಚಿಸಿ ಭಕ್ತರ ವಾಂಛಿತವೀವಗೆ ೬

ಪಾಶುಪತವ ನರಗಿತ್ತವಗೆ
ಶೇಷಾಭರಣವ ಹೊತ್ತವಗೆ
ಕಾಶಿಗಧಿಕವಾಗಿ ಕೈವಲ್ಯವಿತ್ತು ವಿ-
ಶೇಷದಿ ಜನರನು ಸಲುಹುವಗೆ ೭

ಯಕ್ಷ ಸುರಾಸುರ ವಂದಿತಗೆ
ದಕ್ಷನ ಮಖವನು ಕೆಡಿಸಿದಗೆ
ಕುಕ್ಷಿಯೊಳೀರೇಳು ಜಗವನುದ್ಧರಿಸಿಯೆ
ರಕ್ಷಿಸಿಕೊಂಬಂಥ ದೀಕ್ಷಿತಗೆ ೮

ಕಾಮಿತ ಫಲಗಳ ಕೊಡುವವಗೆ
ಪ್ರೇಮದಿ ಭಕ್ತರ ಸಲಹುವಗೆ
ಭೂಮಿಗೆ ವರಾಹತಿಮ್ಮಪ್ಪನ ದಾಸರ
ಸ್ವಾಮಿಯೆಂದೆನಿಸುವ ಈಶನಿಗೆ ೯

## ೬೮

ಮಂಗಳ ಜಯ ಜಯ ಮಂಗಳ ತುಳಸಿಗೆ
ಮಂಗಳ ಜಯ ಜಯ ರಂಗನಾಯಕಗೆ ಪ

ವಾರಿಧಿ ಮಥನದಿ ವಾರಿಜನಾಭನ
ವಾರಿಜನೇತ್ರನ ವಾರಿಗಳಿಂದ
ತೋರಿದ ತುಳಸಿಯು ಸೇರಿದಳೆಲ್ಲ ಶ–
ರೀರವ ಪಾವನ ಮಾಡಬೇಕೆನುತ ೧

ತುಳಸಿಯ ನಾಮವ ಬೆಳೆಸಿಯೆ ಲೋಕವ
ಬಳಸಿಕೊಂಡಿರುವೆನು ಎನುತಲೆ ಬಂದು
ಕಳಸಿದ ಮನುಜರ ಉಳಿಸಬೇಕೆನುತಲೆ
ಕಳಸದ ತೆರನಂತೆ ಉದಿಸಿದಳು ತುಳಸಿ ೨

ಸಾಲಿಗ್ರಾಮವು ಇಲ್ಲದಾತನ ಮನೆಯೊಳು
ಕಾಲೂರಿ ನಿಲ್ಲಳು ಹರುಷದೊಳಿವಳು
ಪಾಲಿಪ ಹರಿಶಿಲೆಯಿರುವಂಥ ಸ್ಥಳದೊಳು
ಓಲಗವಾಗಿಯೆ ತೋರುತ್ತಲಿಹಳು ೩

ಎಲ್ಲಿಯು ತುಳಸಿಯು ಅಲ್ಲಿಯೆ ಶ್ರೀಹರಿ
ವಲ್ಲಭೆ ಸಹವಾಗಿ ಇರುತಿಪ್ಪ ಬಿಡದೆ
ಫುಲ್ಲನಾಭನು ಕೃಷ್ಣ ಆಡಿದ ಪರಿಯನು
ಗೊಲ್ಲತಿಯರು ಕಂಡು ನಾಚಿ ಹಿಗ್ಗಿದರು ೪

ಬಂದಳು ಭಕ್ತರ ಮಂದಿರದೆಡಗೆ ಗೋ-
ವಿಂದನ ಕಂಡಿರೆ ಎಂದು ಕೇಳಿದಳು
ವೃಂದಾವನದೊಳು ನಿಂದಳು ತುಳಸಿಯು
ಚಂದವು ನಿಮ್ಮಯ ಭವನದೊಳೆನುತ ೫

ಗೋವಿನ ತುಪ್ಪದಿ ದೀವಿಗೆಯಿರಿಸಿಯೆ
ಭಾವ ಶುದ್ಧತ್ವದಿ ಬಲವಂದರವಳು
ಕಾವಲು ಪೋಗಿಯೆ ಕರ್ಣದ ಒಳಗಿದ್ದು
ಜೀವಿತ ಮುಕ್ತಿಯ ತೋರುವೆನೆನುತ ೬

ಸರ್ವತೀರ್ಥಗಳನ್ನು ಮೂಲದಿ ಧರಿಸಿಯೆ
ಸರ್ವ ದೇವರ್ಕಳ ಮಧ್ಯದೊಳಿರಿಸಿ
ಸರ್ವ ವೇದಂಗಳ ಶಿರದೊಳು ಧರಿಸಿಯೆ
ಸರ್ವವ ಕಾಲಗೆ ನಿರ್ವಹಿಸುತಿಹಳು ೭

ಅಂಗಳದೊಳಗಿಹ ಮಂಗಳ ಮಹಿಮಗೆ
ರಂಗುವಲ್ಲಿಯನಿಕ್ಕಿ ಶೃಂಗಾರವಾಗಿ
ಸಾಂಗ್ಯದೊಳಿಹ ಒಂದು ಮಂಗಳ ಬರೆದರೆ
ಬಂಗಾರ ಮನೆಯನ್ನು ತೋರುವಳಿವಳು ೮

ಮೂಲದ ಮೃತ್ತಿಕೆ ಮೂಲ ಪಣೆಯೊಳಿಟ್ಟು
ಕಾಲದಿ ಸ್ನಾನವ ಮಾಡಿದ ನರರು
ಭಾಳವಾಗಿಹ ಅಘರಾಶಿಯನೆಲ್ಲವ
ಚಾಳಿಸಿ ಕಳೆವರು ಕಾಲನ ಗೆಲಿದು ೯

ತನ್ನ ಕಾಷ್ಟವ ತಂದು ಚೆನ್ನದಿ ಸುತ್ತಿಸಿ
ಕರ್ಣದಿ ಧರಿಸಿದ ಮನುಜರಿಗೆಲ್ಲ
ಉನ್ನತ ಪದವಿಯ ತೋರುವೆನೆನುತಲೆ
ಪನ್ನಗಶಯನಗೆ ಪ್ರೀತಿಯಾಗಿಹಳು ೧೦

ಉತ್ತಮವಾಗಿಹ ಕಾರ್ತಿಕ ಮಾಸದಿ
ಸುತ್ತ ದೀವಿಗೆಯಿಟ್ಟು ಪೂಜಿಸಲಿವಳು
ಅರ್ತಿಯಿಂದಲೆ ನಲಿನಲಿಯುತ್ತ ದೇವಿಯ
ಕರ್ತನ ಕೀರ್ತನೆ ರಚಿಸುವ ಮನದಿ ೧೧

ಬ್ರಾಹ್ಮಿ ಮುಹೂರ್ತದಿ ಸ್ನಾನ ತರ್ಪಣವನ್ನು
ನಿರ್ಮಲ ತೀರದಿ ತಿದ್ದಿಯೆ ಕೊಂಡು
ಧರ್ಮಕ್ಕೆ ಯೋಗ್ಯಳ ಪೂಜೆಯ ಮಾಡಲು
ಕರ್ಮ ಬಂಧಗಳೆಲ್ಲ ಕಡಿದುಕೊಳುವುದು ೧೨

ಸಾಯಂಕಾಲದಿ ದೀವಿಗೆ ಹಚ್ಚಲು
ಮಾಯಗಳೆಲ್ಲವು ಮರುಗಿ ಪೋಗವುವು
ದಾಯವಾಗಿಯೆ ಸುರರಾಯನೊಳರ್ಥವ
ಬೇವಿನವರು ಕಂಡು ಹೊರಸಾರುತಿಹರು ೧೩

ಸರ್ವದಾನಗಳನ್ನು ಸರ್ವಪೂಜೆಗಳನ್ನು
ಸರ್ವರು ಋಷಿ ಪಿತೃ ತರ್ಪಣಗಳನು
ಸರ್ವಥಾ ತುಳಸಿಯ ತಪ್ಪಿಸಬೇಡೆಂದು
ನಿರ್ವಾಹವಾಗಿಯೆ ಶ್ರುತಿಯು ಪೇಳಿದುದು ೧೪

ಅಂಗದೊಳಗಿಹ ಮಂಗಳ ಮಹಿಮಗೆ
ಸಾಂಗ್ಯದೊಳಿದನು ಪರಿಸಿ ಪೇಳಿದರೆ
ಗಂಗೆ ಗೋದಾವರಿ ತುಂಗಭದ್ರೆಯ ಮಿಂದು
ರಂಗನ ಕ್ಷೇತ್ರವ ನೋಡಿದ ಫಲವು ೧೫

ಅಂಗಳ ತುಳಸಿಯ ದಿನ ದಿನದಿ ತಾವೆದ್ದು
ಹಿಂಗದೆ ನೋಳ್ಪ ಶ್ರೀರಂಗನ ಭಕ್ತರಿಗೆ
ಬಂಗಾರಗಿರಿವಾಸ ವರಾಹತಿಮ್ಮಪ್ಪನ
ಮಂಗಳಮೂರ್ತಿಯ ನೋಡಿದ ಫಲವು ೧೬

# (ಇ) ಆತ್ಮನಿವೇದನೆ

## ೬೯

ಏನು ಮಾಡಲಿ ವೆಂಕಟೇಶ ಈ ಬೆಳೆಯು
ಸೋನೆಯಿಲ್ಲದೆ ಉರಿದುದು ಪ

ನಾನಾ ಪ್ರಕಾರದೊಳು ಹಾನಿಯಾಯಿತು ಇರವು
ಹೀನರಾದೆವು ನಾವು ಶ್ರೀನಿವಾಸನೆ ಕೇಳು ಅ.ಪ

ಮೂಡದೆಸೆಯಳು ಬಂದುದು, ಆ ಮಳೆಯು
ಬಡಗದೆಸೆಯಳು ಸುರಿದುದು
ಎಡಬಿಡದೆ ತೆಂಕ ಕಡೆಯಲಿ ಹೊಡೆದ ಮಳೆಯು ತಾ
ನಡುವೆ ಬಿಡುವುದು ಯಾತಕೆ ೧

ಕಟ್ಟುಕಡು ಮದಗ ಸಹಿತ, ಈ ಊರ ತಲೆ
ಗಟ್ಟಿನೊಳು ನಾ ಕಾಣೆನು
ಕೆಟ್ಟು ಹೋಯಿತು ಮಳೆಯು ಹೊಟ್ಟೆಯನು ಉರಿಸುತ್ತ
ದೃಷ್ಟಿಯಲಿ ನೋಡು ನೀನು ೨

ಮಳೆಯಿಲ್ಲದಿಳೆಯಾರಿತು, ನಟ್ಟಿರ್ದ
ಫಲವೆಲ್ಲ ಬೆಳೆ ಕೆಟ್ಟಿತು
ಸ್ಥಳದ ತೆರಿಗೆಯ ಬಿಟ್ಟು ಕಳುಹುವನೆ ದೊರೆ ತಾನು
ಎಳೆದೆಳೆದು ಕೊಲುವನಲ್ಲ ೩

ಕಷ್ಟ ಬಂದುದು ನಮ್ಮ ಕಡೆಗೆ, ಈ ವೃಷ್ಟಿ
ಬಿಟ್ಟು ಪೋದುದು ಇಳೆಯನು
ಸುಟ್ಟ ಊರೆಲ್ಲವನು ತಟ್ಟಿನಾರಿದ ಮೇಲೆ
ಮುಟ್ಟಿ ನೋಡುವರಿಲ್ಲವೊ ೪

ಹದಿನಾಲ್ಕು ಲೋಕವನು ನೀ ನಿನ್ನ
ಉದರದೊಳಗಳವಟ್ಟಿಹೆ
ಬೆದರುತಿದೆ ಈ ಲೋಕ ಒದರುವುದು ಜನರೆಲ್ಲ
ಉದುರದೇತಕೆ ಇಳೆಗೆ ಮಳೆಯು ೫

ಎಲ್ಲ ಬೇಡಿಯೆ ಕೊಂಬರು, ಈ ಹರಕೆ
ಯಲ್ಲಿ ಅಂತರಬಾರದು
ಹಲ್ಲು ಬಾಯಾರಿರ್ದ ಮಕ್ಕಳಿಗೆ ಎಳೆನೀರು
ಬೆಲ್ಲವಾಗಿಹ ಮಳೆಯನೆರೆಯೊ ೬

ನೀಲಮೇಘಶಾಮ ವರ್ಣ, ಕಾಣಲಾ
ಮೂಲೋಕದೊಡೆಯಾ ನಿನ್ನ
ಕಾಲಮೇಘವು ನಿನಗೆ ದೂರವಾಗುವುದುಂಟೆ
ಆಲಸ್ಯ ಮಾಡಬೇಡ ೭

ಬಡವರೆಲ್ಲರು ಕೂಡಿಯೇ, ಒಪ್ಪು ಕೈ
ವಿಡಿದು ಬೇಡಿಯೇ ಕೊಂಡೆವು
ಸಿಡಿಲು ಮಳೆ ಮಿಂಚುಗಳು ಹೊಡಕರಿಸಿ ಬರುವಂತೆ
ಒಡೆಯ ದಯದೋರೊ ನೀನು ೮

ಸ್ವಾಮಿ ನಿನ್ನಯ ನಾಮವು, ಜನರಿಂಗೆ
ಕಾಮಿತಾರ್ಥವನೀವುದು
ಪ್ರೇಮವಾಗಿಹ ಮಳೆಯ ಭೂಮಿಯಲಿ ಇಳಿಬಿಟ್ಟು
ನಾಮವಾಗೆವು ಸ್ವಾಮಿ ವರಾಹತಿಮ್ಮಪ್ಪ ೯

## ೭೦

ಏನು ಸುಕೃತದ ಫಲವೋ ಶ್ರೀನಿವಾಸನೆ ಹೇಳು
ಹಾನಿಯಾಗಿಯೆ ಅವಮಾನ ತೋರುತಿದೆ ಪ

ವಾಸುದೇವನೆ ಎನ್ನ ಈಸು ದಿನ ಪರಿಯಂತ
ಬೇಸರಿಲ್ಲದೆ ಕಾಯ್ದೆ ಲೇಸ ಕರುಣಿಸಿದೆ
ಈಸಾಡಿದೆನು ನಾನು ಈ ಗೃಹದೊಳೀಗೇನು–
ದಾಸಿನವು ನಿನಗಾಯಿತು ಮೋಸ ಯೋಚಿಪರೆ ೧

ಹಗಲುಗತ್ತಲೆಯಾಗಿ ಮೊಗವು ಕಾಣದೆ ಎನಗೆ
ಜಗದುದರ ನಿನ್ನಾಣೆ ನಗೆಯಾಯ್ತು ಜಗಕೆ
ಹಗಯ ಮಧ್ಯದಿ ಸಿಲುಕಿ ಮೃಗವು ಬಾಯ್ಬಿಟ್ಟಂತೆ
ಮಿಗ ಕ್ಲೇಶಬಟ್ಟು ನರಮೃಗವು ತಾನಾದೆ ೨

ಆರು ಹಿತವರು ಇಲ್ಲ ಧಾರುಣಿಯ ಬಲವಿಲ್ಲ
ಪಾರಾಗಿ ನಾಚಿಕೆಯು ಬೇರೂರಿತು
ಘೋರ ಅಡವಿಯೊಳಗೆ ಗಾರುಗತ್ತಲೆ ಸುತ್ತಿ
ಮಾರಿದೆಯ ಚೋರರಿಗೆ ದಾರಿಗಾಣಿಸದೆ ೩

ದೊರೆಯು ಮನ್ನಿಸಿ ಕೊಡಲು ನೆರೆಹೊರೆಯ ಕರೆಕರೆಯು
ಹರದಿಯೊಳು ನಂಬಿಗೆಯು ಕಿರಿದಾಯಿತು
ನೆರವಾಗಿ ತೋರುತಿದೆ ಬರಿಯ ವೃಕ್ಷದ ತೆರದಿ
ಮರುಳು ಕಣ್ಣಿಗೆ ಇರುವೆ ಕರಿಯ ತೆರನಂತೆ ೪

ಇನ್ನು ಬಂಧಿಸಬೇಡ ಎನ್ನಿಂದ ಅಳವಲ್ಲ
ಬನ್ನಬಡುವುದು ಎಲ್ಲ ನಿನ್ನ ಮನಕರುಹು
ಮುನ್ನ ಮಾಡಿದ ಕರ್ಮ ಬೆನ್ನು ಬಿಡುವಂದದಲಿ
ಪನ್ನಗಾದ್ರಿನಿವಾಸ ಪಾಲಿಸೈ ಲೇಸ ೫

ದಾಸ ಬಳಲಿದನೆಂಬ ಹೇಸಿಕೆಯ ಮಾತುಗಳ
ಕಾಸಕೊಟ್ಟೇಕೆ ನಿರಾಸೆ ಮಾಡುವಿಯೊ
ಬೇಸರಾಗದೆ ಪಂಥವಾಸಿಯಿಲ್ಲವೆ ನಿನಗೆ
ಸಾಸಿರಾಕ್ಷನೆ ಎನಗೆ ಲೇಸಿತ್ತು ಸಲಹೊ ೬

ಪಡೆದ ತಂದೆಯು ನೀನೆ ಕೊಡುವ ಒಡೆಯನು ನೀನೆ
ಕಡೆಗೆ ಕೈವಿಡಿದು ಎನ್ನ ರಕ್ಷಿಪನು ನೀನೆ

ಮಡದಿ ಮಕ್ಕಳನೆಲ್ಲ ಬಿಡದೆ ಸಲಹುವ ನೀನೆ
ಪೊಡವಿಗಧಿಪತಿಯಾದ ವರಾಹತಿಮ್ಮಪ್ಪ ೭

## ೭೧

ದೇಹಿಯೆಂಬವನೊಡನೆ ನಾಸ್ತಿಯೆನಬೇಡ
ಕಾಯೊ ವೆಂಕಟಪತಿಯೆ ಕಾರುಣ್ಯವಾರಿಧಿಯೆ ಪ

ಮಾಡಿದಪರಾಧಗಳ ನೋಡಿ ಕ್ಷಮಿಸಿಯೆ ಯೆನಗೆ
ರೂಢಿಯೊಳು ಬೆಳೆಸಿರಿಯ ಕೈಗೂಡಿಸಿ
ಆಡಿ ತಪ್ಪಿದ ನುಡಿಯ ಕೂಡಿ ನಡೆಸುತ ಮುಂದೆ
ಬೇಡಿದಿಷ್ಟವನಿತ್ತು ಮಾತಾಡಬೇಕೆನುತ ೧

ನರನಾದ ಕುರಿಯಿದನು ಸಲಹಬೇಕೆಂದೆನುತ
ಮೊರೆಯಿಟ್ಟು ನಿನ್ನಡಿಗೆ ಶರಣಾದೆನು
ಕರುಣವಾರಿಧಿ ನಿನ್ನ ಚರಣದಾಭರಣನಿಗೆ
ಹರಣವನು ಮರೆವಾಗೆ ಸ್ಮರಣೆ ನೀಡೆನುತ ೨

ಗುಣವಾದ ಪತ್ರಿಕೆಯ ಕ್ಷಣದೊಳಗೆ ಹರಿದೆನ್ನ
ಕಣುಮನಕೆ ದೃಢವಾದ ಗುಣವ ತೋರೆನುತ
ಫಣಿಶಯನ ನಿನ್ನಡಿಗೆ ಮಣಿದು ಬೇಡುವೆ ನಾನು
ಉಣಲಾಗದೋಗರವ ಉಣಿಸಬೇಡೆನುತ ೩

ಕೆಟ್ಟ ಕೆಲಸವನಿದಿರು ದೃಷ್ಟಿಗಿಕ್ಕದೆಯೆನ್ನ
ಬಿಟ್ಟು ಕಳೆಯಲು ಬೇಡ ಸೃಷ್ಟಿಪಾಲಕನೆ
ಇಟ್ಟಡಿಯ ಕಮಲವನು ಮುಟ್ಟಿ ಭಜಿಸುವೆ ನಾನು
ಹುಟ್ಟಿದೀ ಬವರದೊಳು ಕಷ್ಟ ಬೇಡೆನುತ ೪

ಶುದ್ಧ ಸ್ನಾನವ ತೊರೆದು ಇದ್ದ ಜಪಗಳ ಮರೆದು
ಭದ್ರವಾಗಿಹ ಕರ್ಮ ಒದ್ದು ಕಳೆದು

ಉದ್ದಂಡವಾಗಿ ನಡೆದಿರ್ದ ಪಾಪಂಗಳನು
ತಿದ್ದಿಟ್ಟು ಎನ್ನನುರೆ ಉದ್ಧರಿಸಬೇಕಯ್ಯ ೫

ಪೊಡೆವಿಯೊಳಗೆನ್ನಂಥ ಕಡುಮೂರ್ಖರನು ಕಾಣೆ
ಮಡದಿಯೆಂಬಡವಿಯೊಳು ಕೈದುಡುಕಿದು
ಪಡೆದ ಮಕ್ಕಳ ಮುಂದೆ ಕಡೆ ಹಾಯುವವರಿಲ್ಲ
ಒಡೆಯನಾಗಿಯೆ ಯೆನ್ನ ಬಿಡದೆ ಸಲಹೆನುತ ೬

ನಾರಿ ಮಕ್ಕಳಿಗೆಲ್ಲ ಮೀರಿದಾಪತ್ತಿನಲಿ
ತೋರಿಸುವೆ ನಿನ್ನ ಚರಣಂಗಳೆನುತ
ಹಾರೈಸಿದ್ದರಕೆಯಿದು ಭಾರವಾಗಿಯೆ ಶಿರದಿ
ಏರಿದುದನಿಳುಹುವರೆ ದಾರಿ ತೋರೆನುತ ೭

ತ್ರಾಹಿ ವೆಂಕಟರಾಯ ಕಾಯೊ ನಿನ್ನಯ ಮಾಯೆ
ಮೋಹಿಸುತ ಜಗವೆಲ್ಲ ಬಾಯ ಬಿಡುತಿಹುದು
ದೇಹಿಯೆನುತಿಹ ಜನಸಹಾಯನಲ್ಲವೆ ನೀನು
ಮಾಯವಾಗದೆ ಮುಂದೆ ಆಯತನ ತೋರೆನುತ ೮

ಸುರವಂದ್ಯ ಮುರಮಥನ ಗುರುದೈವ ಪರಮಾತ್ಮ
ವರಲಕ್ಷ್ಮಿಕರವೆನಿಪ ಹರಿವೆಂಕಟೇಶ
ಮರೆವಾಗದಿರು ಯೆನ್ನ ಕರೆದು ನೆರೆ ಸೌಖ್ಯವನು
ಸ್ಥಿರವಾಗು ಎನ್ನೊಡನೆ ವರಾಹತಿಮ್ಮಪ್ಪ ೯

## ೭೨

ನಂಬಿದೆನೆಂಬವರ ಮನದೊಳಗೆ
ಹಂಬಲ ಮರೆವುದುಂಟೆ ಪ

ಬೆಂಬಲವಾಗಿಯೆ ಇಂಬುದೋರದ ನೀನು
ಡೊಂಬಿಗಾರರ ಮುಂದೆ ಕಂಬದಂದದಿ ನಿಂದೆ ಅ.ಪ

ತೃಣವಾದ ಕಾಯಗಳು ಮನದೊಳಗೆ
ಘನವಾಗಿ ತೋರುತಿದೆ
ಗುಣವಿಲ್ಲ ಬದುಕಿನೊಳು ಅಣಿತಪ್ಪಿ ಹೋಯಿತು
ಪ್ರಣವರೂಪನೆ ಕೇಳು ಕ್ಷಣ ಜೀವ ನಿಲ್ಲದು ೧

ಆಯ ತಪ್ಪಿದ ಮಾತನು ಆಡುತ ಎನ್ನ
ಬಾಯನು ಹೊಯ್ವವರ
ಸಾಯ ಬಡಿದು ಮುಂದೆ ನ್ಯಾಯ ತೋರದ ಹಾಗೆ
ಕಾಯಬೇಕೆನ್ನ ಉಪಾಯದಿಂದಲೆ ಜೀಯ ೨

ಊರು ಎರವು ಮಾಡಿದ ಕಾಲದೊಳಗೆ
ಸೂರೆಗೊಂಡವರನೆಲ್ಲ
ವಾರಿಜಾಕ್ಷನೆ ನೀ ವಿಚಾರವ ಮಾಡದೆ
ದೂರುಗಳೆಲ್ಲವ ಪಾರು ಮಾಡಿದೆ ನಿನ್ನ ೩

ಹಸ್ತ ಬಲಿದ ಕಾಲದಿ ಮಸ್ತಕದೊಳು
ಹಸ್ತಿಯಂದದಿ ಹೊತ್ತೆನು
ಸ್ವಸ್ಥವಿಲ್ಲದ ನರನಸ್ಥಿ ಚರ್ಮದ ಮೇಲೆ
ಕಷ್ಟಾಗಿ ಕರುಣವ ನಾಸ್ತಿ ಮಾಳ್ಪೆಯ ಎನ್ನ ೪

ಎನ್ನ ಸರ್ವಸ್ವವನು ತಿಂದವರೀಗ
ಇನ್ನೇನು ಸುಕೃತಿಗಳೊ
ನಿನ್ನ ಮನಸಿಗದು ಚನ್ನವಾದರೆ ಮೇಲೆ
ಇನ್ನಾರು ಕೇಳ್ವರು ವರಾಹತಿಮ್ಮಪ್ಪ ನಿನ್ನ ೫

## ೭೩

ನಿನ್ನ ನಂಬಿದೆ ನಾನು ಎನ್ನ ನೀ ಸಲಹೋ
ಪನ್ನಗಾಶಯನ ಹರಿ ವೆಂಕಟರಮಣ ಪ

ವರ ಧ್ರುವನ ಪೊರೆದಂತೆ ಪ್ರಹ್ಲಾದಗೊಲಿದಂತೆ
ಕರಿಯ ಸಲಹಿದಂತೆ ಕರುಣವಿರಲಂತೆ ೧

ತರಳೆ ದ್ರೌಪದಿಯ ಅಭಿಮಾನ ಕಾಯ್ದಂತೆ
ಧುರದೊಳು ನರನ ಶಿರವ ಉಳುಹಿದಂತೆ ೨

ಶೇಷಾದ್ರಿವಾಸ ಜಗದೀಶ ಲಕ್ಷ್ಮೀಶ
ಕ್ಲೇಶಪಾಶ ವಿನಾಶ ಜನಪೋಷ ವೇಂಕಟೇಶ ೩

ಪರಮ ಮಂಗಳಮೂರ್ತಿ ಪಾವನ ಕೀರ್ತಿ
ಧರೆಯ ರಕ್ಷಿಪ ಅರ್ತಿ ದಯವಾಗು ಪೂರ್ತಿ ೪

ಮಕರ ಕುಂಡಲಧರ ಮಕುಟ ಕೇಯೂರ
ಸಕಲಾಭರಣ ಹಾರ ಸ್ವಾಮಿ ಉದಾರ ೫

ತಾಳಲಾರೆನು ನಾನು ಬಹಳ ದಾರಿದ್ರ್ಯ
ಕೇಳುವರಿಲ್ಲ ಬಹು ಭವಭಯ ಕ್ಷುದ್ರ ೬

ನೋಡಬೇಡೆನ್ನವಗುಣವ ದಮ್ಮಯ್ಯ
ಬೇಡಿದಿಷ್ಟವನಿತ್ತು ಒಡಗೂಡಿ ಸಲಹಯ್ಯ ೭

ಭಕ್ತಜನ ಸಂಸಾರಿ ಬಹುದುರಿತ ಹಾರಿ
ಮುಕ್ತಿದಾಯಕ ದಾರಿ ಮುಂದೆ ನೀ ತೋರಿ ೮

ವರಾಹತಿಮ್ಮಪ್ಪ ಒಲವಾಗೆನ್ನಪ್ಪ
ಸಾರಿದವರ ತಪ್ಪ ಸಲಹೊ ನೀನಪ್ಪ ೯

## ೭೪

ನೊಂದೆನಯ್ಯ ಭವದೊಳು
ಸಿಂಧುಶಯನ ವೆಂಕಟೇಶ ಪ

ಒಂದು ದಿನಸುಖವಿಲ್ಲ ಗೋ–
ವಿಂದ ಬಹಳ ಕರುಣದಿಂದ ನಿ–
ರ್ಬಂಧವನ್ನು ಕಳೆದು ಎನ್ನ
ತಂದೆ ನೀನೇ ರಕ್ಷಿಸಯ್ಯ ೧

ಕಪಟ ನಾಟಕ ಸೂತ್ರಧಾರಿ
ಅಪರಿಮಿತ ಮಹಿಮ ಎನ್ನ
ಅಪರಾಧವನು ಕ್ಷಮಿಸಿ ಮುಂದೆ
ಕಪಟವಿಲ್ಲದೆ ರಕ್ಷಿಸಯ್ಯ ೨

ಕಂದ ಪ್ರಹ್ಲಾದನಂತೆ
ತಂದೆ ಮುನಿದಾಡುವ ತೆರದಿ ಗ–
ಜೇಂದ್ರನಂತೆ ದೃಢವಿಲ್ಲ
ಮಂದಮತಿಯ ರಕ್ಷಿಸಯ್ಯ ೩

ನರ ಜನ್ಮದೊಳಗೆ ಪುಟ್ಟಿ
ನರಕ ಭಾಜನ ತಾನಾಗಿ
ದುರಿತ ಪಂಜರದೊಳಗೆ ನಾನು
ಸೆರೆಯ ಬಿದ್ದೆ ರಕ್ಷಿಸಯ್ಯ ೪

ಹಗಲು ದೃಷ್ಟಿ ಕಾಣದವಗೆ
ಮೊಗವುಗೊಂಡು ರಾತ್ರಿಯೊಳು
ಹಗೆಯ ವನದಿ ಸಿಕ್ಕಿದವನ
ಅಗಲಿ ಹೋಗದೆ ರಕ್ಷಿಸಯ್ಯ ೫

ಸಾವಿರ ಅಪರಾಧವನು
ಜೀವಿತಾತ್ಮನೆ ಕ್ಷಮಿಸಿ ಎನ್ನ
ಮೂವಿಧಿಯೊಳು ಸಿಲುಕದಂತೆ
ಭಾವಿಸಿಯೆ ರಕ್ಷಿಸಯ್ಯ ೬

ವರಾಹತಿಮ್ಮಪ್ಪ ಮನದ
ಘೋರ ದುಃಖವನ್ನು ಕಳೆದು
ಮೀರಿ ಬಂದಾಪತ್ತಿನೊಳು
ಕಾರಣಿಕನೆ ರಕ್ಷಿಸಯ್ಯ ೭

## ೭೫

ಪಂಥ ಬೇಡವೊ ಲಕ್ಷ್ಮಿಕಾಂತ ಎನ್ನಯ ಮನದ
ಚಿಂತಿತಾರ್ಥವನೀಯೊ ಸಂತತಂ ಕಾಯೊ ಪ

ಚರಣ ಕಮಲವ ಕಂಡು ಶರಣು ಹೊಕ್ಕೆನು ನಾನು
ಕರುಣದಿಂದನುದಿನವು ಕಾಯಬೇಕೆನುತ
ಸ್ಮರಣೆಪೂರ್ವಕವಾಗಿ ಹರಣವನೆ ಹರಸಿಹೆನು
ಹರಿಣನೊಳು ಬಿಲುಗಾರ ಕರುಣ ಬಿಟ್ಟಂತೆ ೧

ನರಜನ್ಮವೆಂಬುದಿದು ಕರಕಷ್ಟವಾಗಿರುವ
ಉರಿಯ ಮನೆಯನು ಹೊಗುವ ತೆರನಲ್ಲವೆ
ಪರಿಪರಿಯ ದುಃಖಗಳು ಬರುವ ಸಮಯಾಂತರದಿ
ಮರೆಯಾಗದಿರು ಎನ್ನಸ್ಥಿರದಿ ಮೈದೋರು ೨

ತಪ್ಪುಗಳು ಹೊರತಾಗಿ ಅಪ್ಪ ಸೇರುವುದುಂಟೆ
ಒಪ್ಪುಗೊಂಬವರಾರು ಸರ್ಪಶಯನ
ಬೊಪ್ಪ ಬಹ ದುರಿತಗಳ ತಪ್ಪಿಸಿಯೆ ಕಳೆದೆನ್ನ
ಮುಪ್ಪುಗಳ ಪರಿಹರಿಸೊ ಅಪ್ಪಗಿರಿವಾಸ ೩

ಉರಗ ಗಿರಿವಾಸ ನಿನ್ನೆರಗವಿಡಿವೆನು ನಾನು
ಕರಗಿ ಹೋಯಿತು ಇರವು ಕಾವರಿಲ್ಲ
ಮರುಗಿದರೆ ಧೈರ್ಯವನು ತಿರುಗಿ ಹೇಳುವರಿಲ್ಲ
ಕುರಿ(ಗಾ)ಯ್ವ ತೆರನಂತೆ ಕೈಗೆ ಸಿಲುಕಿದೆನು ೪

ಇಹಪರದ ಸೌಖ್ಯಗಳ ಕರೆದಿತ್ತು ಕರವಿಡಿದು
ಸಹವಾಸವಾಗಿರ್ದು ಸಲಹಿಕೊಂಡು
ವಹಿಲದಲಿ ವರವೀವ ವರಾಹತಿಮ್ಮಪ್ಪ
ಬಹುಭಾರವನು ತಾಳ್ದು ಸಲಹೆನಿಸೊ ನೀನು ೫

## ೭೬

ಬರಲಿಲ್ಲವೆನುತ ನೀ ಹೊರಗಿಕ್ಕಬೇಡ
ಉರಗಾದ್ರಿವಾಸ ಶ್ರೀ ವೆಂಕಟೇಶ ಪ

ಕಾಸಿಲ್ಲ ಕೈಯೊಳಗೆ ಲೇಸಿಲ್ಲ ಮನೆಯೊಳಗೆ
ವಾಸಿತಪ್ಪಿಯೆ ಬಹಳ ಬೇಸತ್ತೆನು
ಈಸು ಪ್ರಯಾಸ ನಿನ್ನ ದಾಸಗೊದಗಿದ ಮೇಲೆ
ದೋಷವೆನ್ನಲ್ಲಿಲ್ಲ ಶೇಷಾದ್ರಿವಾಸ ೧

ಗೆಲುವಿಲ್ಲ ಮನದೊಳಗೆ ಬಲವಿಲ್ಲ ಕಾಯದೊಳು
ಹೊಲಬುದಪ್ಪಿಯೆ ಬಹಳ ಸುಲಿವಾದುದು
ಫಲವೇನು ಇದರೊಳಗೆ ಕೆಲಸವೇನಿಹುದಿಲ್ಲಿ
ಸುಲಭದೊಳು ಬೇರೊಂದು ಪರಿಯ ನೋಡಯ್ಯ ೨

ಕತ್ತಲೆಯ ರಾಜ್ಯವನು ಆದಿತ್ಯನಾಳುವ ತೆರದಿ
ಒತ್ತಿಬಹ ಮೃತ್ಯು ದಾರಿದ್ರ್ಯ ಕತ್ತಲೆಯ
ಸುತ್ತಗಳನೆಲ್ಲವನು ಕಿತ್ತು ಹಾರಿಸಿಯೆನ್ನ
ಹತ್ತಿರದಿ ಮೈದೋರು ಭಕ್ತವತ್ಸಲನೆ ೩

ಹಿರಿಯೊಳು ಆರ್ಜಿಸಿದ ಗೃಹಕೃತ್ಯವೆಂಬುದಿದು
ಕೊರಳಡಿಗೆ ಸಿಲುಕಿರ್ದ ಸೆರೆಯಾಯಿತೊ
ಹರುಷವಿಲ್ಲಿದರೊಳಗೆ ಬರುವ ಗತಿಯನು ಕಾಣೆ
ದರುಶನಕೆ ಬಗೆದೋರು ದೊರೆ ವೆಂಕಟೇಶ ೪

ಮಾತು ತಪ್ಪಿತು ಎಂದು ಭೀತಿಗಿಕ್ಕಲುಬೇಡ
ಸೋತುದೈ ಕೈಯೆನಗತೀತ ಮಹಿಮ
ಕಾತುರವು ಮನದೊಳಗೆ ಕಾಣಬೇಕೆಂದೆಂಬ
ಪ್ರೀತಿಯಾಗಿದೆ ಜಗನ್ನಾಥ ನಿನ್ನೆಡೆಗೆ ೫

ಒಂದು ಪರಿಯನು ನೀನು ತಂದು ತೋರಿದರೀಗ
ಇಂದೆ ನಾನೇಳುವೆನು ಮಂದಿವಾಳದಲಿ
ಚಂದದಲಿ ಮಡದಿ ಮಕ್ಕಳ ಸಹ ಕರಕೊಂಡು
ಬಂದು ನೋಳ್ಪೆವು ನಿನ್ನ ಆನಂದ ಮೂರುತಿಯ ೬

ಅಣಿಮಾಡಿ ನೀನೆನಗೆ ಮನದಣಿವ ತೆರನಂತೆ
ಕ್ಷಣವಾದ ಕೆಲಸಗಳು ನಿನಗೆ ಘನವಲ್ಲ
ವನಜಾಕ್ಷ ವರಾಹತಿಮ್ಮಪ್ಪ ನಿನ್ನಡಿಯ
ತನಿರಸವನೆನಗೀಯೊ ಜನ ಮೆಚ್ಚುವಂತೆ ೭

## ೭೭

ಯಾರಿಗೆ ದೂರುವೆನು ಗಿರಿಯ ರಾಯ
ಯಾರೆನ್ನ ಸಲಹುವರು ಪ

ಸಾರಿದ ಭಕ್ತ ಸಂಸಾರಿ ನಿನ್ನಯ ಪಾದ
ವಾರಿಜವನು ತೋರಿ ಕಾರುಣ್ಯವೆನಗೀಯೊ ಅ.ಪ

ಕಷ್ಟ ಜನ್ಮದಿ ಬಂದೆನು ಧಾರುಣಿಯೊಳು
ದುಷ್ಟರಿಂದಲೆ ನೊಂದೆನು
ನಿಷ್ಠುರ ಬೇಡವೊ ನಿನ್ನ ನಂಬಿದ ಮೇಲೆ
ಸೃಷ್ಟಿಪಾಲಕ ಎನ್ನ ಬಿಟ್ಟು ಕಳೆಯಬೇಡ ೧

ಹಿಂದೆ ಮಾಡಿದ ಕರ್ಮವು ಈ ಭವದೊಳು
ಮುಂದಾಗಿ ತೋರುತಿದೆ
ಇಂದಿಲ್ಲ ಗತಿಯದರಿಂದ ನೊಂದೆನು ನಾನು
ಮಂದರಧರ ಗೋವಿಂದ ನೀನಲ್ಲದೆ ೨

ಹಗಲುಗತ್ತಲೆ ಸುತ್ತಿಯೆ ಕಂಗೆಡಿಸುತ್ತ
ಹಗೆಯೊಳು ನಗಿಸುತಿದೆ

ಉಗುರಿನಸಿಗಿಗೆ ಮಚ್ಚುಗಳೀಗ ನಾಟ್ಯವು
ಸೊಗಸು ಹಾರಿಸಿ ಎದೆ ದಿಗಿಲುಗೊಳಿಸುತಿದೆ ೩

ಬಾಡಿದ ಅರಳಿಯನು ಕಲ್ಲೀನ ಮೇಲೆ
ಈಡಾಗಿ ನಟ್ಟಿದರೆ
ಬೇಡಿಕೊಂಡರೆ ತಳಿರ್ಮೂಡಿ ಬರುವುದುಂಟೆ
ರೂಢಿಗೊಡೆಯ ನೀನು ನೋಡದಿದ್ದರೆ ಮೇಲೆ ೪

ಹಲವು ಪರಿಯ ಕಷ್ಟವ ನಿನ್ನಯ ಪದ
ಜಲಜದ ಕರುಣದಲಿ
ಸುಲಿಗೆಗೊಟ್ಟೆನು ನಾನು ಸೂರೆಗಾರರಿಗೆಲ್ಲ
ಒಲವಾಗೆನ್ನೊಳು (ವರಾಹತಿಮ್ಮಪ್ಪ)[೧] ೫

## ೭೮

ರಾಗ : ಸಾರಂಗ ಅಷ್ಟತಾಳ

ಸಲಹಿಕೊಂಬವರಿಲ್ಲವೋ ವೆಂಕಟರಾಯ
ಗೆಲುವ ಪರಿಯ ಕಾಣೆನು ಪ

ಛಲವೇಕೋ ನಿನಗಿಷ್ಟು ಹೊಲಬುದಪ್ಪಿದ ಮೇಲೆ
ಫಲವಿತ್ತು ಕರುಣದಿ ಕುಲವೃಕ್ಷವನು ಕಾಯೋ ಅ.ಪ

ಅರಳಿಯ ವೃಕ್ಷದೊಳು ಆನೆಯ ತಂದು
ಸ್ಥಿರವಾಗಿ ಕಟ್ಟಿದಂತೆ
ದುರುಳರು ಬಂದೆನ್ನ ಕೊರಳು ಕೊಯ್ದೀಗ
ಬರಿದೆ ನುಂಗುವ ಪರಿ ಇರವ ಕಾಣುತ ಮುಂದೆ ೧

ಮಾಡಿದ ಉಪಕಾರವ ಮರೆತು ಮುಂದೆ
ಕೇಡನು ನೆನೆವರಿಗೆ

---

೧. ಪುರಂದರವಿಠ್ಠಲ

ನೋಡಿದೆ ಯಾತಕೆ ಮಾಡದೆ ಶಿಕ್ಷೆಯ
ಆಡಿದೆ ನಿನ್ನೊಳು ಬೇಡ ಇನ್ನವರೊಳು ೨

ವಾರಿಧಿ ತೀರದಲಿ ನೆಲ್ಲನು ತಂದು
ಹಾರಿಸಿ ಬಿತ್ತಿದಂತೆ
ನೀರು ನಿಲ್ಲದ ಭವ ಘೋರ ಕಾನನದೊಳು
ಸೂರೆವೋದೆನು ನಿನ್ನ ಮಾರಿಹೋದೆನು ಎನ್ನ ೩

ಒದಗಿದ ನ್ಯಾಯದಲಿ ಇದಿರು ಬಂದು
ಕದನವ ಕಟ್ಟುತಲೆ
ಬೆದರುಗೊಳಿಸಿ ಎನ್ನ ಸದನಕ್ಕೆ ಮುನಿವುದ
ಅದನೆಲ್ಲ ಚರಣದ ಪದುಮಕ್ಕೆ ಅರುಹುವೆ ೪

ನೊಂದೆನು ಬಹಳವಾಗಿ ಈ ಭವದ
ಸಿಂಧುವ ದಾಟಿ ಹೋಗಿ
ಚಂದದಿ ನಿನ್ನಯ ಚರಣಾರವಿಂದವ
ಎಂದಿಗೆ ತೋರ್ಪೆಯೊ ವರಾಹತಿಮ್ಮಪ್ಪ ೫

## ೩. ಲೋಕನೀತಿ

### ೭೯

ಇದ್ದರೇನು ಇಲ್ಲದಿದ್ದರೇನು
ಶುದ್ಧವಾದ ಲೋಭಿಯೊಳು
ಬದ್ದವಾದ ದ್ರವ್ಯಗಳು
ಇದ್ಧರೇನು ಇಲ್ಲದಿದ್ದರೇನು ಪ

ಚಿಂತಿಸಿ ಬಹಳ ಏ–
ಕಾಂತದೊಳಗೆ ಇರಿಸಿ ಇರಿಸಿ
ಸಂತತ ಅದ ನೋಡಿ ನೋಡಿ
ಭ್ರಾಂತಿ ಬಿಡುವ ಮನುಜನೊಳು ೧

ಇಕ್ಕದೆರೆಯದೆ ಮುಂದೆ
ಮಕ್ಕಳಿಗೆ ಸಿಕ್ಕದ ಹಾಗೆ
ಬೆಕ್ಕು ಮಣ್ಣ ಕೆದರಿ ತನ್ನ
ಇಕ್ಕೆಯನ್ನು ಇರಿಸಿದಂತೆ ೨

ಧರ್ಮರಹಿತವಾದ ಧನವು
ಮರ್ಮವಿಡಿದು ಮನದೊಳಗೆ ದು–
ಷ್ಕರ್ಮವನ್ನು ಎಸಗಿ ಮನೆಯ
ನಿರ್ಮೂಲವ ಮಾಳ್ಪ ಬಗೆಯ ೩

ಜಾರೆಯಾದ ಸತಿಯ ತೆರದಿ
ಚೋರರನ್ನು ಬಯಸಿಕೊಂಡು
ಮಾರಿಯಾಗಿ ಮನೆಯೊಳಗೆ
ಸೇರಿ ಇರುವ ವೈರಿ ಧನವು ೪

ಸೂಳೆಯನ್ನು ನಂಬಿ ಸುಖದಿ
ಬಾಳುವವನಾವನವಳ
ಹೋಲಿಕೆಯೊಳಿರುವ ಧನವು
ಜಾಳಿಗೆಯ ತುಂಬಿಕೊಂಡು ೫

ಕಷ್ಟವನು ಕಟ್ಟಿಕೊಳುತ
ನಿಷ್ಠುರವ ನುಡಿದು ಗೇಣು
ಹೊಟ್ಟೆಗಾಗಿ ಪರರ ಕೈಯ
ದುಷ್ಟನೀತನೆನಿಸಿಕೊಂಡು ೬

ಕಾಣಿಕೆ ಕಪ್ಪವನಿತ್ತು
ಪ್ರಾಣನಾಥನೆಂದು ತಿಳಿದು
ಜಾಣ ವರಾಹ ತಿಮ್ಮಪ್ಪನ
ಕಾಣದಿರುವ ಮಾನವನು ೭

## ೮೦

ಕಲಿರಾಯ ಬಂದಿಹನು ಕಾಣಿಕೆಯ ಪಿಡಿದು
ಚೆಲುವಿನಿಂದನುಸರಿಸಿ ಕುಲವನುದ್ಧರಿಸಿ ಪ

ಮೂರು ಯುಗದೊಳು ತಾನು ಸೇರಿಕೊಂಡನು ವನವ
ಚೋರರಾಯರ ಸಂಗ ಬೇಡವೆನುತ
ವೀರನಾಗಿಯೆ ಬಂದ ನಾಲ್ಕನೆಯ ಯುಗದೊಳಗೆ
ಸಾರಿ ಬನ್ನಿರೊ ನಮ್ಮ ದೊರೆಯ ಮನ್ನಿಸಲು ೧

ಮದಮುಖರ ಕಾಣುತಲೆ ಮುದದಿಂದ ಮನ್ನಿಸುತ
ಕದನಕರ್ಕಶರನ್ನು ಕಾಮಿಸುವನು
ಒದಗಿದನ್ಯಾಯಗಳನೊಲಿಸಿಕೊಂಬನು ತಾನು
ಬೆದರಿಕೆಯು ಬೇಡ ನೀವಿದಿರುಗೊಳ ಬನ್ನಿ ೨

ಸತ್ಯವೆಂಬುದನೆಲ್ಲ ಹತ್ತಿಸಿದ ಬೆಟ್ಟವನು
ಮಿಥ್ಯ ನಿರ್ಮಳಕೆಲ್ಲ ಕುತ್ತಿಗೆಗೆ ಬಂತು
ಒತ್ತಿಯಾಳುವ ಧರ್ಮ ಸತ್ತು ಹೋದನು ಹಿಂದೆ
ಮೃತ್ಯು ಭಯ ನಮಗಿಲ್ಲ ಹತ್ತಿರಕೆ ಬನ್ನಿ ೩

ತಪ್ಪಿ ಹೋಯಿತು ಶಾಸ್ತ್ರ ತಪ್ಪಾಯ್ತು ಪೌರಾಣ
ಮುಪ್ಪು ಬಂದುದು ವೇದ ಕಪ್ಪಾದನಗ್ನಿ
ತುಪ್ಪನ್ನ ಬೇಡವಗೆ ಇಪ್ಪ ಭಯಗಳು ಹೋಯ್ತು
ಒಪ್ಪಿ ಕಾಣಿಸಿಕೊಂಡು ಸುಖಿಯಪ್ಪ ಬನ್ನಿ ೪

ಸ್ನಾನವೆಂಬುದು ಯೆಲ್ಲ ಮಾನಿನಿಯ ಅಡಿಗೆಯೊಳು
ಮೌನ ಜಪಗಳನೆಲ್ಲ ಕೃಷಿಕೊಂಡನು
ಹಾನಿಯಾದರು ಯಜ್ಞಹೀನರಾದರು ಪಿತೃಗ
ಳೇನ ಮಾಡುವರಿವರು ಅನುಮಾನ ಬೇಡೆನುತ ೫

ದಯಯೆನಿಪವನು ಹೋಗಿ ಕೊಯ್ಸಿಕೊಂಡನು ಕೊರಳ
ಭಯವಿಲ್ಲ ಹಿರಿಯರೂ ವ್ಯಯವ ಸೇರಿದರು
ನಯನೀತಿ ಹೇಳುತಿಹ ಗುರುವಿನೊಳು ಕಣ್ಣಿಲ್ಲ
ಜಯವಾಯ್ತು ದೇಶದೊಳು ಹೊಯ್ಸಿ ಡಂಗುರುವ ೬

ಶಿವನು ದುರ್ಗವ ಬಲಿದ ಜವನು ದಂಡವನಿಟ್ಟ
ಬವಣೆಬಡುವನು ಕಮಲಭವನು ತನ್ನೊಳಗೆ
ಹವಣನರಿಯದೆ ವಿಷ್ಣು ತವಕಿಸುವ ಮನದೊಳಗೆ
ಕವಲು ಮನ ಬೇಡಿರಲು ಬಹುದು ಇವನೊಳಗೆ ೭

ಪತಿಯ ಮರೆತಳು ಸತಿಯು ಸುತ ಮತಿಯ ತಪ್ಪಿದನು
ಯತಿ ಸತತ ಮನದೊಳಗೆ ಖತಿಗೊಂಬನು
ಚತುರವರ್ಣಾಶ್ರಮವ ಜೊತೆಯಾಗಿ ನಡೆಸುತಿಹ
ಮತಿಯುತನು ದೃಢವೆಂದು ಕಾಯವನುಸರಿಸಿ ೮

ತಾಯಿ ತಂದೆಯ ಕೊಂದು ಜೀವ ಹಾನಿಯ ಮಾಡಿ
ಬಾಯ ಹೊಯ್ದರು ಕೇಳ ಬಡವರನ್ನು

ಮಾಯವಾದಿಯ ಮಾತು ಕೂಡಿಸುವ ಜೀವವನು
ರಾಯರಾಯರ ಮುಂದೆ ನಡೆಸುತ್ತಲಿಹರು ೯

ಆಡಿಗಾರರ ತಂದು ನಾಡ ಊಳಿಗಕಿಡುವ
ನೋಡಿದನ್ಯಾಯ ಮಾತುಗಳ ಹಿಡಿತರುವನು
ಕೂಡಿಸುವ ಜೀವವನು ಎಳೆನೀರು ಸಕ್ಕರೆಯು
ಬೇಡಿದಿಷ್ಟಾರ್ಥದೊಳು ನೋಡಿ ನಡೆಸುವನು ೧೦

ಕೆಟ್ಟನೀತಿಯ ಒಳಗೆಯಿಟ್ಟುಕೊಂಡರೆ ನಿಮ್ಮ
ಗಟ್ಟಿಬಡಿಸುವ ದೊರೆಯು ದೃಷ್ಟಿಯಲಿ ನೋಡ
ಕಷ್ಟವಿಲ್ಲದೆ ಸುಖದಿ ಹೊಟ್ಟೆಯನು ಹೊರಕೊಂಡು
ಸೃಷ್ಟಿಯೊಳು ವರಪತಿಯ ಮುಟ್ಟಿ ಸೇವಿಪುದು ೧೧

ಕಾಲದರಸಿನ ನೋಡಿ ಮೂಲ ಪಡಕೊಂಬುವರು
ಆಲಸ್ಯವನು ಬಿಟ್ಟು ಸೇವಿಸುವುದು
ಶಾಲು ಸಕಲಾಭರಣ ತೋಲಾಗಿ ಬರುತಿಹುದು
ಜಾಲರೂಪವದಾಗಿ ಮನಕೆ ತೋರುವುದು ೧೨

ತಾಯಿ ತಂಗಿಯರನ್ನು ಮೋಹಿಸಲು ದೊರೆರಾಯ
ಬಾಯಹೊಯಿಯೆಂದೆನುತ ನೋಯನುಡಿ ಪೇಳ
ಆಯವಾಗಿಹ ಪುರುಷ ಸಾಯಲಾಕ್ಷಣ ಬಂದು
ಕಾಯವನು ಬಳಸುವನು ಮೋಹವನು ತೋರಿ ೧೩

ಹೀಗೆಂದು ಚರನೋರ್ವ ಕೂಗಿ ಕರೆಯಲು ಬಂದು
ಅಗಲೇ ಎದ್ದು ಇದಿರಾಗಿ ಪರಿಜನವು
ಬೇಗದೊಳಗನುಸರಿಸಿ ಭೋಗವನು ಕೈಕೊಂಡು
ರಾಗದೊಳಗಿದ್ದರಾ ಭವಜಲದ ನಡುವೆ ೧೪

ಹೇಡಿಗಳು ಬರಬೇಡಿ ಮೂಡ ಗುಡ್ಡೆಯ ಸೇರಿ
ಕಾಡಫಲವನು ಮೆದ್ದು ಕೋಡಗಲ್ಲಿನೊಳು
ಆಡುತಿಹ ವರಾಹತಿಮ್ಮಪ್ಪನ್ನತ್ತಿರದಿ
ಬೇಡಿಕೊಳ್ಳಿರೊ ಎನುತ ನೋಡಿ ನಗುತಿಹರು ೧೫

## ೮೧

ಗುರುವಿನ ಚರಣವ ನೆನೆವುತಲನುದಿನ
ಪರದೊಳು ದೈವದ ನೆಲೆ ನೋಡು ಪ

ಗುರುವಿನ ಕರುಣಕಟಾಕ್ಷವದಲ್ಲದೆ
ನರರಿಗೆ ದೊರಕದು ಪರಸುಖವು
ಹಿರಿಯರ ಅಭಿಮತವಿಲ್ಲದ ಗೃಹದೊಳು
ಕರೆಕರೆಯಾಗಿದೆ ಕೌತುಕವು ೧

ಸ್ಥಿರವಾಗಿ ನಿಲ್ಲದ ಮನವು ಭ್ರಮೆಯೊಳು
ನೆರೆವುದು ತನ್ನೊಳು ಘಾತಕವು
ಸೆರೆವಿಡಿಯಲು ಹರಿವಿಡಿದಿಹನಾತನ
ತೊರೆವುದು ಭವಭಯ ಸೂತಕವು ೨

ಯೋಗಿಯ ಹೃದಯದಿ ಸಕಲಾಗಮ ಸಮ
ನಾಗಿಯೆ ತೋರ್ಪುದು ಧೃಢವಾಗಿ
ಸಾಗರ ಸುತ್ತಿದ ಭೂಭಾಗದ ಸರಿ
ಯೋಗಿಯ ದೃಷ್ಟಿಯೆ ಘನವಾಗಿ ೩

ಬಾಗಿದ ಕಬ್ಬಿನ ಕೋಲೊಳು ರುಚಿಕರ
ವಾಗಿಯೆ ತೋರುವ ಪರಿಯಾಗಿ
ರಾಗಿಯ ಶಿಲೆ ತಾ ಬಳಲಿದೆನೆನುತಲೆ
ಭಾಗೆಯ ಕೊಂಬುದೆ ಸಮವಾಗಿ ೪

ನಂಬದಿರಂಬರ ವಾದಿಯ ಅಂಶಕ
ತುಂಬಿದ ಕುಂಭ ದೃಢದಿಂದ
ಅಂಬರದೊಳಗಣ ಮೇಘಕೆ ವಾಯುವು
ಬೆಂಬಲವಾಗಿಹ ದಯದಿಂದ ೫

ಸಂಭ್ರಮದಿಂದಲಿ ಗರ್ಜಿಸಿ ನಾಲ್ದೆಸೆ
ಅಂಬಿಸಿ ಪೋಗುವ ಪರಿಯಿಂದ
ಅಂಬುಜಭವ ಬರೆದಕ್ಷರ ಮಾಸಲು
ಅಂಬರ ಬಯಲಹ ತೆರದಿಂದ ೬

ಶುದ್ಧವಶುದ್ಧವು ಆಗಿಹ ಪೃಥಿವಿಯ
ಬದ್ಧವಾಗಿಯೆ ತೊಳೆದವರಾರು
ಅಬ್ಧಿಯ ಮಧ್ಯದಿ ಎದ್ದ ವಾರಿಗಳನು
ತಿದ್ದಿಯೆ ಪಸರಿಸುವವರಾರು ೭

ಇದ್ದರೆ ಸರ್ವರ ಭವನದೊಳಗ್ನಿಯ
ಮೆದ್ದವ ಶುದ್ಧವೆಂಬವರಾರು
ಹೊದ್ದಿದ ಮೂರುತಿ ನಾಲ್ದೆಸೆಯೊಳಗಿರೆ
ಬದ್ಧವಾಗಿಯೆ ಕಟ್ಟಿಕೊಳಲ್ಯಾರು ೮

ಬಯಲೊಳಗಿರುತಿಹ ಬಹು ಝೇಂಕಾರವ
ನಯದೊಳು ನೋಡಿದರೇನುಂಟು
ಬಯಲೊಳು ಮೂರಕ್ಷರವನೆ ಬಿತ್ತಲು
ಮೈಲಿಗೆ ತಳಿಸುವ ಬೆಳೆಯುಂಟು ೯

ಪಯಣದ ಮನೆ ಸಿರಿ ಸೊಬಗನು ಜಯಿಸುವ
ಹಯವನು ಏರುವ ಬಗೆಯುಂಟು
ದಯದೊಳು ಶ್ರೀ ಗುರು ವಿರಚಿಸಿಯಿತ್ತರೆ
ಕ್ರಮವಿಕ್ರಯದೊಳು ಫಲವುಂಟು ೧೦

ಬೇಡನು ಸಲಹಿದ ಆಡು ತಾ ಯಾಗಕೆ
ಬೇಡವೆಂಬವರಾರು ಶಾಸ್ತ್ರದಲಿ
ಕಾಡಿನೊಳಿರುತಿಹ ಮೃಗವಾಲದ ಸಿರಿ
ನೋಡು ನೀ ನಿತ್ಯದಿರಾಸ್ತ್ರದಲಿ ೧೧

ಕೋಡಗನಾದರು ನೋಡಿಯೆ ಭಜಿಸಲು
ಕೂಡುಗು ಹರಿಯ ಪರತ್ರದಲಿ

ಕೂಡಿಕೊಂಡರೆ ಪರಬೊಮ್ಮನ ಮನದಲಿ
ಆಡದು ಮಾಯದ ಸೂತ್ರದಲಿ ೧೨

ಕಸ್ತೂರೀ ಮೃಗ ಗೋರೋಚನ ಸಹ
ಉತ್ತಮವಾಗಿಹ ಮುತ್ತುಗಳು
ನಿತ್ಯದಿ ಕ್ರಯಗಟ್ಟಿ ಉಣ್ಣದೆ ಹುಲ್ಲನು
ಕಿತ್ತು ಮೆದ್ದಾಡುವ ಅವಸ್ಥೆಗಳು ೧೩

ಮೃತ್ಯುವ ಕಾಣದೆ ಬೊಮ್ಮವನಡಗಿಸಿ
ಎತ್ತಲಾದರು ಪೋದ ವಸ್ತುಗಳು
ಭಕ್ತರಿಗಲ್ಲದೆ ಮನವಪರೋಕ್ಷದ
ವಸ್ತುವ ಕಾಣದು ನಿತ್ಯದೊಳು ೧೪

ಜ್ಯೋತಿರ್ಮಯವಾಗಿಹ ವಸ್ತುವಿನೊಳು
ಸೂತಕ ಹೊದ್ದುವುದೇನುಂಟು
ಜಾತಿವಿಜಾತಿಯೊಳೊಲಿದಿಹ ಶಿವನವ
ದೂತರ ನಂ[ಬ]ದರಾರುಂಟು ೧೫

ಓತು ಆಶುದ್ಧವನುಂಡರು ಕವಿಲೆಯೊ
ಳ್ಮಾತಿನ ವಾಸಿಯದೇನುಂಟು
ನೀತಿ ವಿಹೀನರೊಳುದಿಸಿದ ಲವಣದ
ಧಾತು ಕೂಡದೆ ಸವಿಯೇನುಂಟು ೧೬

ಧಾರುಣಿ ಭಾರವ ಮಿತಿಗಟ್ಟಿ ತಕ್ಕಡಿ
ಗೇರಿಸಿ ತೂಗಲು ಬಹುದೀಗ
ವಾರಿಧಿಯನು ಮುಕ್ಕುಳಿಸಿಯೆ ಬತ್ತಿಸಿ
ತೋರಿಸಲಪ್ಪುದು ಬಹು ಬೇಗ ೧೭

ಧಾರುಣಿಯೊಳು ಗುರುಕರುಣದ ಅಳತೆ ಮು
ರಾರಿಗು ಸಿಲುಕದು ಅದು ಈಗ
ತೋರಿತು ಅಲ್ಲಿ ವರಾಹತಿಮ್ಮಪ್ಪ ಕು
ಮಾರರು ವಾಜಿಯ ತಡೆದಾಗ ೧೮

## ೮೨

ತನ್ನ ಕಷ್ಟದಿ ತನಗೆ ದೊರಕುವುದು ಹಾಗ
ಉನ್ನಂತ ಭಾಗ್ಯಗಳು ಹರಿಯ ವಿನಿಯೋಗ ಪ

ಕಟ್ಟಿಗೆಯ ಹೊರೆ ತಂದು ಪಟ್ಟಣದೊಳಿಳುಹಿದರು
ಉಟ್ಟ ಬಹಿರ್ವಾಸವನು ಬಿಗಿದಿಟ್ಟರು
ಮೊಟ್ಟೆಯನು ಕೊಂಡೊಯ್ದು ಇಟ್ಟದನು ಮಾರಿದರು
ಹೊಟ್ಟೆ ತುಂಬಿಸಿ ಕಡೆಗೆ ಕಟ್ಟುವನು ಹಾಗ ೧

ಉದಯಾಸ್ತಮಾನದೊಳು ಎದೆನೀರು ಆರಿದರು
ಪದಪದ್ಯಗಳ ಹೇಳಿ ಕುಣಿದಾಡಲು
ಹದಿನಾರನೆಯ ವಿಧಿಯ ಸದನದೊಳು ಸವಿದುಣಲು
ಕದನ ಕರ್ಕಶನಾಗಿ ಕಡಿದು ಬರೆ ಹಾಗ ೨

ಸೂಜಿ ನೂಲನು ಕೊಂಡು ಬಾಜಾರದೊಳು ಕುಳಿತು
ಸೋಜಿಗದ ಹೊಲಿಗೆಯನು ಮಾಡಿಕೊಡಲು
ಕಾಜು ಬಳೆಗಳ ಹೊತ್ತು ದಣಿದು ಮಾರಿದರವಗೆ
ರೋಜು ಉಳಿವುದು ಅಸ್ತಮಯಕೆ ಒಂದ್ಹಾಗ ೩

ಭಾಗ್ಯವುಳ್ಳವನನ್ನು ಬಾಧಿಸಲು ಅವ ತನಗೆ
ಯೋಗ್ಯವಾಗುವ ವಸ್ತು ಕೊಡಲಾಪನೆ
ಕಾಗೆ ಕರಿದೆನಿಸಿ ತಾ ಕಸ್ತೂರಿ ಹೋಲುವುದೆ
ಮೊಗೆಮೊಗೆ ಮಲ್ಲಿಗೆಯು ಪರಿಮಳಿಪುದೆ ೪

ಹರಿಯ ಸೇವೆ ಮಾಡೆ ಇಹಪರದ ಸೌಖ್ಯಗಳು
ಹರನ ಸೇವೆಯ ಮಾಡೆ ಪರಮ ಪದವು
ಸಿರಿಯರಸ ವರಾಹತಿಮ್ಮಪ್ಪ ನಿನ್ನಡಿಯ
ಕರುಣರಸ ಹೊರತಾಗಿ ಸಿರಿಯು ಸೇರುವಳೆ ೫

## ೮೩

ತನ್ನ ಸ್ಮರಣೆ ತಾನರಿಯದ ಮನವು
ಚಿನುಮಯ ರೂಪನ ಬೆನ್ನವಿಡಿವುದುಂಟೆ ಪ

ಹಾವಿನ ಹೆಜ್ಜೆಯ ಹಾವರಿವಂದದಿ
ಭಾವಿಸಿಕೊಳ್ಳದೆ ತಗ್ಗು ಮುಗ್ಗುಗಳ
ಗೋವಳನಿಲ್ಲದ ಗೋವಿನ ತೆರನಂತೆ
ಜೀವನುಂಗುವ ವ್ಯಾಘ್ರನಗ್ರಕೆ ಸುಳಿಯಲು ೧

ಕನ್ನಡಿ ಶುದ್ಧವಾಗಿಯೆ ಕಾಣದ ದೃಷ್ಟಿ
ಚಿನ್ನವಾರಿಕೆಯನ್ನು ಮಾಡುವ ಪರಿಯು
ಧನ್ಯವಾದವರನ್ನು ಕಂಡು ನಗದ ಮನ
ಮನ್ನಣೆಯಿಲ್ಲದ ಮನೆಯೊಳುಂಬರೆ ಹೇಸ ೨

ಹೇಳಿದ ಮಾತನು ಕೇಳಿ ಮಾನಸದೊಳು
ಮೇಳವಾಗುವೆನೆಂದು ಖೂಳತನದಿ ಪೋಗಿ
ಕೇಳಿದ ಉತ್ತರಕುತ್ತರ ಹರಿಸದೆ
ಆಳು ಬಾವಿಯ ಹಾರಿ ಹೊಳಚುವ ತೆರನಂತೆ ೩

ಕಾಗೆಯು ಗರುಡನ ಸರಿಯೆಂದು ಜೂಜಾಡಿ
ಸಾಗರವನು ಹಾರಿ ನಡುವೆ ಬಿದ್ದಂದದಿ
ಯೋಗಿಯ ಪರಿಯಂತೆ ತಪವೆಂದು ತನ್ನಯ
ಮೂಗ ಮುಚ್ಚಲು ಭವರೋಗ ಹಾರುವುದಂತೆ ೪

ಮೀಸಲಿಗೊದಗುವ ಶೇಷಗಿರೀಶನ
ಆಸೆಯಗ್ರಾಸವ ಬೇಡಿಕೊಳ್ಳದ ಮನ
ಸಾಸಿರ ವೆಗಡದ ಭಾಂಡದೊಳೋಗರ
ಬೇಯಿಸಿ ಭುಂಜಿಪೆಯೆಂದು ಮೋಸ ಮಾಡುವದಿಂದು ೫

ಚಿತ್ರಿಕ ರಚಿಸಿದ ಸೇನೆ ಸೇನೆಗಳಲ್ಲ
ಪ್ರಸ್ತುತಕೊದಗುವದೆನುತಿಹ ರಾಯನ
ಮುತ್ತಿಕೊಂಡಿಹ ಪರಸೇನೆಯ ಇದಿರೊಳು
ಮೃತ್ಯುದೇವತೆ ಬಂದು ಮೂದಲಿಸುವಳೆಂದು ೬

ಮೊಸರನ್ನ ತನ್ನ ಕೈಯೊಳಗಿದ್ದಂತೆ
ಹಸಿವಾದ ವೇಳ್ಯದಿ ಹಸಿಯ ಮೆಲ್ಲುವದೇಕೆ
ವಿಷಮವಾಗದೆ ಹರಿ ವರಾಹತಿಮ್ಮಪ್ಪನ
ಕುಶಲದಿ ನೆನೆಯಲು ಹಸನದಿ ಸಲುಹುವ ೭

## ೮೪

ದುರ್ಜನರ ಸಂಗವನು ತ್ಯಜಿಸು ಮನವೆ, ಸಾಧು
ಸಜ್ಜನರ ಸಂಗವನು ಭಜಿಸಿ ಸುಖಿಯಾಗೆಲವೊ ಪ

ದುಷ್ಟ ವ್ಯಾಘ್ರನ ಕೈಯ ಮುಟ್ಟಿ ಹಿಡಿ ತರಬಹುದು
ಅಟ್ಟಿಬಹ ಮದಕರಿಯ ಕಟ್ಟಬಹುದು
ಕೃಷ್ಣಸರ್ಪನ ಹುತ್ತ ಕಲಕಿ ಜೀವಿಸಬಹುದು
ದುಷ್ಟಾತ್ಮರಾದವರ ಬಿಟ್ಟು ಕಳೆ ಮನವೆ ೧

ಚೇಳಬಾಲದ ಉರಿಯ ಜ್ವಾಲೆ ತಾಳಲುಬಹುದು
ಕಾಲಮೇಘದ ಸಿಡಿಲು ಬೀಳಬಹುದು
ಶೂಲಪಾಣಿಯ ಫಣೆಯ ಆಲಿ ಕೀಳಲುಬಹುದು
ಕಾಳುಮೂಳರ ಸಂಗ ಮರೆದು ಕಳೆ ಮನವೆ ೨

ಹರಿವ ಗರಗಸಿನಲ್ಲಿ ಶಿರವನೊಡ್ಡಲುಬಹುದು
ಬೆರಸಿಬಹ ಕಾಡ್ಗಿಚ್ಚ ಧರಿಸಬಹುದು
ಸರಿಸದಲಿ ನಿಂತು ಕೇಸರಿಯ ಕೆಣಕಲುಬಹುದು
ಮರೆಸಿ ಕೊರಳನು ಕೊಯ್ವ ನರರ ಮರೆ ಮನವೆ ೩

ಒಂದು ಜಾತಿಗೆ ವಿಷವು ಪುಚ್ಛದೊಳಗಿರುತಿಹುದು ಮ–
ತ್ತೊಂದು ಜಾತಿಗೆ ದಂತದೊಳಗೆ ವಿಷವು
ಒಂದು ಜಾತಿಗೆ ಮೈಯ ಅಂದವೆಲ್ಲವು ವಿಷವು
ಹಿಂದೆಯಾಡುವ ನುಡಿಯು ಘೋರ ವಿಷ ಮನವೆ ೪

ತೇರ ಕಂಡರೆ ತೊಲಗು ಮಾರೈದನಾಕ್ಷಣದಿ
ವಾರುವಗೆ ಕಡೆ ಸಾರು ಈರೈದು ಮಾರುವನು
ದಾರಿಯನು ಬಿಡು ಗಜಕೆ ಮೂರು ಸಾವಿರವನ್ನು
ಊರ ಬಿಡು ದುರ್ಜನರ ಸೇರದಿರು ಮನವೆ ೫

ಸತ್ಯವಂತರ ಕಂಡರರ್ಥಿಯಿಂದಲೆ ಎರಗು
ನಿತ್ಯದೊಳು ಶ್ರೀಹರಿಯ ಕೀರ್ತನೆಯ ಮಾಡು
ಉತ್ತಮೋತ್ತಮ ಪದವ ಹತ್ತಿಸುವವರ ಬೇಡು
ಧೂರ್ತಮನುಜರ ಸಂಗ ಕಿತ್ತು ಕಳೆ ಮನವೆ ೬

ಶುದ್ಧಮನವೆ ಎನ್ನ ಬುದ್ಧಿಯೊಳಗಡಗಿರ್ದು
ಉದ್ಧರಿಸು ವರಾಹತಿಮ್ಮಪ್ಪನನು ನೆನೆದು
ಮದ್ದನರೆ ಜನ್ಮದೊಳು ಮರಳಿಬಾರದ ಹಾಗೆ
ಗದ್ದುಗೆಯ ಹಾಯ್ಕೆನ್ನ ಹೃದಯ ಮಧ್ಯದಲಿ ೭

## ೮೫

ಧನವು ಇದ್ದರೆ ಸಾಕು ಜನರಿಗೆ
ಧನವು ಇದ್ದರೆ ಸಾಕು ಪ

ಧನದೋರದಾತಗೆ ಗುಣವಿಲ್ಲವನುದಿನ
ಧನವಿಲ್ಲದಾತನು ವನದ ಪಾಮರನು ಅ.ಪ

ತಂದೆ ತಾಯಿಗಳಿಲ್ಲ ಬಂಧುಬಾಂಧವರಿಲ್ಲ
ಹಿಂದುಮುಂದುದಿಸಿದ ತಮ್ಮಂದಿರನೊಲ್ಲ ೧

ಒಡವೆಯುಳ್ಳಾತಗೆ ನಡೆಯಬಾರದು ಕಾಲು
ನಡೆವಾಗ ಬಡವರ ಎಡವುತ್ತ ಕಾಣನು ೨

ಅರ್ಥವ ಪುಂಜಕನರ್ಥ ಯಥಾರ್ಥವು
ಧೂರ್ತನಾದರು ತಾನು ಕೀರ್ತಿಸಿಕೊಂಬನು ३

ಸೆಡವೆಂಬ ಪುತ್ರನು ಒಡಲೊಳು ಜನಿಸುವ
ಮಡದಿ ಗರ್ವಿತೆಯಾಗಿ ಪಿಡಿದಳು ಕರವನು ೪

ಉತ್ತಮೋತ್ತಮನಾಗಿ ಅಧಮನುತ್ತಮನಪ್ಪ
ಮೃತ್ಯುಮಾನಿನಿ ವ್ಯರ್ಥ ಮಗನ ಪಡೆಯುವಳು ೫

ಉಡಿಗೆ ಆಭರಣಕ್ಕೆ ನುಡಿಯಬಾರದು ಬಾಯಿ
ಕಿಡಿಯಿಡೆ ಕಂಗಳು ಜಡದ ಕರ್ಣಗಳು ೬

ಕಟ್ಟಲು ಅರ್ಥವ ಹೊಟ್ಟೆಯೊಳು ಹಸುವಿಲ್ಲ
ಭ್ರಷ್ಟ ಅನಾಥರ ಶ್ರೇಷ್ಠ ಸೃಷ್ಟಿಯೊಳಾತ ೭

ಬಡಮನಸಾಗಿಯೆ ನುಡಿಯ ಬಂದವನೊಳು
ಸಡಗರದಿಂದಲೆ ಸೆಡಕ ತೋರುವನು ೮

ಅರಸು ಆತನ ಕಂಡು ಕರೆಸಿ ಉಚಿತವಿತ್ತು
ಸರಸವನಾಡಿ ವಿಹರಿಸುತ್ತಲಿಹನು ೯

ಫಣಿಗಿರಿಯೊಳು ನಿಂತ ವರಾಹತಿಮ್ಮಪ್ಪನು
ಹಣವನಿತ್ತವರಿಗೆ ಉಣಿಸುವಭೀಷ್ಟವ ೧೦

## ೮೬

ನಂಬಬೇಡ ನಂಬಬೇಡ
ನಂಬಲೊಜ್ರ ಕಂಬವಲ್ಲ ಪ

ತುಂಬಿದ ಅಸ್ಥಿ ಮಾಂಸ ರಕ್ತ
ಜಂಬುಕನ ಬಾಯ ತುತ್ತ ಅ.ಪ

ಎಂಬತ್ತನಾಲ್ಕು ಲಕ್ಷ
ಕುಂಭದೊಳು ಹೊಕ್ಕು ಬಳಲಿ
ನಂಬಲಾರದೊಂದು ಕ್ಷಣಕೆ
ಅಂಬರಕ್ಕೆ ಹಾರುವದ ೧

ಮಲವು ಬದ್ಧವಾದ ತನು
ಮಲೆತು ಇರುವುದೇನು
ಬಲುಹುಗುಂದಿದ ಮೇಲೆ
ಫಲವಿಲ್ಲವಿದರಿಂದ ೨

ಮಾಳಿಗೆ ಮನೆಯ ಬಿಟ್ಟು
ಮಾಡಿದ ಓಗರ ಬಿಟ್ಟು
ಜಾಳಿಗೆ ಹೊನ್ನನು ಬಿಟ್ಟು
ಜಾರುವುದು ತನುವ ಬಿಟ್ಟು ೩

ಆಸೆಯನ್ನು ನೋಡಿ ಮೃತ್ಯು
ಮೋಸವನ್ನು ಯೋಚಿಸುವುದು
ಸಾಸಿರನಾಮನ ಭಜಿಸಿ
ದಾಸನಾಗು ಅನುದಿನ ೪

ಮಡದಿ ಮಕ್ಕಳು ಇದನ
ಕಡೆಯ ಬಾಗಿಲೊಳಗಿಟ್ಟು
ಒಡವೆ ವಸ್ತುಗಳನು ನೋಡಿ
ಅಡಗಿಸಿ ಇಡುವರಂತೆ ೫

ಈಗಲೋ ಇನ್ನಾವಾಗಲೊ
ಭೋಗದಾಸೆ ತೀರಲೊಂದು
ಹಾಗಗಳಿಗೆ ನಿಲ್ಲದಯ್ಯ
ಈ ಗರುವ ಪರಮಾತ್ಮ ೬

ವಾರಕದಾಭರಣವನ್ನು
ಕೇರಿಯೊಳು ಕೊಂಬುವರಿಲ್ಲ
ವರಾಹತಿಮ್ಮಪ್ಪಗಿಟ್ಟು
ವಂದಿಸಿ ಕೈಗಳ ತಟ್ಟು ೭

## ೮೭

ನೀನೆ ಗುರುವಾಗೆನಗೆ ಕೋನೇರಿವಾಸ
ಜ್ಞಾನವಿಲ್ಲದ ಮನುಜ ತಾನಿದ್ದು ಫಲವೇನು ಪ

ನಾಳವಿಲ್ಲದ ಘಂಟೆ ಭಾರವಾಗಿದ್ದರೇನು
ತೋಳ ಬಲಹಿಲ್ಲದವ ದೊರೆಯಾದರೇನು
ಹಾಳು ಭೂಮಿಯು ತನ್ನ ಮೂಲವಾದರೆಯೇನು
ಬಾಳಲೀಸದ ಮನೆಯ ಬಲವಂತವೇನು ೧

ತಿದ್ದಬಾರದ ತೇಜಿ ಉದ್ದವಾಗಿದ್ದರೇನು
ಬಿದ್ದ ಪೂಜೆಯ ಮೂರ್ತಿ ಮುದ್ದಾದರೇನು
ಕದ್ದ ಕಳ್ಳನ ಮಾತು ಬದ್ಧವಾದರೆಯೇನು
ಮದ್ದನರಿಯದೆ ಧಾತು ತಿಳಿದಿದ್ದರೇನು ೨

ಗೊಡ್ಡು ದನವಿನ ಕ್ರಯವು ಅಡ್ಡವಾದರೆಯೇನು
ಬಡ್ಡು ಅರಸಿನ ಬಂಟನೊಡ್ಡೊಕ್ಕರೇನು
ಹೆಡ್ಡನಾದವ ಬಹಳ ಗಡ್ಡವಿರಿಸಿದರೇನು
ಕಡ್ಡಾಯದಂಗಡಿಯಲಿದ್ದು ಫಲವೇನು ೩

ಒಕ್ಕಲಿಲ್ಲದ ಊರು ಮಕ್ಕಳಿಲ್ಲದ ಮನೆಯು
ಅಕ್ಕರಿಲ್ಲದ ತವರು ಇದ್ದು ಫಲವೇನು
ಚೊಕ್ಕ ಹೆಂಡತಿಯವಳ್ಗೆ ತಕ್ಕ ವರನಿಲ್ಲದಿರೆ
ಕುಕ್ಕೆ ತುಂಬಿದ ರೊಕ್ಕವಿದ್ದು ಫಲವೇನು ೪

ಬಡಿಗೆಯಿಲ್ಲದೆ ಚಿನ್ನ ಕಡಗವಾಗುವುದೇನೊ
ಪೊಡವಿ ಕಡಿಯದೆ ಬೆಳೆಯ ನೆಡುವುದೇನೊ
ಕಡಗೋಲು ಹೊರತಾಗಿ ಬೆಣ್ಣೆ ತೋರುವುದೇನೊ
ತುಡುಬು ಬಡಿಯದೆ ಧ್ವನಿಯ ಕೊಡುವುದೇನೊ ೫

ಅಡವಿಯೊಳಗಿಹ ವೇಣು ತಿದ್ದಿದರೆ ಮೈಗೊಟ್ಟು
ಕಡುಹುಳ್ಳ ದೊರೆಗಳನು ಹೊರವುತಿಹುದು
ಬಿಡದೆ ಶುಕ ಪಕ್ಷಿಯನು ಅಡಗಿಸಿಯೆ ಹಾಲೆರೆದು
ಒಡನೆ ಹೇಳಿದ ನುಡಿಯ ತಾ ನುಡಿವುದು ೬

ಒಡವೆಯಿದ್ದರೆ ಬಂಟ ಬಿಡದೆ ಸೇವೆಯ ಮಾಳ್ಪ
ಮಡದಿ ತಾ ಚೆಲುವಾಗಿ ಅಡಿಗೆ ಮಾಡುವಳು
ಕಡೆಯ ಕಾಲಕೆ ತನ್ನ ದೃಢ ಬುದ್ಧಿ ಹಿಂಗುವುದು
ಒಡೆಯನನು ಭಜಿಸಲಿಕೆ ಮನವಿಲ್ಲವು ೭

ಗುರುವಾಗು ಇಹಪರಕೆ ಸ್ಥಿರವಾದ ಸೌಖ್ಯವನು
ಒರೆದು ಮಾರ್ಗವ ತೋರು ಉರಗಗಿರಿವಾಸ
ಗುರುವೆಂದು ಭಾವಿಸಿಯೆ ಕರಮುಗಿದು ಶಿರಬಾಗಿ
ಸರಸಿಜಾಂಘ್ರಿಯ ನೆನೆವೆ ವರಾಹತಿಮ್ಮಪ್ಪ ೮

## ೮೮

ಬರಿದೆ ಚಿಂತಿಸಬೇಡ ಮನವೆ ಭಯಗೊಂಡು
ಹರಿಯೊಲುಮೆ ನಮ್ಮಲ್ಲಿ ಸ್ಥಿರವಾಗಿ ಉಂಟು ಪ

ಕೊಲ್ಲುವನೊ ಕಾವನೋ ನಿಲ್ಲುವನೊ ಪೋಗುವನೋ
ಬಲ್ಲನೊ ಅರಿಯನೋ ಇದನೆಲ್ಲವೆನುತ
ಸೊಲ್ಲುಸೊಲ್ಲಿಗೆ ಕರೆದು ಎಲ್ಲವನು ತಿಳುಹಿದರೆ
ಕಲ್ಲಾಗುವನೆ ಸ್ವಾಮಿ ಜಗದ ವಲ್ಲಭನು ೧

ಕರಿರಾಜ ಧ್ರುವನು ಪ್ರಹ್ಲಾದ ದ್ರೌಪದಿ ದೇವಿ
ಮರೆವಿನೊಳಜಾಮಿಳನು ಕರೆಯಲಾಗಿ
ಮೊರೆಯ ಲಾಲಿಸಿ ತಾಯಿ ಕರುವನರಸುವ ತೆರದಿ
ಬರಲಿಲ್ಲವೇ ಸ್ವಾಮಿ ಉರಗ ಗಿರಿವಾಸ ೨

ಗರ್ಭದೊಳಗಿರುವಾಗ ಹಬ್ಬಿರುವ ಮಾಂಸಲತೆ
ಉಬ್ಬಸವ ಬಿಡುತಿರಲು ಅಬ್ಬೆ ಸಲಹಿದಳೆ
ಉಬ್ಬರದ ನೋವಿನೊಳು ಒಬ್ಬನೇ ಬರುವಾಗ
ಹೆಬ್ಬಾಗಿಲನು ಮುಂದೆ ತೋರಿದ (ರಾ)ರ್ಯೊ ನಿನಗೆ ೩

ಮಡದಿ ಮಕ್ಕಳನೆಲ್ಲ ಒಡಗೊಂಡು ಮಲಗಿರಲು
ಕಡಸಾರ ಬಂದವಳು ಕಾಲು ಸುತ್ತಿ
ನಡುವಿರುಳು ಹಿಡಿದಿರ್ದ ಹಿಡಿತಲೆಯ ಮೃತ್ಯುವನು
ಬಿಡಿಸಿ ಸಲಹಿದರಾರು ಜಡನಾದ ಮನವೆ ೪

ಹರಿಯನರಿಯದೆ ಮನದಿ ಮರುಗಿ ಕರಗಲು ಬೇಡ
ಮರೆಯಾಗುವವನಲ್ಲ ಸ್ಥಿರವಿರಲು ಮನದಿ
ಎರವು ಮಾಡದೆ ಸ್ವಾಮಿ ಪರಿಪರಿಯ ಸೌಖ್ಯವನು
ಕರೆದು ಈವನು ನಮಗೆ ವರಾಹತಿಮ್ಮಪ್ಪ ೫

## ೮೯

ಬಲ್ಲರೊಳು ಸಲ್ಲದೈ ಖುಲ್ಲ ಮಾತುಗಳು
ನಿಲ್ಲದಾಯುಷ್ಕೀರ್ತಿ ಎಲ್ಲರೊಳು ಕೇಳಿ ಪ

ಅರಸು ಸಣ್ಣವನೆಂದು ಸರಸವಾಡಲು ಸಲ್ಲ
ಕರೆಸಿ ಕೇಳದ ಮಾತು ಆಡಸಲ್ಲ
ಪರಸಖರ ಮನೆಯೊಳಗೆ ಇರಿಸಿಕೊಂಡಿರ ಸಲ್ಲ
ಬೆರೆಸಿ ಬಹ ಪಾತಕರ ಅರಸುವರೆ ಸಲ್ಲ ೧

ಹಗಲು ಕಳ್ಳನ ಕೈಯ ಜಗಳವಾಡಲು ಸಲ್ಲ
ಹಗೆಯೊಡನೆ ಸ್ನೇಹವನು ಮಾಡಸಲ್ಲ
ಜಗಳಗಂಟಿಕ್ಕುವನ ಮೊಗದೊಳಗೆ ನಗೆಯಿಲ್ಲ
ಅಗಲಿ ಪೋಗುವೆನೆಂಬ ಮಗ(ನು) ಸೊಗ(ಸ)ಲ್ಲ ೨

ಒಡೆಯನಿಲ್ಲದ ಊರು ಬಡವರಿಗೆ ಅಳವಲ್ಲ
ಕಡು ಚೆಲ್ವೆ ಕುರುಡನಿಗೆ ಮಡದಿಯಹ ಸಲ್ಲ
ನುಡಿಯ ತಿಳಿಯದೆ ಇಹನ ಸಾಕ್ಷಿಯನು ಇಡ ಸಲ್ಲ
ದೃಢವಾದ ಮೂರ್ಖನೊಳು ಕದನ ಮಾತಿಲ್ಲ ೩

ಹರಿದಾಸರೆನಿಸಿದರೆ ಪರಗತಿಯೊಳೆರವಿಲ್ಲ
ಗುರುಹಿರಿಯರಾದವರ ಜರೆಯ ಸಲ್ಲ
ಕರಕರೆಯ ಬದುಕಿನೊಳು ಬರುವ ಉಡುಗೊರೆಯಿಲ್ಲ
ಮರೆವಿನೊಳು ಹಗೆಯುರಗ ಗೆಲುವ ಪರಿ ಸಲ್ಲ ೪

ಹರಿಯು ಮುನಿದರೆ ಮರೆಯೊಳಿರಿಸಿ ಕೊಂಬುವರಿಲ್ಲ
ಹರಿಯೊಲಿದ ನರನೊಳಗೆ ಗೆಲುವ ಪರಿಯಿಲ್ಲ
ಸಿರಿಯರಸ ವರಾಹ ತಿಮ್ಮಪ್ಪನಿರಲು ಬಲ್ಲ
ನರನು ಹರಿದೂಷಕರ ಸರಿಯೊಳಗೆ ನಿಲ್ಲ ೫

## ೯೦

ಮತಿತಪ್ಪಿ ನಡೆದೆಯಲ್ಲ ಶ್ರೀಲಕುಮೀ
ಪತಿಯನು ನೆನೆಯಲಿಲ್ಲ
ಹಿತವಾದ ಪಥವು ಸಂತತ ತೋರದೆ ನೀನು
ಖತಿಗೊಂಡು ವೆಂಕಟಪತಿಯನು ನೆನೆಯದೆ ಪ

ಕೃತ ತ್ರೇತ ದ್ವಾಪರ ಕಲಿಯುಗ ಚತುರ್ವಿಧ
ಜೊತೆಯಾಗಿ ಪೋಗಲು ಸಾವಿರ ಬಾರಿಯು

ಚತುರಾಸ್ಯ ಬ್ರಹ್ಮಗೆ ಹಗಲೊಂದು ಸಲುವುದು
ಗತಿಯ ಕಾಣೆನು ಶ್ರುತಿಯ ಅಯುತ ಕಾಲದೊಳು ೧

ಹಿಂದಣ ಭವದೊಳಗೆ ಬಂದ ಭವದೊಳಗೆ ಸಂ –
ಬಂಧವಾಗಿಹ ಸತಿಯರೆಷ್ಟು ಮಂದಿಯೋ ಕಾಣೆ
ಕಂದರನು ಪಡೆದುದಕೆ ಲೆಕ್ಕ ಸಂಖ್ಯೆಗಳಿಲ್ಲ
ತಿಂದ ಅನ್ನವು ಮೇರುವಿಗಿಂತ ಇಮ್ಮಡಿಯು ೨

ನುಡಿಸಿಕೊಂಬುದು ಕಾಯ ಬಿಡಿಸಿಕೊಂಬುದು ಜೀವ
ಅಡಿಗಡಿಗೆ ಹುಟ್ಟುತ್ತ ಸಾವಾಗಯೆನ್ನುವನು
ಹಿಡಿದು ಕೇಳುವ ಕಾಲ ಮನದಿ ಬೇಸರಗೊಳಲು
ಜಡತೆಕಿಕ್ಕದೆ ಮುಂದೆ ಕಡೆ ಹಾಯು ಮನವೆ ೩

ಬಲೆಯ ಕಾಣದೆ ಪಕ್ಷಿ ಮೇವಿನಾಸೆಗೆ ಪೋಗಿ
ತಲೆ ಸಿಕ್ಕಿ ಪ್ರಾಣವನು ಕಳಕೊಂಬ ತೆರನಂತೆ
ಕುಲವೃಕ್ಷದೊಳಗಿರ್ದ ಫಲದ ಮಮತೆಗಳಿಂದ
ಜಲಜನಾಭನ ಬಿಟ್ಟು ಹೊಲಬುದಪ್ಪಿತಲ ೪

ಸ್ನಾನಕ್ಕೆ ಚಳಿ ಹುಟ್ಟಿ ಧ್ಯಾನಕ್ಕೆ ಮರವೆಯು
ಮೌನಕ್ಕೆ ಕೋಪದ ಬೀಜವಂಕುರಿಸಿತು
ದಾನಕ್ಕೆ ಲೋಭವು ಮಾನಕ್ಕೆ ಪಿಸುಣರು
ಏನ ಮಾಡಿದರಿವರು ಬಿಡರಲ್ಲೊ ಮನವೆ ೫

ಸಂಗಡದಿ ಬರುತಿಪ್ಪ ಶುಭಗಳನು ಕಡೆಗಿಟ್ಟು
ಅಂಗಸುಖವ ತಾಳ್ದು ಗೊಂಗುಡಿಯ ಹೊದ್ದು
ಕಂಗಳಿಗೆ ಚೆಲುವಾದ ಅಂಗನಾಮೋಹದಿ ಶ್ರೀ–
ರಂಗನ ನಾಮದ ಅಂಗಿಯ ಸಡಲಿಸಿದೆ ೬

ಹರಿಧ್ಯಾನ ಹರಿಪೂಜೆ ಹರಿನಾಮ ಕೀರ್ತನೆಯು
ಹರಿಭಕ್ತಿ ನರ್ತನೆಯು ಹರಿಯ ಸೇವೆಗಳು
ಎರವುದೋರದೆ ನೀನು ವರಾಹತಿಮ್ಮಪ್ಪನನು
ಸ್ಥಿರವಾಗಿ ನಿಲುವಂತೆ ಕರಕೊಳ್ಳೊ ಮನವೆ ೭

## ಊ. ತತ್ವ ವಿವೇಚನೆ

### ೬೧

ಹರಿಯಾದರೇನು ತಾ ಹರನಾದರೇನು
ಎರಕ ತಪ್ಪಿದ ಮೂರ್ತಿ ದೊರಕಿ ಫಲವೇನು ಪ

ಪಿತನೊಳಗೆ ಸೇರದಿಹ ಸುತನಿಂದ ಫಲವೇನು
ಪತಿಸೇವೆಗೊದಗದಿಹ ಸತಿ ಇದ್ದರೇನು
ಮತಿಹೀನ ಗುರು ತಾನು ಜೊತೆಯಾಗಿ ಇದ್ದರೇನು
ಮತ ಮೀರಿ ನಡೆವಾತ ಯತಿಯಾದರೇನು ೧

ಸಾಯವಿಲ್ಲದ ನ್ಯಾಯ ಸತ್ಯವಾದರೆ ಏನು
ಬಾಯಸವಿಯಿಲ್ಲದ ರಸಾಯನದಲೇನು
ಕಾಯ ಕುಂದಿದ ಮೇಲೆ ಜೀವದಾಶೆಯದೇನು
ಮಾಯವಾದಿಯ ಮಾತು ಮತ್ತೆ ದೃಢವೇನು ೨

ಋಣವ ಮಾಡಿದ ತಾತ ಗುಣವಂತನಾದರೇನು
ಭಣಿತೆ ತಪ್ಪಿದ ತಾಯಿ ರಕ್ಷಿಣಿಯು ಆದರೇನು
ಎಣಿಕೆ ಬಾರದ ಮನುಜ ಕರಣಿಕನಾದರೇನು
ಫಣಿರಾಜನೊತ್ತಿನೊಳು ಹಣವಿದ್ದರೇನು ೩

ಕ್ರೋಧನಾಗಿಹ ವಿಪ್ರ ವೇದ ಓದಿದರೇನು
ಮಾದಿಗನು ತಾ ಮಡಿಯನುಟ್ಟರೇನು
ಬೂದಿಮುಚ್ಚಿದೆ ಕೆಂಡವಾದ ಸೋದರವೇನು
ಸಾಧಿಸುವ ಊರೊಳಗೆ ಆದ ಫಲವೇನು ೪

ಹರಿಯನರ್ಚಿಸದಿರ್ದ ಕರವಿರ್ದು ಫಲವೇನು
ಹರಿಯ ಸ್ಮರಣೆಯ ಮಾಡದರಿಯದವನೇನು

ಸಿರಿಯು ನಿಲ್ಲದ ಗೃಹದ ಪರಿಯ ಸೌಖ್ಯವದೇನು
ಮರೆಯಾದ ಮನುಜನೊಳು ವ್ಯವಹಾರವೇನು ೫

ವಾರಿಯಿಲ್ಲದ ಊರ ಸೇರಿರ್ದು ಫಲವೇನು
ಚೋರನೊಡನೇ ದಾರಿ ನಡೆವುದೇನು
ಬೇರು ಇಲ್ಲದ ವೃಕ್ಷ ಏರಿ ನೋಡುವುದೇನು
ಮಾರಿ ಮನೆಯೊಳಗಿರಲು ಸಾಕಾರವೇನು ೬

ಲಕ್ಷಣದ ಮೂರ್ತಿಯಿರಲಕ್ಷಯವ ತೋರುವುದು
ಪಕ್ಷಿವಾಹನ ಲಕ್ಷ್ಯಾಪೇಕ್ಷೆಯಾಗಿಹರು
ಲಕ್ಷಣವಿರಹಿತ ನರ ಪ್ರದಕ್ಷಿಣದಿ ಬಳಲಿದರು
ಭಿಕ್ಷುಕನೇ ಸರಿಯಾತನೀಕ್ಷಿಸರು ಜನರು ೭

ಬುದ್ಧಿವಂತರ ಕೈಯ ಶುದ್ಧವಾದೆರಕದಲಿ
ತಿದ್ದಿರ್ದ ಮೂರ್ತಿಯನು ಕದ್ದುಕೊಂಡು
ಹೊದ್ದಿ ಬಲವಂತನೊಳು ಬದ್ದವಾಗಿರುತಿರ್ದು
ಎದ್ದು ಹೋಗದ ಸ್ಥಳದಿ ಮುದ್ದನಾಗಿಹುದು ೮

ಕಾಮಿತಾರ್ಥನೀವ ಸೀಮೆಯಲಿ ಕೌರವನು
ರಾಮರಾಜ್ಯದಿ ಬೇಡಿಕೊಳಲು ಕೊಡುತಿಹನು
ಪ್ರೇಮದೊಳು ವರಾಹತಿಮ್ಮಪ್ಪ ಮನದಣಿಯೆ
ಸೌಮನಸ್ಯವೀವ ಬರಿದೆ ಬಳಲದಿರು ೯

## ೯೨

ನಿದ್ರೆ ಬಾರದೆ ಕನಸು ಬಿದ್ದುದನು ಕೇಳಿ
ಬದ್ಧದೊಳು ಇದರ ಫಲವಿದ್ದರೇನು ಪೇಳಿ ಪ

ಊರ ಗೆಲುವೆನು ಎಂದು ದಾರಿಯನು ಸಂವರಿಸಿ
ಈರೈದು ಸಾವಿರವ ಹೇರಿಕೊಂಡು

ಚೋರತ್ವದೊಳು ಸೇರಿ ಭಾರಿಯಗಳನು ಹಾರಿ
ಧೀರರೈವರು ವ್ಯರ್ಥ ಸೂರೆಗೊಟ್ಟುದನು ೧

ಹಸಿದ ಮಾರಿಯ ಹೊಲನ ನುಸಿವ ಕುರಿಯಂದದಲಿ
ಎಸೆವ ಮೋಹಕದಿಂದ ಭರವಸೆಯೊಳು
ಬೆಸನವನು ಮಾಡಿ ನಿಪ್ಪಸರದೊಳು ಮೈಮರೆದು
ಬಿಸಿಯಾದ ಮಂಚದೊಳು ಹಮ್ಮೈಸಿಕೊಂಡುದನು ೨

ಮತಿಯಿಲ್ಲದಾತನಿಗೆ ಜೊತೆಯಾದ ಸೇವಕರು
ಹಿತವಾದ ದಾರಿಯನು ತೋರುತಿಹರು
ಮಿತಿಗಾಣೆನಿದರೊಳಗೆ ರಥಕೆ ಸಾರಥಿಯಿಲ್ಲ
ಅತಿಶಯದ ಚತುರ ಶಿತಿಲಕ್ಷ ಸುಳಿವುದನು ೩

ತೋರದಿಹ ಸೂತ್ರದೊಳು ಮೂರು ಕರಗಳ ಬಿಗಿದು
ಭಾರಿ ಶಿಲೆಯನು ಹೇರಿ ಚೋರನಂದದಲಿ
ಊರೊಳಗೆ ಮೆರೆಸುವುದು ತೋರುತಿಹ ಸ್ವಪ್ನಗಳು
ಚಾರ ಫಲವೇನಿದಕೆ ಹೇಳಿ ಬಲ್ಲವರು ೪

ಮಳೆಗಾಲ ತುದಿಯೊಳಗೆ ಇಳೆಯಾರಿ ಬೆಳೆ ಕೆಡಲು
ಕೊಳಕಾಲ್ವೆಸರ ಬತ್ತಿ ಬಳಲುತಿರಲು
ಸ್ಥಳದ ತೆರಿಗೆಗೆ ದೂತರೆಳೆದು ಕೇಳುತ್ತಿರಲು
ಹಳೆಯ ಸಂಬಳದವರು ಒಳಒಳಗೆ ಸೇರುವುದ ೫

ಬುದ್ಧಿ ತಪ್ಪಿದ ತೆರಿಗೆ ತಿದ್ದಿಕೊಳಬೇಕೆನುತ
ಹದ್ದು ಕಾಗೆಯ ಬಳಗ ಕುಳಿತಿರ್ದುದಲ್ಲಲ್ಲಿ
ಎದ್ದು ಬಹುಕ್ಲೇಶದಲಿ ಒದ್ದು ಕೈ ಕಾಲುಗಳ
ತಿದ್ದಿ ಹೋದನು ಪುರಕೆ ಸಿದ್ಧ ಮಾಡುವರೆ ೬

ಅಚ್ಚರಿಯ ಸ್ವಪ್ನಗಳು ಎಚ್ಚರದಿ ತೋರುತಿದೆ
ಹುಚ್ಚನೆಂದು ಜನರು ನಚ್ಚರಿದನು
ಮುಚ್ಚುಮರೆಯಾಕೆ ವರಾಹತಿಮ್ಮಪ್ಪನನು
ಬಚ್ಚಿಟ್ಟು ಮನದೊಳಗೆ ಸ್ವೇಚ್ಛನಾಗುವುದು ೭

## ೯೩

ಬಲ್ಲವನಾದರೀ ತಳ್ಳಿಬೇಡ
ಅಲ್ಲದ ಪಥವಿದರಾಸೆಯ ಬಿಡು ನೀನು ಪ

ಸರ್ಪನ ಪಣೆಯೊಳು ಜೇನುತುಪ್ಪವ ಕಂಡು
ಅಪ್ಪನೆ ತಾರೆಂದು ಅಳುತಿರಲು
ತುಪ್ಪದ ಸವಿಯನು ಜನರುಂಡು ತೀರಲು
ಮುಪ್ಪಾಗಿಯಿರುವುದ ಕಂಡು ಮೂದಲಿಸುವ ೧

ನಂಬಿದ ಮನುಜರ ಹಂಬಲ ಮರವದು
ಡೊಂಬಿಯವರು ಕಂಡು ತಡೆಯಲಾಗಿ
ಕುಂಭದ ರೊಕ್ಕವ ಲಂಚವನಿತ್ತಲ್ಲಿ
ಅಂಬರವನು ಕಂಡು ನಗುತಿಪ್ಪ ಮನುಜನ ೨

ಅಂಬರವಡಗಿಯೆ ಕುಂಭಿನಿ ಜಾರಿಯೆ
ನಂಬಿದ ಮನುಜರು ನಡೆವೆಡೆಯ
ಕುಂಭದ ನೀರನು ಚೆಲ್ಲುತ್ತ ಮಗುಳಲ್ಲಿ
ಕಂಭದ ಹಾಗೆಲ್ಲ ನಿಂತಿಹ ಜನರನು ೩

ಕಟ್ಟಿದ್ದು ಕರಗಿಯೆ ಸೆಟ್ಟೆಲೆ ಒಣಗಿಯೆ
ದುಷ್ಟನೊಬ್ಬನು ಬಂದು ನಿಂತಿಹನು
ಇಟ್ಟಿಹ ಬಾಗಿಲ ಕಾಣದೆ ತಾ ಬಂದು
ಹೊಟ್ಟೆಯ ಬಗಿದಲ್ಲಿ ಹೊರವಂಟ ವೇಳೆ ೪

ಕಡಹದ ಪಲ್ಲಕ್ಕಿ ಬೆಡಗನ್ನು ಕಾಣುತ್ತ
ಅಡವಿಯ ಮೃಗ ಬಂದು ಕುಳಿತಿರ್ದುದ
ಒಡನೆ ಕಟ್ಟಿದ ವಾಹಕರ್ಧದಿನಾರು ಮಂದಿಯು
ಕಡಿಮೆಯ ಸಂಬಳ ಕಡವಿಡುವವರನ್ನು ೫

ಅಕ್ಕಿಯ ರಾಶಿಯು ತೀರಲು ಕೊಳಗವು
ಬೆಕ್ಕನೆ ಬೆರಗಾಗಿ ಕುಳಿತಿಪ್ಪುದು
ಬಿಕ್ಕಿದ ಅಕ್ಕಿಯ ಹಕ್ಕಿಯು ಹೆಕ್ಕಿಯೆ
ಗಕ್ಕನೆ ಹಾರುವ ಪಕ್ಷಿಯ ನೋಡುತ್ತ ೬

ರವಿಶಶಿಯೊಂದಾಗಿ ಇರುತಿಹ ಗಣಿತದಿ
ಧರೆಯೊಳು ಸಾವಿರಯೆಲೆ ಬೀಳ್ವುದು
ಎರವಿನಾಭರಣವ ಅವರವರೊಯ್ಯಲು
ವರಾಹತಿಮ್ಮಪ್ಪನ ಮರೆ ಬೀಳು ಕಂಡ್ಯ ೭

## ೯೪

ಮಾಯೆಯೆನ್ನ ಕಾಯ ಸುತ್ತಿ ಬಾಯ ಹೊಯ್ವುದು
ಆಯ ತಪ್ಪಿ ಆಯ ಕೆಟ್ಟ ನ್ಯಾಯಬಪ್ಪುದು ಪ

ಹೆತ್ತ ತಾಯಿ ತಂದೆಯನ್ನು ಒತ್ತಿ ಬಯ್ವುದು
ಅತ್ತೆಯನ್ನು ಕಂಡು ಹರುಷವಿತ್ತು ನಗುವುದು
ಮೃತ್ಯುವನ್ನು ತಂದು ತನ್ನ ಹತ್ತಿರಿಡುವುದು
ಒತ್ತಿನವನ ಹೊರಗೆ ಸಾರೆನುತ್ತ ನುಡಿವುದು ೧

ಗುರುಗಳನ್ನು ಜರೆದು ಕರೆಕರೆಯ ತಪ್ಪುದು
ಕೊರಳು ಕೊಯ್ಕರನ್ನು ತಾನು ಸೆರಗ ಪಿಡಿವುದು
ಸಿರಿಯ ತಂದು ಹೊರಗೆ ಇರಿಸಿ ಮರವೆ ತೋರ್ಪುದು
ಗರುವತನದಿ ಪರರ ಒಡವೆ ಇರುಳು ಸುಲಿವುದು ೨

ದಾನದತ್ತವಾದುದನ್ನು ತಾನು ಸೆಳೆಯುವುದು
ಮಾನವನ್ನು ಹಿಡಿದು ಮೇಲೆ ಮಾನಯಿಡುವುದು
ಜ್ಞಾನಿಯನ್ನು ಕಂಡು ಮನದಿ ಬೇನೆ ತೋರ್ಪುದು
ಅನಾಥರನ್ನು ಕಂಡು ಬಹು ಹೀನ ನುಡಿವುದು ೩

ಅನ್ನವನ್ನು ಇತ್ತವರ ಮುನ್ನ ಬೈಯ್ವುದು
ಭಿನ್ನ ಭೇದ ತೋರಿ ಮನವ ಕನ್ನ ಕೊರೆವುದು
ತನ್ನವರ ಮರೆತು ಪರರ ಕನ್ಯೆಗಳುವುದು
ಹೊನ್ನ ಬೊಂಬೆಯಂತೆ ಮಾಯೆ ಬೆನ್ನ ಸುಳಿವುದು ೪

ತಪ್ಪಿ ನಡೆಯೆ ಈ ಪರಿಯೊಳಿಪ್ಪೆಯೆಂಬುದು
ಅಪ್ಪ ವರಾಹತಿಮ್ಮಪ್ಪನ ಸೇರಿಕೊಂಬುದು
ಒಪ್ಪಿ ತೋರ್ಪ ಮಾಯೆಯೆಲ್ಲ ತಪ್ಪಿ ಪೋಪುದು
ಉಪ್ಪರದ ದಾಸ ಪೇಳ್ದ ಒಪ್ಪಿಕೊಂಬುದು ೫

## ೯೫

ಯಾರ ಕೃತಕವು ಇದು ವಿಚಾರವನು ಮಾಡಿ
ಕಾರಣೀಕದ ಸ್ವಪ್ನ ಕಾಣುತಿದೆ ನೋಡಿ ಪ

ಕಾಳ ಮೇಘಧ್ವನಿಯು ಗಾಳಿ ಮಳೆ ಮಿಂಚುಗಳು
ಧಾಳಿ ಇಡುತಿಹ ಸಿಡಿಲು ಬಹಳ ಕತ್ತಲೆಯು
ಹಾಳೂರ ಮಧ್ಯದೊಳು ಬೀಳುತಿಹ ವಾರಿಗಳು
ಬೇಳುತಿಹ ಮೃಗ ಮೈಮೇಲೆ ಬೀಳುವುದ ೧

ವೃಷ್ಟಿ ತೀರುವ ತನಕ ಇಟ್ಟೆಡೆಯೊಳಿರುತಿರ್ದು
ಕೆಟ್ಟ ಪಥದಲಿ ಚಾರುಗಟ್ಟಿವಿಳಿದು
ಗಟ್ಟಿಯಾಗಿಹ ಚಳಿಯು ಹುಟ್ಟಿ ಕೈಕಾಲುಗಳು
ಒಟ್ಟಾಗಿ ಕೂಡಿರ್ದು ದೃಷ್ಟಿ ಬಿಡುತಿಹುದು ೨

ಬಿಸಿನೀರ ಮಳೆಯೊಳಗೆ ನುಸಿತ ಗುಣೆಯಸೆಯೊಳಗೆ
ಎಸೆದು ತೋರುವ ಉರಿಯ ಹಸಿಯ ಮೆಣಸಿನೊಳು
ಗಸಣಿಯನು ಕೈಕೊಂಡು ಕಸಮುಸುರೆಯಾಗಿರ್ದು
ಉಸುರಲಾರದೆ ತೃಷೆಯ ಹಸಿದ ಬಳಲಿಕೆಯ ೩

ನಿಂದೆಯಾಗಿಹ ಮೃಗದ ಚಂದವನು ಮೈಗೊಟ್ಟು
ಬಂದುದೆನಗೈಶ್ವರ್ಯ ಎಂದು ಹರುಷಿಸುತ
ಮಂದಹಾಸದ ಒಳಗೆ ಬಂಧನದಲಿರುತಿರ್ದು
ಮುಂದುವರಿದು ವ್ಯಸನದೊಳು ಬಂದಿರ್ದ ಬಗೆಯ ೪

ಮೂರು ಮಂದಿಯು ಬಂದು ಸೇರಿದರು ದೂರಿಡುವ
ಆರು ಕರೆದರು ತಾನು ಬಾರೆನೆಂಬ
ಮೇರೆಯಾಗಿಯೆ ಬಪ್ಪ ಮೂರಾರು ತಾ ಬಿಡುವ
ಸಾರಿ ಚೋರತ್ವದಲ್ಲಿ ಪರವೂರ ಸುಲಿವ ೫

ಮೇಲು ದುರ್ಗವ ಕಂಡು ಗಾಳಿಗೋಪುರವನ್ನು
ಆಳ ಬಲುಹುಳ್ಳವನು ಅವಸರದೊಳು
ನೂಲಯೇಣಿಯನಿರಿಸಿ ಏರಿಳಿದು ಬಾಹಾಗ
ಕಾಲು ಜಾರಿಯೆ ಬಸಿದ ಶೂಲದೊಳು ಬೀಳುವುದು ೬

ಹೀಗಿರುವ ಕೃತ್ಯಗಳು ನಾಗಶಯನನಿಗರುಹು
ಬೇಗದೊಳು ಪರಿಹರಿಪ ಯೋಗವನು ಕೊಡುವ
ನಾಗಗಿರಿವಾಸನಹ ವರಾಹತಿಮ್ಮಪ್ಪ
ತೂಗುವನು ತೊಟ್ಟಿಲೊಳು ಆಗುವುದನಿತ್ತು ೭

## ೯೬

ಯಾರಿಗೆ ದೂರುವೆನು ವೆಂಕಟರಾಯ
ಚಾರದ ಮಹಿಮೆಯನು ಪ

ಈರಾರು ಸ್ಥಳವಲ್ಲಿ ಮೂರಾರು ಸೇರಿಸಿ
ಹೋರಾಟವನಿತ್ತು ಮಾರಿದೆಯೆನ್ನನು ಅ.ಪ

ತೇಜವುಳ್ಳವನೊಬ್ಬನು ಐದನೆಯಲ್ಲಿ
ಮೋಜಾಗಿ ಒಳಹೊಕ್ಕನು

ಹೂಜಿ ತುಂಬಿದ್ದುದ ಸೋಜಿಗದೊಳು ಕದ್ದು
ಪಾಜಿ ಮಾಡಿದನೆನ್ನ ಮೂಜಗದೊಡೆಯ ೧

ಸೀತವಾದವನೊಬ್ಬನು ಅಷ್ಟಮದದಲ್ಲಿ
ಕಾತುರದೊಳು ಬಂದನು
ಘಾತಕತನ ಮಾಡಿ ಭೀತಿಗಳನು ತೋರಿ
ಧಾತುಗೆಡಿಸಿದನೆನ್ನನಾಥರ ದಾತ ೨

ಮೂರನೆಯವನೊಬ್ಬನು ಏಳನೆಯಲ್ಲಿ
ಸೇರಿಯೆ ಕಳುತಿದ್ದನು
ಏರಿ ಬಂದುದನೆಲ್ಲ ಆರಿಸಿ ಮಾರಿಸಿ
ಸೂರೆಗೊಂಡನು ಎನ್ನ ವಾರಿಜನಾಭ ೩

ಅತ್ರಿಯ ಮೊಮ್ಮಗನು ನಾಲ್ಕನೆಯಲ್ಲಿ
ಶತ್ರುವಾಗಿಯೆ ನಿಂತನು
ಗೋತ್ರದಿ ಕಲಹವ ಬೆಳಸಿಯೆಯಿದ್ದಂಥ
ಪಾತ್ರವ ತೀರಿಸಿ ಗಾತ್ರವ ಕೆಡಸಿದ ೪

ಸುರಗುರುವೆಂಬುವನು ಮೂರನೆಯಲ್ಲಿ
ಸ್ಥಿರವಾಗಿ ನಿಂತಿಹನು
ಗುರುಗಳ ಮುಖದಿಂದ ಕರಕರೆ ಹತ್ತಿಸಿ-
ದರು ಪಾಡಿ ಹರಿಯನ್ನು ತಿರುಕನಾದೆನು ನಾನು ೫

ಆರನೆ ಮನೆಯೊಳಗೆ ದೈತ್ಯರ ಆ-
ಚಾರಿಯನು ನಿಂತಿಹನು
ಹಾರುಮಾತುಗಳೇಕೆ ತೂರಿದನೆಲ್ಲವ
ಪಾರಾದೆನು ನಾನು ವಾರಿಜನೇತ್ರ ೬

ಆದಿತ್ಯ ಪುತ್ರನಾದ ಶನ್ಯೈಶ್ವರ
ಬಾಧಿಪ ಮನೆಗಳಾರು
ದ್ವಾದಶ ಆದಿಯು ದ್ವಿತೀಯ ಪಂಚಮದಲ್ಲಿ
ವೇದಗಳೆಲ್ಲವು ಏಳುಯೆಂಟಿರಲಿ ೭

ನಾಡನಾಳುವ ರಾಯರ ಕೆಡಿಸಿ ಮುಂದೆ
ಕಾಡಿಗೆ ಸೇರಿಸಿದ
ಈಡಿಲ್ಲ ಈತಗೆ ಜೋಡಿಲ್ಲ ಗ್ರಹರೊಳು
ಪಾಡೆಲ್ಲ ಕೆಡಿಸಿದ ರೂಢಿಗೆ ಒಡೆಯ ೮

ವಾರಿಧಿ ಮಥನದಲಿ ಸುಧೆಯನ್ನುಂಡು
ಸೇರಿದ ಗ್ರಹರೊಳಗೆ
ಮೀರಿದರಿಬ್ಬರ ಪಾರುಪತ್ಯಗಳನ್ನು
ಯಾರು ತಾಳುವರಯ್ಯ ಮಾರ ಸನ್ನಿಭನೆ ೯

ಸಂಧಿ ಸಂಧಿಯಲಿವರು ಬಂದೆನ್ನನು
ದಂದುಗ ಬಡಿಸುವರು
ಇಂದ್ರಾದಿ ದೇವರಿಗಳವಲ್ಲ ಇವರೊಳು
ಹಿಂದು ಮುಂದರಿಯೆನು ಬಂದ ಬವರವನ್ನು ೧೦

ಶುಭದಲ್ಲಿ ಶುಭವಿತ್ತರು ವೆಂಕಟರಾಯ
ಶುಭದಲ್ಲಿ ಶುಭ ತೋರಿಸೊ
ಅಭಯವನಿಪ್ಪಂಥ ವರಾಹತಿಮ್ಮಪ್ಪನೆ
ಪ್ರಭುವೆಂದು ನೀ ಹೇಳಿ ವಿಭವಗಳೆನಗೀಯೊ ೧೧

## ೯೭

ಯಾರು ಇಕ್ಕುವರೆಂದು ಹಾರೈಸುವೈ ಆತ್ಮ
ಸೋರುತಿದೆ ಮನೆಯೆಲ್ಲ ನಾರುತಿದೆ ಸ್ಥಳವು ಪ

ಒಲೆಯೊಳಗೆ ಉರಿಯಿಲ್ಲ ಜಲವಿಲ್ಲ ಬಾವಿಯೊಳು
ಕಲಹ ಮಾಳ್ಪಳು ತನ್ನ ಕುಲವನಿತೆಯು
ಹೊಲುಬುದಪ್ಪಿಯೆ ಇಲ್ಲಿ ಬರಬಹುದೆ ನೀನೀಗ
ಫಲವುಳ್ಳ ಮನೆಗಳನು ಸೇರೆಲವೊ ಆತ್ಮ ೧

ಬಾಗಿಲಿಲ್ಲದ ಮನೆಯು ಬಹಳ ಕಗ್ಗತ್ತಲೆಯು
ಕೂಗುವುದು ಹುಲಿ ಕರಡಿ ಇದಿರಿನೊಳಗೆ
ಬೇಗದೊಳು ಇಲ್ಲಿಂದ ಸಾಗುವುದೆ ಸೌಖ್ಯಗಳು
ನಾಗಶಯನನ ಗುಡಿಯ ಸೇರೆಲವೊ ಆತ್ಮ ೨

ಒಟ್ಟೆಗಡಿಗೆಯ ಒಳಗೆ ಇಟ್ಟಿರ್ದ ಬುತ್ತಿಗಳು
ಕೆಟ್ಟ ಕ್ರಿಮಿಗಳು ಬಂದು ಬಹಳ ಹಳಸಿದವು
ಬಟ್ಟಲಿಡುವವರಿಲ್ಲ ಮುಟ್ಟಿ ಬಳಸುವರಿಲ್ಲ
ಹೊಟ್ಟೆ ತುಂಬುವುದುಂಟೆ ದುಷ್ಟರೊಳು ಆತ್ಮ ೩

ಹಾಳು ಮನೆಯನು ನಿನಗೆ ತೋರಿಕೊಟ್ಟವರಾರು
ಬೀಳುವುದು ಮೇಲೆ ಹದಿನಾರು ಭಿತ್ತಿಗಳು
ಏಳು ಇಲ್ಲಿರಬೇಡ ಕಾಳಸರ್ಪನು ಬಂದು
ಕಾಲ ಕಚ್ಚುವನಲ್ಲೊ ಎಲೆ ದುಷ್ಟ ಆತ್ಮ ೪

ಮೂರು ಮಾತನು ಮೇಲೆ ಯಾರ ಕೂಡಾಡಿದೆಯೊ
ಆರು ಪಥದಲಿ ನೀನು ಮೀರಿ ನಡೆದೆ
ಕೇರಿಯಾಗಿರ್ದ ಹದಿನೆಂಟು ಅಂಗಡಿಯೊಳಗೆ
ಆರ ವ್ಯಾಪಾರವನು ಕೇಳಿದ್ಯೆ ಆತ್ಮ ೫

ಹತ್ತು ತಾಸಿನ ಮೇಲೆ ತುತ್ತು ಕೊಡುವವರಾರು
ಬತ್ತುವುದು ಕೈಕಾಲು ಬಳಲಿಕೆಯೊಳು
ಮತ್ತೇಳು ಮಂದಿ ತಾವತ್ತತ್ತ ಸಾರುವರು
ಕರ್ತುಗಳ ನಾ ಕಾಣೆ ನೀ ಕೇಳೊ ಆತ್ಮ ೬

ಎಂಟು ಮಂದಿಯು ತನಗೆ ನೆಂಟರೆಂಬಾಶೆಯೊಳು
ಗಂಟ ಕಟ್ಟಿಯೆ ಮನದಿ ಮರುಗುತಿರಲು
ಗಂಟಲೊಣಗಿಯೆ ವಾಯು ಕಂಠದೊಳು ಪೋಪಾಗ
ನಂಟರನು ನಾ ಕಾಣೆ ಆಲಿಸ್ಯೆ ಆತ್ಮ ೭

ಆಯವಿಲ್ಲದ ಮನೆಯು ಛಾಯೆ ಇಲ್ಲದ ಮಡದಿ
ದಾಯವಿಲ್ಲದ ಊರು ಕರಕಷ್ಟವು

ಬಾಯ ಹೊಯ್ಕೆಂಬರೊಳು ನ್ಯಾಯ ಸೇರುವುದೆ ಉ–
ಪಾಯದಲಿ ಸಾರೆಲೆವೊ ಸಾರಿದೆನು ಆತ್ಮ ೮

ಮೂಡಗಿರಿವಾಸನೊಳು ಬೇಡಿಕೊಂಡರೆ ನಿನಗೆ
ನೀಡುವನು ಧರ್ಮವನು ಧೈರ್ಯನಾಗಿ
ಬೀಡುಬಿಟ್ಟಲ್ಲಿಂದ ಓಡುವುದು ಸುಖದೊಳಗೆ
ಕೂಡುವುದು ವರಾಹತಿಮ್ಮಪ್ಪನೊಳು ಆತ್ಮ ೯

## ೯೮

ಯಾರು ಬಲ್ಲರು ವೆಂಕಟೇಶ ನಿನ್ನೊಳಿಹ
ಚಾರು ಗುಣಶೀಲವೆಂಬ
ವಾರಿಧಿಯ ಚಿಪ್ಪಿನೊಳು ಮೊಗೆದು ಬತ್ತಿಸುವಂಥ
ವೀರನಾವನು ಜಗದೊಳು ಪ

ಹದಿನಾಲ್ಕು ಲೋಕವನ್ನು, ನೀ ನಿನ್ನ
ಉದರದೊಳಗಿರಿಸಿಕೊಂಡು
ಉದಧಿಮಯವಾಗಿರ್ದ ಕಾಲದೊಳು ನಿನಗೊಂದು
ಉದುರಿದೆಲೆಯೊಳು ನಿದ್ರೆಯಂತೆ ೧

ಮಾಯೆ ಕಮಲಾಕರದೊಳು, ನಿನ್ನುದರ–
ದಾಯತದಿ ತೋರಿ ನಿಲಲು
ಮೋಹಿಸಲು ಆ ಕ್ಷಣದಿ ಕಾಯವಾಗಲು ಮೇಲೆ
ಬಾಯಿ ನಾಲ್ಕಾಯಿತಂತೆ ೨

ಅಲ್ಲಿ ತೋರಿದ ಸೊಲ್ಲನು, ಖಳನೋರ್ವ
ನೆಲ್ಲವನು ಸೂರೆಗೊಳಲು
ಮಲ್ಲನಾಗಿಯೆ ಜಲದಿ ಘಲ್ಲಿಸಿಯೆ ದೈತ್ಯನನು
ಚೆಲ್ವಸಾರವ ಸೆಳೆದೆಯಂತೆ ೩

ಅದರ ಆಧಾರದಿಂದ, ಸನಕಾದಿ–
ಗುದಯವಾದುದುಯೆಲ್ಲವೂ
ಮೊದಲ ಕಾಣದೆ ವೃಕ್ಷವದುರಿ ಬಿದ್ದುದ ನೋಡಿ
ತುದಿಯೊಳಗೆ ಕದನವಂತೆ ೪

ಒಳ ಹೊರಗೆ ನೀನೊಬ್ಬನೆ, ಹೊಳೆ ಹೊಳೆದು
ಸುಳಿವ ಪರಿಯನು ಕಾಣದೆ
ಮಲತಾಯಿ ಮಗನೊಳಗೆ ಕಲಹವಿಕ್ಕುವ ತೆರದಿ
ಹೊಲಬುದಪ್ಪಿಯೆ ನಡೆವರಂತೆ ೫

ಒಂದಿದರಿಂದೆರಡಾದುದು, ಮೂರಾಗಿ
ಬಂದು ಇದಿರೊಳು ನಿಂದುದು
ಒಂದು ಮಾತಿನೊಳೆರಡು ಸಂದೇಹಗಳ ತೋರಿ
ಮಂದ ಬುದ್ಧಿಯ ಕೊಡುವೆಯಂತೆ ೬

ಜಡವಾದ ಅಡವಿಯನ್ನು ಸಂಚರಿಸಿ
ಒಡಲ ಹೊರೆವುದು ಕಡೆಯೊಳು
ದೃಢವನೀಯದೆ ನೀನು ಹಿಡಿದು ಕಾಲನ ಕೈಯ
ಎಡೆಯೊಳೊಪ್ಪಿಸಿ ಕೊಡುವಿಯಂತೆ ೭

ನಂಬಿ ಬಂದವರ ನೀನು, ಮನದೊಳಗೆ
ಹಂಬಲಿಸಿಕೊಂಡಿರುತಲೆ
ಇಂಬಾಗಿ ಇಹಪರದಿ ಉಂಬ ಸಂಭ್ರಮವನ್ನು
ಸಂಭವಿಸಿ ತೋರ್ಪೆಯಂತೆ ೮

ಭೂಮಿಗೆ ವೈಕುಂಠವೆಂದು, ನಿಂತಿರುವ
ಸ್ವಾಮಿಯೆನ್ನೆಡೆಗೆ ಬಂದು
ಕ್ಷೇಮವನು ವರಾಹತಿಮ್ಮಪ್ಪ ಕರುಣದಿ
ಕಾಮಿತಾರ್ಥವನೀಯೊ ಎಮಗೆ ೯

## ೯೯

ವಂದಿಸುವೆನು ನಿತ್ಯದೊಳು ವಂದಿಸುವೆನು ಪ

ವಂದಿಸುವೆ ಗುರುಮಧ್ವರಾಯನಷ್ಟಾಂಗದೊಳು
ನಿಂದಿರ್ದ ವೈಷ್ಣವಮತಚಂದ್ರವಾರಿಧಿಗೆ ಅ.ಪ

ಕ್ರೋಧವರ್ಜಿತನಾಗಿ ವೈರಾಗ್ಯವನು ತೊಟ್ಟು
ಬಾಧಿಸುವ ಇಂದ್ರಿಯಂಗಳನೆಲ್ಲ ಬಲಿದು
ಆಧರಿಸಿ ಕ್ಷಮೆ ದಮೆ ಶಾಂತ ಸದ್ಗುಣದಿಂದ
ಮಾಧುರ್ಯದೊಳು ಜನರ ಪ್ರೀತಿಕರನಾದವಗೆ ೧

ಭಯವಿವರ್ಜಿತನಾಗಿ ಬಹುಲೋಭವನು ತೊರೆದು
ಕ್ಷಯ ಮಾಡಿ ಮೋಹವನು ಹಿಂದುಗಳೆದು
ನವವಿಧದ ಜ್ಞಾನವನು ದಶಲಕ್ಷಣಗಳಿಂದ
ನಿಯತವತಿ ಕೈಕೊಂಡನಕ್ಷರ ತ್ರಯದೊಳು ೨

ಏಳು ಕೋಟಿಯ ಮಹಾ ಮಂತ್ರ ಬಾಹ್ಯದ ಕೋಟೆ
ನಾಲಿಗೆ ವಶಮಾಡಿ ನವದ್ವಾರಗಳು
ಮೂಲಾಗ್ನಿಯಿಂ ಸುಟ್ಟು ದಶವಾಯುಗಳ ಕದವ
ಸಾಲು ನಾದಗಳೆಂಬ ಕಹಳೆವಿಡಿದವಗೆ ೩

ದಶವಿಧದ ಘೋಷಗಳ ಬಿಂದು ಪ್ರತಾಪದಿಂ
ದಶಮನಾಗಿಯೆ ಮುಂದೆ ಡೆಂಕಣಿಯ ಹಾರಿ
ಗಸಣಿಯನು ಬಿಟ್ಟು ಕಳೆಯಿಂದೇಳು ಧಾತುಗಳ
ಎಸೆವ ದುರ್ಗಾಂತರಕೆ ತಾಗಲಿಟ್ಟವಗೆ ೪

ಒಂದು ಮುಹೂರ್ತದಲಿ ವ್ಯಸನಗಳನು ಹೂಳಿ
ಬಂಧಿಸಿಯೆ ಚಂದ್ರಾರ್ಕ ವೀಧಿಗಳ ಪ್ರಣವದೊಳು
ಮುಂದೆ ಮೂಲಾಧಾರವೆಂಬ ಅರಮನೆ ಪೊಕ್ಕು
ನಿಂದು ನಿಯಮದಿ ಸುಲಿದನದಿಷ್ಠಾನದರಮನೆಯ ೫

ಪ್ರತ್ಯಾಹಾರದಿಂ ಮಣಿಹಾರಕದ ಮನೆಯ
ಕಿತ್ತು ಕಿಚ್ಚಂ ಹಾಕಿ ಧ್ಯಾನ ಯೋಗದಿ ಬಂದ
ಮತ್ತೆ ಸಂಶುದ್ಧವೆಂಬರಮನೆಯ ಕೋಲಾಹಲದಿ
ಉತ್ತಮದ ಅಂಬಿಕಾ ಯೋಗದಿಚ್ಚೆಯೊಳು ೬

ಜ್ಞಾನ ಮಂಟಪವೆಂಬ ರಾಜ ಮನೆಯೊಳು ನಿಂತು
ಮನದೊಳು ಮೂಲ ಬಂಧದಿ ಆರು ಶಕ್ತಿಗಳ
ಹೀನವಾಗಿಹ ಗುಣತ್ರಯವೆಂಬ ಗೊಲ್ಲರನು ವ–
ಡ್ಯಾಣ ಬಂಧದಿ ಇರಿವುತಲಿ ಕ್ಷಿಪ್ರದಲಿ ೭

ಖೇಚರಿಯ ಯೋಗದಿಂ ಕರಣ ಚತುಷ್ಟಯದ
ನೀಚ ಪ್ರಧಾನಿಗಳ ನೆಗಳವನಿಕ್ಕಿ
ಸೂಚನೆಯ ಕಾಲ ಕರ್ಮದ ಕಣ್ಣುಗಳ ಕಿತ್ತು
ಯೋಚನೆಯ ಮಾಡಿದನು ವೀರಾಸನದೊಳು ೮

ಮಾಯಾ ಪ್ರಪಂಚವೆಂಬನ್ಯಾಯ ನಾಯಕರ
ಕಾಯ ಉಳಿಸದೆ ಸವರಿ ವಾಸ್ತಿಯಿಂದನುಗೈದು–
ಪಾಯದಿಂದಾರು ವಿಕಾರಗಳ ಕೈಗಟ್ಟಿ
ಬಾಯ ಹೊಯ್ದು ಗುರುವಿಗೆರಗುವೆನು ನಾನು ೯

ಇಪ್ಪತ್ತೊಂದು ಸಾವಿರವಾರು ನೂರಾದ
ಉತ್ಪವನ ಉಶ್ವಾಸ ನಿಶ್ವಾಸಗಳನೆಲ್ಲ
ತಪ್ಪಿಸದೆ ಕುಂಭಕದಿಂದ ಬಂಧಿಸಿಕೊಂಡು
ಒಪ್ಪುವನು ಅರೆನೇತ್ರದಿಂದ ಬೆಳಗುವನು ೧೦

ಮುನ್ನೂರ ಅರುವತ್ತು ವ್ಯಾಧಿಗಳ ಲವಳಿಯಿಂ
ಬೆನ್ನ ಬೆಳೆಸಿ ಕಪಾಲ ಭೌತಿಯಿಂದಷ್ಟಮದ
ವರ್ಣಾಶ್ರಮಂಗಳನು ಏಕವನು ಮಾಡಿಯೆ
ನಿರ್ಣಯಿಸಿಕೊಂಡು ತಾ ನೋಡುವವಗೆ ೧೧

ನುತಿಕರ್ಮದಿಂದಷ್ಟ ಆತ್ಮಕರ ಆಸನವ
ಜೊತೆಗೂಡಿ ಜಾತ ಮಧ್ಯದ ದೃಷ್ಟಿಯಿಂದ

ಅತಿವೇಗದೊಳು ನಡೆವ ಅವಸ್ಥಾತ್ರಯವೆಂಬ
ಕೃತಿ ಕುದುರೆಗಳ ಯುಕುತಿಯಲ್ಲಿ ಪಿಡಿದವಗೆ ೧೨

ನಾದದಿಂ ಪಂಚಕ್ಲೇಶ ಪ್ರಭುಗಳನು ಹೊಯ್ದು
ಕಾದು ಇರುತಿಹ ಹರಿಗಳಾರು ಬಿಂದುವಿನಿಂ
ಸಾಧಿಸುತ ಮಂತ್ರಭ್ರಮಣದಿಂದ ಮಲತ್ರಯದ
ಆದಿ ಕರಣಿಕನನ್ನು ಹಿಡಿದವನಿಗೆ ೧೩

ದಾತೃತ್ವದಿಂ ಸತ್ಯಲೋಕವನು ತಾ ಕಂಡು
ಕಾತರದಿ ಆಕಾರದುರ್ಗವನು ಹತ್ತಿ
ಓತಿರುವ ತಿರಿಕೂಟವೆಂಬ ಬಾಗಿಲ ದಾಟಿ
ಈ ತೆರದ ಮಹಾದುರ್ಗವನು ಕಂಡವಗೆ ೧೪

ಅಣು ಮಾತ್ರ ಸೂಕ್ಷ್ಮದೊಳು ನೋಡಿ ತಾ ಜ್ಞಾನದೊಳು
ಕುಣಿಯೊಳಗೆ ಆ ಪರಂಜ್ಯೋತಿ ಆಗಿರುತಿಪ್ಪ
ಗುಣನಿಧಿಯು ವರಾಹತಿಮ್ಮಪ್ಪರಾಯನನು
ಕಣು ಮನದಿ ದೃಢವಾಗಿ ನೋಡಿ ಸುಖಿಯಾದವಗೆ ೧೫

## ೧೦೦

ಸುಲಭದ ಮಾತಿದು ತಿಳಿದು ಪೇಳಿ
ಹೊಲಬುದಪ್ಪಲು ಬೇಡ ಸುಲಿಗೆಯಾಹುದು ಮುಂದೆ ಪ

ಅಂತರಿಕ್ಷದಲೊಂದು ನಿಂತಿಹ ವೃಕ್ಷವಾ–
ನಂತಾನಂತವಾದೆಲೆಗಳುಂಟು
ನಿಂತಿಹ ಎಲೆಗಳು ಬೀಳುವುದನು ನೋಡಿ
ಮಂತ್ರಿಯೊಬ್ಬನು ಕುಳಿತು ಎಣಿಸುವನಯ್ಯ ೧

ಭೂಮಿಯ ಮೇಲೊಂದು ಭೂಮಿಯು ಜನಿಸಲು
ತಾ ಮನಸೋತನು ದೊರೆಯೊಬ್ಬನು

ಪ್ರೇಮದಿ ರಾಜ್ಯವನಾಳುವ ಸಮಯಕ್ಕೆ
ಸೀಮೆಯ ಮೇಲೆಲ್ಲ ಗುಡಿಗಟ್ಟಿತಯ್ಯ ೨

ಕಡಗೋಲು ಮಿಡುಕಿತು ಒಡೆಯಿತು ಪಾತ್ರವು
ಪಿಡಿದ ಬೆಣ್ಣೆಯೊಳೊಂದು ಗಿಡ ಹುಟ್ಟಿತು
ಅಡವಿಯ ಮಧ್ಯದಿ ಹುಟ್ಟಿದ ಗಿಡವಿನ
ಎಡೆಯೊಳು ಗಿಣಿ ಬಂದು ಮರಿಯಿಕ್ಕಿತಯ್ಯ ೩

ಬಿಲ್ಲುಗಾರನು ಬಂದು ಬಲ್ಲಿದ ಪಕ್ಷಿಯ
ಮೆಲ್ಲನೆ ಕೆಡೆಯಲು ಬೇಕೆನುತ
ನೆಲ್ಲಿಯ ಎಲೆಯನ್ನು ಎಣಿಸಿ ಬೀಸಾಡುವ
ನಲ್ಲನೊಬ್ಬನು ಕಂಡು ಹೊರಗಿಟ್ಟನಯ್ಯ ೪

ಗುಡಿಯ ಬಾಗಿಲ ಮುಂದೆ ವೃಕ್ಷದ ಗಿಣಿಯನ್ನು
ಮಡದಿಯೋರ್ವಳು ಕಂಡು ಒಳಗಿಟ್ಟಳು
ಗಿಡುಗನ ಹಾವಸೆ ಒಡೆಯನು ಕಾಣುತ್ತ
ಒಡಲಾಳು ಸುರಭಿಯ ಕಟ್ಟಿದನಯ್ಯ ೫

ಮೂಗನು ಕಾಣುತ್ತ ಕೂಗ್ಯಾಡಿ ಕರೆಯಲು
ಆಗಲೇ ಕಿವುಡನು ಧ್ವನಿಯ ಕೇಳಿ
ಬೇಗದಿ ಕುರುಡನು ಬಂದು ಹಾಲೆರೆಯಲು
ಆಗಲೆ ಪಕ್ಷಿಯು ಉಂಡು ಹಾರಿತಯ್ಯ ೬

ಬುದ್ಧಿಹೀನನು ಕಂಡು ಶುದ್ಧ ಸ್ವಾಮಿಯೊಳು
ತಿದ್ದಿದ ಗುಡಿಗಳು ಬಿದ್ದಮೇಲೆ
ಎದ್ದು ಪಕ್ಷಿಯು ಹೋಗಿ ವರಾಹತಿಮ್ಮಪ್ಪನು
ಇದ್ದಲ್ಲಿಗಾಗಿಯೆ ಹಾರಿಹೋಯಿತಯ್ಯ ೭

## ಊ. ವಿಶಿಷ್ಟ ಹಾಡುಗಳು

### ೧೦೧

ಅಂಗಡಿ ಗೋವಿಂದನ್ನಣ ವಿಂಗಡಿಸಿರೊ
ಸಂಗಡಿಕ್ಕ ಬೇಡ ನೀವು ಭಂಗಬಡುವಿರಿ ಪ

ಮುಂಗಡದ ಬಡ್ಡಿಯನು ಮುಂದೆ ಕಳುಹಿಸಿ
ಅಂಗಡಿ ಗೋವಿಂದನ್ನಣ ವಿಂಗಡಿಸಿರೊ ಅ.ಪ

ಕೋಲುಗಾರನೊಬ್ಬನಲ್ಲಿ ಹೊರಟನಂತೆ
ಬೇಳುವ ಶಂಖದ ಧ್ವನಿಯ ತೋರ್ಪನಂತೆ
ಹೀಲಿಯ ಕುಂಚವು ಕಯ್ಯೊಳಿಪ್ಪುದಂತೆ
ಮೇಲೆ ಮೂರು ನಾಮ ಧರಿಸಿ ಬಪ್ಪನಂತೆ ೧

ಮೂರುಗಡುಬ ಸುಳ್ಳನಾಡಿ ಮೀರಿ ಹೋಯಿತೀ
ಸಾರಿ ಬಂದ ದೂತರಿಂಗೆ ಲಂಚ ನಡೆಯದು
ಭಾರಿಯಿಕ್ಕಿ ಕೈಗೆ ಚಿಪ್ಪಳೇರಿಸುವರು
ಸಾರಿ ಕಂಡು ಬದುಕುವರೆ ದಾರಿವೊಳ್ಳೆದು ೨

ಮೊದಲ ಪತ್ರದ್ಧಣವ ಕೊಟ್ಟು ಬದಲು ಪತ್ರವ
ಸದರ ಬಡ್ಡಿಯಿಂದ ಬರೆದು ಚದುರತನದಲಿ
ಇದಿರು ಬಿದ್ದು ಕೈಯ ಮುಗಿದುವೊದಗಿನಿಂದಲೆ
ಗದರಬೇಡ ಬನ್ನಿ ಚಿನ್ನ ವರದನಲ್ಲಿಗೆ ೩

ದುಡ್ಡು ಕೊಟ್ಟು ಮಡ್ಡಿಯನ್ನು ತೆಗೆದು ಉಂಬೆವು
ಅಡ್ಡಕೊಂಡು ಅತಿರಸವ ತೆಗೆದುಕೊಂಬೆವು
ದೊಡ್ಡ ದೋಸೆ ವ್ಯವಹಾರವ ಮಾಡಿಕೊಂಬೆವು
ಕಡ್ಡಾಯದ ಸರಕನೆಲ್ಲ ಕಂಡು ಬಿಡುವೆವು ೪

ಗಂಧಿಕಾರನಂಗಡಿ ಗೋವಿಂದನಲ್ಲಿ
ಚಂದದ ಔಷಧವನ್ನು ತಿಂಬೆವಲ್ಲಿ
ಬಂದ ಭವದ ರೋಗ ಕೊಂದೆವಲ್ಲಿ ಆತ
ಮಿಂದ ತೀರ್ಥವನ್ನು ಊರಿಗೆಂದೆವಲ್ಲಿ ೫

ಸಾಲವನ್ನು ತಿದ್ದಿ ಮುದದ ಸಾಲವನ್ನು
ನಾಲಿಗೆಯ ಪತ್ರದಿಂದ ತಂದೆವಿನ್ನು
ನೀಲದ ಮಣಿಯನೊಂದ ಕದ್ದುದನ್ನು
ಆಲಿಯೊಳಗಿಟ್ಟುಕೊಂಡು ಬಂದುದನ್ನು ೬

ಅಂಗಡಿ ಗೋವಿಂದ ಬಹಳ ಅಂಗವುಳ್ಳವ
ಮಂಗಳವ ಮಾರುವಲ್ಲಿ ಶೃಂಗಾರವುಳ್ಳವ
ಬಂಗಾರ ವ್ಯಾಪಾರದಲ್ಲಿ ತುಂಗ ವಿಕ್ರಮ
ಮುಂಗುಡಿಯ ಜನಕೆ ಅಂತರಂಗ ಕೊಡುವವ ೭

ದಾಸರಿಗೆ ಧರ್ಮವನ್ನು ಕೊಡುವನಲ್ಲದೆ
ಕಾಸು ಹೊರತು ಮೀಸಲನ್ನ ನೀಡಲರಿಯನು
ಶೇಷಗಿರಿಯವಾಸನೆಂದು ಹಾಸಿಕೊಂಬನು
ಬೇಸರನ್ನು ಕಂಡು ಸಂತೋಷವೀವನು ೮

ಸ್ವಾಮಿಯೆಂಬ ತೀರ್ಥದೊಳಗೆ ಮಿಂದೆವಲ್ಲಿ
ಭೂಮಿ ವರಾಹತಿಮ್ಮಪ್ಪನ ಧ್ಯಾನದಿಂದಲಿ
ಕಾಮಿತ ವ್ಯಾಪಾರವನ್ನು ತಂದೆವಿಲ್ಲಿ
ಆ ಮಹಾ ಚಂದ್ರಾರ್ಕವಾಗಿ ಬಾಳುವಲ್ಲಿ ೯

## ೧೦೨

ಅರೋಗಣೆಯ ಮಾಡೊ ಅಂಜನಾದ್ರಿಯ ವಾಸ
ಆಲಸ್ಯವೇತಕೋ ಆಯಿತು ವೆಂಕಟೇಶ ಪ

ತಳಿಗೆಯ ತೊಳೆದಿಟ್ಟು ಸುಳಿಬಾಳೆ ಎಲೆಯಿಕ್ಕಿ
ನಳಿನಲೋಚನೆಯರುಗಳಿಂದ ಅಭಿಘರಿಸಿ
ಎಳೆಯ ಮಾವಿನ ಮಿಡಿಯು ಉಪ್ಪು ಬೇವಿನ ಸೊಪ್ಪು
ಹುಳಿಗೂಡಿ ಅರೆದಿಟ್ಟ ಶುಂಠಿ ಕಡಲೆ ಹಂಬೆ ೧

ಕಣಿಲೆ ಕಂಚಿನಕಾಯಿ ಅಣಿಲೆ ಅಂಬಟನೆಲ್ಲಿ
ಒಣಗಿದ ಮೆಣಸಿನ ಉರಿಯು ಉಪ್ಪಿನ ಹೆರೆಯು
ಪಣುವಾದ ಮಾದಳೆ ಗೆಣೆಯಾದ ಏಲಕ್ಕಿ
ಕಣುಮನಕ್ಕೊದಗಿಯೇ ಅಣಿಯಾಯಿತೆಡೆಯೊಳು ೨

ಹೆರೆದ ತೆಂಗಿನಕಾಯ ಅರೆದ ಸಾಸಿವೆಯಿಕ್ಕಿ
ಅರೆದು ಬೇಯ್ಸಿದ ಓಗರದೊಳು ಕಲಸಿಟ್ಟು
ತರಿದ ಗುಳ್ಳದಕಾಯಿ ಹಾಗಲು ಕುಂಬಳಕಾಯಿ
ಕೊರೆದ ಬಾಳೆಯಕಾಯಿ ಹುರಿದದೇ ತುಪ್ಪದಿ ೩

ಸಣ್ಣಕ್ಕಿಯೋಗರವು ಬೆಣ್ಣೆಕಾಸಿದ ತುಪ್ಪ
ಗಿಣ್ಣಲನೊರೆಹಾಲು ಸಣ್ಣ ಮೆಣಸು ಸಾರು
ಅನ್ನ ಚಿತ್ರಾನ್ನವು ಮೊಸರನ್ನ ಹೆಸರ್ಹುಗ್ಗಿ
ಉಣ್ಣಬಾರೆಲೋ ನೀನು ಇನ್ನು ತಡ ಬೇಡ ೪

ಕೇಸಕ್ಕಿಯೋಗರವು ದೋಸೆ ಪಾಯಸವನ್ನು
ಬೀಸು ಹಾರಿಗೆಯತಿರಸವು ಮಂಡಿಗೆಯು
ಕಾಸಿದ ಹಪ್ಪಳ ಕಡ್ಲೆ ಹೂರಣದೀಗ
ಏಸು ಹೋಳಿಗೆ ಬೇಕೈಸನೀ ಉಣಲೇಳು ೫

ಚಕ್ಕುಲಿ ಕರಜಿಯಕಾಯಿ ಮನೋಹರವು
ಚೊಕ್ಕ ಬಿಳಿಯ ಬೇಳೆಸುಕ್ಕಿನುಂಡೆಯು
ಸಕ್ಕರೆಯು ಬೆರಸಿರ್ದ ಕದಳಿ ರಸಾಯನವು
ಇಕ್ಕಿಸಿಕೊಳ್ಳೊ ನೀ ಮಕ್ಕಳಾಟಿಕೆ ಬೇಡ ೬

ಏಲಕ್ಕಿ ನಾಗರನಿಂಬೆ ಬೇವಿನಸೊಪ್ಪು
ಮೇಲೆ ಒಗ್ಗರಿಸಿದ ನೀರು ಮಜ್ಜಿಗೆಯು
ಹಾಲು ಮೊಸರು ಹಸಿಮಜ್ಜಿಗೆ ಸಹವಾಗಿ
ಜಲವು ಮುಟ್ಟದ ಹಾಗೆ ಬೇರೆ ಬೇರಿರಿಸಿದೆ ೭

ಗಾಯಿತ್ರಿ ಮಂತ್ರದಿಂ ತೋಯವ ಪ್ರೋಕ್ಷಿಸಿ
ಬಾಯೊಳು ಪ್ರಣವವನು ಜಪಿಸಲಾಕ್ಷಣದಿ
ರಾಯವೆಂಕಟಪತಿಯು ಆಪ್ಯಾಯನವ ಮಾಡಿ
ದಾಯವಾಗಿತ್ತನು ಭಕ್ತಜನರಿಗೆಲ್ಲ ೮

ಈ ರೀತಿಯಿಂದಲೆ ಆರೋಗಿಸುವುದೆಂದು
ವಾರಿಜನಾಭನ ಸಾರಿ ವರ್ಣಿಸಲು
ಮೋರೆಯ ಪ್ರಸಾದ ಕರೆದು ಇವನು ನಮ್ಮ
ವರಾಹತಿಮ್ಮಪ್ಪನೊಂದುಗೂಡಿರುವನು ೯

## ೧೦೩

ಇದಕೊ ಕಾಶಿಯನು ಮನವೇ
ಬೆದಕುಗೊಳ್ಳಲು ಬೇಡ ತೋರುವೆನು ಪ

ಬಲ್ಲವನಾದರೆ ಇಲ್ಲಿಯೆ ಕಾಶಿ
ಕಲ್ಲೆದೆಯಾದವನಲ್ಲವೆ ದೋಷಿ
ಎಲ್ಲವ ತಿಳುಹುವೆ ಚಲ್ವ ಸಂತೋಷಿ
ಸೊಲ್ಲ ಲಾಲಿಸಿ ಕೇಳು ಪೇಳ್ವೆ ನಿರ್ದೋಷಿ ೧

ಕಾಶಿಯ ದರುಶನವಿಲ್ಲದ ಜನರು ವಿ–
ಶೇಷವಾಗಿಯೆ ಇಲ್ಲಿ ನಡೆಕೊಂಬುತಿಹರು
ದೂಷಣ ಮಾಡದೆ ಪೋಷಿಸುವವರು
ಕಾಶಿಗಿಮ್ಮಡಿಯಾಗಿ ಲೇಸ ಪಡೆಯುವರು ೨

ವೇದವನೋದಿದ ವಿಪ್ರನೆ ಕಾಶಿ
ವಾದಗಳಿಲ್ಲದ ಸೋದರನೆ ಕಾಶಿ
ಆ ಧನ ಕೈಯೊಳು ಇದ್ದರೆ ಕಾಶಿ
ಮಾಧವ ಧ್ಯಾನವು ಮನದೊಳು ಕಾಶಿ ೩

ಅವ್ವೆ ತಂದೆಯ ಸೇವೆ ಮಾಳ್ಪುದೆ ಕಾಶಿ
ದೇವರ ಪೂಜೆಯ ನೋಳ್ಪುದೆ ಕಾಶಿ
ಜೀವರಕ್ಷಣ್ಯವ ಮಾಳ್ಪುದೆ ಕಾಶಿ
ಭಾವಶುದ್ಧತ್ವದಿ ಇಪ್ಪುದೆ ಕಾಶಿ ೪

ಗುರುಗಳಿಗೆರಗುವ ಪರಿಯೊಂದು ಕಾಶಿ
ಹಿರಿಯರ ಆಜ್ಞೆಯೊಳಿರುವುದು ಕಾಶಿ
ಪರವುಪಕಾರವು ಸ್ಥಿರವಾದ ಕಾಶಿ
ಕರೆದು ಮೃಷ್ಟಾನ್ನವನೆರೆವುದು ಕಾಶಿ ೫

ಅರಳಿಯ ವೃಕ್ಷವ ನೆಟ್ಟರೆ ಕಾಶಿ
ಕೆರೆ ಬಾವಿ ಕಟ್ಟಲು ಇಷ್ಟದ ಕಾಶಿ
ಅರವಟ್ಟಿ ನೀರಿರಿಸಲು ದೃಷ್ಟ ಕಾಶಿ
ಸಿರಿಲಕ್ಷ್ಮಿಯರಸನ ಕರೆವುದು ಕಾಶಿ ೬

ದುಷ್ಟರ ಸಂಗವ ಬಿಡುವುದೆ ಕಾಶಿ
ಕಷ್ಟದ ಮಾರ್ಗವ ತೊರೆವುದು ಕಾಶಿ
ಶಿಷ್ಟರ ಸೇರುವುದು ಇಷ್ಟದ ಕಾಶಿ
ಬೆಟ್ಟದ ಒಡೆಯನ ನೆನೆವುದೆ ಕಾಶಿ ೭

ಏಕಾದಶಿ ಉಪವಾಸವೆ ಕಾಶಿ
ಆಕಳ ದಾನವ ಮಾಳ್ಪುದೆ ಕಾಶಿ
ಬೇಕಾದುದಿದ್ದರೆ ಮನೆಯೆಲ್ಲ ಕಾಶಿ
ಕಾಕು ಸೇವೆಯಿಲ್ಲದ ಮನುಜನೆ ಕಾಶಿ ೮

ಉದಯದಿ ಸ್ನಾನವ ಮಾಳ್ಪುದೆ ಕಾಶಿ
ಪದುಮನಾಭನ ಧ್ಯಾನ ಮೃದುವಾದ ಕಾಶಿ
ಕದನವಿಲ್ಲದ ಊರ ನೋಡಲು ಕಾಶಿ
ಉದರವು ತುಂಬಲು ಬಡವಗೆ ಕಾಶಿ ೯

ರುದ್ರ ದೇವನ ಪೂಜೆ ಇದ್ದಲ್ಲಿ ಕಾಶಿ
ವಿಧ್ಯುಕ್ತ ಮಾರ್ಗದಿ ನಡೆವುದು ಕಾಶಿ
ಬದ್ಧವಾಗೈವರ ಕಟ್ಟಲು ಕಾಶಿ
ಶುದ್ಧವಾದ ಹೆಂಡತಿ ಮುದ್ದಿನ ಕಾಶಿ ೧೦

ಸನ್ಯಾಸ ಮಾರ್ಗವು ಚೆನ್ನಾದ ಕಾಶಿ
ಅನ್ಯಾಯವಿಲ್ಲದ ಅರಸನೆ ಕಾಶಿ
ಕನ್ಯಾದಾನವು ಮುನ್ನಿನ ಕಾಶಿ
ಮನ್ನಿಸಿಕೊಂಡರೆ ತನ್ನಲ್ಲೆ ಕಾಶಿ ೧೧

ಅಧ್ಯಾತ್ಮ ವಿದ್ಯೆಯ ಹೊದ್ದಲು ಕಾಶಿ
ಬದ್ಧ ನಡೆನುಡಿ ಇದ್ದರೆ ಕಾಶಿ
ಮಧ್ವರಾಯನು ಕುಳಿತಿದ್ದಲ್ಲಿ ಕಾಶಿ
ಪದುಮನಾಭನ ನೆನವಿದ್ದರೆ ಕಾಶಿ ೧೨

ದಾನದೊಳಗೆ ಸಮಾಧಾನವೆ ಕಾಶಿ
ಮಾನದೊಳಗೆ ಅಭಿಮಾನವೆ ಕಾಶಿ
ಸ್ನಾನದೊಳಗೆ ಭಕ್ತಿ ಸ್ನಾನವೆ ಕಾಶಿ
ಜ್ಞಾನದೊಳಗೆ ಶುದ್ಧಜ್ಞಾನವೆ ಕಾಶಿ ೧೩

ದೇವರೊಳಗೆ ಸಾಲಿಗ್ರಾಮವೆ ಕಾಶಿ
ಜೀವರೊಳಗೆ ಗೋವುಚಯವೆಲ್ಲ ಕಾಶಿ
ಭಾವಿಸಿ ನೋಡಲು ತುಳಸಿಯೆ ಕಾಶಿ
ಹೂವಿನೊಳಗೆ ಬಿಲ್ವಪತ್ರಿಯೆ ಕಾಶಿ ೧೪

ಹಲವು ಮಾತುಗಳೇನೀಪರಿ ಕಾಶಿ
ಛಲ ಭಕ್ತಿಯಿದ್ದರೆ ಜಲವೆಲ್ಲ ಕಾಶಿ
ಒಲವುಳ್ಳ ವರಾಹತಿಮ್ಮಪ್ಪನೆ ಕಾಶಿ
ಕುಲವೃಕ್ಷವೆಂಬುದು ಫಲವಾದ ಕಾಶಿ ೧೫

## ೧೦೪

ಕರುಣಿಸೈ ಗುರುರಾಯ ಚರಣತೀರ್ಥವನು
ಹರಣ ಭಯದೊಳು ಲಕುಮೀರಮಣನೊಲಿವಂದದಲಿ ಪ

ದೇಶ ದೇಶವ ತಿರುಗಿ ಬೇಸರದು ಈ ಚರಣ
ಭೂಸುರವ ಪೂಜಿಸುವದು ಈ ದಿವ್ಯ ಚರಣ
ಕ್ಲೇಶವೆನಿಸದೆ ತೀರ್ಥದಾಸೆಯ ಬಿಡದ ಈ ಚರಣ
ಕಾಶಿ ರಾಮೇಶ್ವರಕೆ ನಡೆದ ಚರಣ ೧

ಹಾವಿಗೆಯನೊಲ್ಲದೆ ಹಾದಿ ನಡೆದಿಹ ಚರಣ
ದೇವಿ ಭಾಗೀರಥಿಗೆ ಇಳಿದ ಚರಣ
ಕಾವಿ ವಸ್ತ್ರವನುಟ್ಟ ಕಾಶಿವಾಸಿಯ ಚರಣ
ಕೋವಿದರು ವಂದಿಸುವ ದಿವ್ಯ ಚರಣ ೨

ಗಟ್ಟಿ ಬೆಟ್ಟವ ತಿರುಗಿ ಕಷ್ಟಬಟ್ಟಿಹ ಚರಣ
ಸೃಷ್ಟಿಗುತ್ತಮ ನದಿಯ ಮಿಂದ ಚರಣ
ಇಷ್ಟಗಳನೆಲ್ಲ ತಾ ಪಡೆದುಕೊಂಡಿಹ ಚರಣ
ಕೃಷ್ಣಮೂರ್ತಿಯ ಬಳಿಗೆ ಬಂದ ಚರಣ ೩

ಶುದ್ಧ ವೈಷ್ಣವರೆಲ್ಲ ಉಜ್ಜಿ ತೊಳೆವ ಚರಣ
ಬದ್ಧ ಮುಕ್ತರಿಗೆಲ್ಲ ಸಿದ್ಧಿಯಹ ಚರಣ
ಮಧ್ವರಾಯನ ಮತದಿ ಎದ್ದು ತಿರುಗುವ ಚರಣ
ವಿದ್ಯನಿಧಿ ಗುರುರಾಯ ಬಾಳ್ದ ಚರಣ ೪

ಧರಣಿಯನು ಬಲವಂದು ದಣಿದು ಬಂದಿಹ ಚರಣ
ಉರುತರದ ಕೈವಲ್ಯ ಪಡೆದ ಚರಣ
ವರಾಹತಿಮ್ಮಪ್ಪನಿಹ ಗಿರಿಯನೇರಿದ ಚರಣ
ಸ್ಥಿರವಾಗಿ ಉಡುಪಿಯೊಳು ನಿಂದ ಚರಣ ೫

## ೧೦೫

ಜ್ಞಾನವಾವುದು ಅಜ್ಞಾನವಾವುದು
ಮಾನವಾವುದು ದುಮ್ಮಾನವಾವುದು ಪ

ಹರಿಯ ಸ್ಮರಣೆಯಿರಲದೊಂದು ಜ್ಞಾನವಲ್ಲವೆ
ಕೊರಳ ಸೆರೆಯ ಕಾಣದಿಪ್ಪುದಜ್ಞಾನವಲ್ಲವೆ
ಪರರ ಸತಿಯ ತೊರೆವುದೊಂದು ಮಾನವಲ್ಲವೆ
ಪರರ ಸೇವೆಗಿರುವದವಮಾನವಲ್ಲವೆ ೧

ಧನ್ಯರನ್ನು ಮನ್ನಿಸುವುದು ಜ್ಞಾನವಲ್ಲವೆ
ಹೊನ್ನ ಹುದಿದು ಅನ್ನ ತೊರೆವುದಜ್ಞಾನವಲ್ಲವೆ
ತನ್ನ ಸತಿಯ ಕೂಡಿಯಿರಲು ಮಾನವಲ್ಲವೆ
ಅನ್ಯರೊಡವೆ ಕಳುವುದವಮಾನವಲ್ಲವೆ ೨

ಹಸಿದವರನು ಕಂಡು ಯಿಕ್ಕಲು ಜ್ಞಾನವಲ್ಲವೆ
ಹುಸಿಕನಾಗಿ ಅಸತ್ಯ ಮಾಳ್ಪುದು ಅಜ್ಞಾನವಲ್ಲವೆ
ಹಸನವಾಗಿ ನಡೆವ ಕೃತ್ಯ ಮಾನವಲ್ಲವೆ
ಎಸೆವ ಜೂಜು ತಪ್ಪಲವಮಾನವಲ್ಲವೆ ೩

ಸ್ಥಿರವಿದಲ್ಲವೆಂಬ ಜೀವಿ ಜ್ಞಾನಿಯಲ್ಲವೆ
ನರಕ ಭಯವ ಮರೆವ ಜಡನಜ್ಞಾನಿಯಲ್ಲವೆ
ಹಿರಿಯರಿಂದ ಅನಿಸಿಕೊಂಬುದು ಮಾನವಲ್ಲವೆ
ಬರಿಯ ಕ್ಷುದ್ರವೆಸಗಲವಮಾನವಲ್ಲವೆ ೪

ಕ್ರೋಧವನ್ನು ತೊರೆದ ಮನುಜ ಜ್ಞಾನಿಯಲ್ಲವೆ
ವೇದವನ್ನು ಜರೆದ ನರನಜ್ಞಾನಿಯಲ್ಲವೆ
ಸೋದರರು ಕೂಡಿಯಿರಲು ಮಾನವಲ್ಲವೆ
ಮಾದಿಗರ ಸಂಗವದವಮಾನವಲ್ಲವೆ ೫

ಗುರು–ಹಿರಿಯರನುಸರಿಸೆ ಜ್ಞಾನವಲ್ಲವೆ
ಸಿರಿಯ ವೇಶ್ಯಸ್ತ್ರೀಗೆ ಕೊಡಲಜ್ಞಾನವಲ್ಲವೆ
ದೊರೆಯು ಕರೆದು ಉಚಿತವೀಯೆ ಮಾನವಲ್ಲವೆ
ತಿರುಕರಂತೆ ತಿರಿವುದು ಅವಮಾನವಲ್ಲವೆ ೬

ವರಾಹತಿಮ್ಮಪ್ಪ ಒಲಿದರದು ಜ್ಞಾನವಲ್ಲವೆ
ಮರೆದು ಕ್ಲೇಶಕೆರಗುವುದಜ್ಞಾನವಲ್ಲವೆ
ಕರೆದು ಪರರಿಗಿಕ್ಕುವುದು ಮಾನವಲ್ಲವೆ
ಕರೆಕರೆಯ ಮಾತು ಅವಮಾನವಲ್ಲವೆ ೭

## ೧೦೬

ನೋವುಗಳ ತಾಳಲಾರೆ ನೊಂದುಕೊಂಡು ಇರಲಾರೆ
ಕಾವುದಯ್ಯ ವೆಂಕಟೇಶ ಕರುಣದಿಂದೆನ್ನ ಪ

ಕಣ್ಣಿಗೆ ಕಾಣದ ನೋವು ಹುಣ್ಣುಗಳಿಲ್ಲದ ನೋವು
ಬಣ್ಣವು ಮಾಸಿದ ನೋವು ಬಲುಹಾದ ನೋವು
ಎಣ್ಣಿದುಯಿಲ್ಲದ ನೋವು ಎಣಿಕೆಗೊಳ್ಳದ ನೋವು
ಬಣ್ಣನೆ ನುಡಿಯ ನೋವು ಬಂದೀತು ನೋವು ೧

ದುಷ್ಟರಿಂದ ನೊಂದ ನೋವು ಹೊಟ್ಟೆಯೊಳ್ಹುಟ್ಟಿದ ನೋವು
ಕಷ್ಟಗಳ ಬಿಟ್ಟ ನೋವು ಕಡುಹಾದ ನೋವು
ನಿಷ್ಠುರದ ನುಡಿಯ ನೋವು ನಿಂದೆಯ ಮಾತಿನ ನೋವು
ಇಷ್ಟರು ಇಲ್ಲದ ನೋವು ಇಂತಾದ ನೋವು ೨

ಬಡವನಾಗಿಹ ನೋವು ಒಡೆಯರಿಲ್ಲದ ನೋವು
ಕೇಡುಗರ ನುಡಿಯ ನೋವು ಕೆಟ್ಟಿಹ ನೋವು
ಪಡೆದ ಕರ್ಮದ ನೋವು ಪಾಪವೆಂಬುದು ನೋವು
ಕಡೆಯ ಕಾಲದ ನೋವು ಕಾಳಾಹಿ ನೋವು ೩

ವಿದ್ಯೆವಿಲ್ಲದ ನೋವು ಬುದ್ಧಿ ಕೆಟ್ಟಿಹ ನೋವು
ಸಿದ್ಧಿಯಿಲ್ಲದ ನೋವು ಸಿಟ್ಟೊಂದು ನೋವು
ಇದ್ದುಯಿಲ್ಲದ ನೋವು ಇಚ್ಛೆಗೊಳ್ಳದ ನೋವು
ಬದ್ಧವಾಗಿಹ ನೋವು ಬಳಲುವ ನೋವು ೪

ಇಂತು ನೋವುಗಳೆನ್ನ ಭ್ರಾಂತಿಯನು ಬಡಿಸುತಿವೆ
ಪಂಥ ಬೇಡವೊ ಲಕ್ಷ್ಮಿಕಾಂತಯೆನ್ನಯ ಬಳಿಗೆ
ಅಂತರಂಗದಿ ಬಂದು ಚಿಂತಿತಾರ್ಥವನೀಯೊ
ಯಂತ್ರದಾಯಕನಾದ ವರಾಹತಿಮ್ಮಪ್ಪರಾಯ ೫

## ೧೦೭

ಬೂದಿಯ ಹಚ್ಚಿರೊ ಶುದ್ಧ ವೈಷ್ಣವರಿದ-
ರಾದಿಯ ತಿಳಿಯಲು ಕೇಳಿ ಬಲ್ಲವರು ಪ

ಮೂಲಾಗ್ನಿಯಿಂದಲೆ ಸುಟ್ಟಿಹ ಬೂದಿ
ಮೂಲ ಮಂತ್ರಂಗಳ ಜಪಿಸುವ ಬೂದಿ
ಮೂಲಾಧಾರವ ತೋರುವ ಬೂದಿ
ಕಾಲ ಕರ್ಮಂಗಳ ಕಡಿವಂಥ ಬೂದಿ ೧

ಏಳು ಸುತ್ತಿನ ಒಳಗೆ ಇರುವಂಥ ಬೂದಿ
ಏಳು ವೈರಗಳನ್ನು ಕಳೆವಂಥ ಬೂದಿ

ಏಳು ಅಗಳ ದಾಟಿ ಹಾರುವ ಬೂದಿ ಬ-
ಹಳ ಜ್ಞಾನಿಗಳೆಲ್ಲ ಧರಿಸುವ ಬೂದಿ ೨

ಒಂಭತ್ತು ಕಡೆಯಿಂದ ಒಲಿದಿಟ್ಟ ಬೂದಿ
ಕುಂಭಕದೊಳಗದ ಇರಿಸುವ ಬೂದಿ
ಸಂಭ್ರಮದಿ ಅರಸನ ಗೆಲುವಂಥ ಬೂದಿ
ಅಂಬರಕಾಗಿಯೆ ಲಂಬಿಪ ಬೂದಿ ೩

ಪಂಚಾಗ್ನಿಯಿಂದಲೆ ಬೆಂದಿಹ ಬೂದಿ
ಪಂಚತತ್ವಂಗಳನು ಗೆಲುವಂಥ ಬೂದಿ
ಪಂಚ ಮೃತ್ಯುಗಳನ್ನು ಕಳೆವಂಥ ಬೂದಿ
ವಂಚಿಸಿಕೊಳ್ಳದೆ ಧರಿಸುವ ಬೂದಿ ೪

ಆರು ವೈರಿಗಳನ್ನು ತೂರುವ ಬೂದಿ
ಆರು ಭಾವಗಳನ್ನು ಬೇರಿಟ್ಟ ಬೂದಿ
ಆರು ಭ್ರಮೆಗಳನ್ನು ಕಡಿದಿಟ್ಟ ಬೂದಿ
ಆರಿಗೂ ತೋರದೆ ಹಾರುವ ಬೂದಿ ೫

ಅಷ್ಟಮದಂಗಳ ಕಟ್ಟುವ ಬೂದಿ
ದುಷ್ಟಾತ್ಮರನ್ನು ಅಟ್ಟುವ ಬೂದಿ
ಕುಟ್ಟೆ ಹಿಡಿವ ಬೀಜಕಿಟ್ಟಿಹ ಬೂದಿ
ಭ್ರಷ್ಟಕರ್ಮಗಳನ್ನು ಸುಟ್ಟಂಥ ಬೂದಿ ೬

ಸಕಲ ಋಷಿಗಳೆಲ್ಲ ಧರಿಸುವ ಬೂದಿ
ತ್ರಿಕರ್ಣ ಶುದ್ಧದಿ ತುಂಬಿದ ಬೂದಿ
ಮಕರಕುಂಡಲಧರ ಮರುಳಹ ಬೂದಿ
ಸಖನಹ ವರಾಹತಿಮ್ಮಪ್ಪ ಬೂದಿ ೭

## ೧೦೮

ಮರಳುತನವು ಬಂದು ಎನ್ನ ಕೊರಳ ಕೊಯ್ವುದು
ದುರುಳನಾಗಿ ಇರುಳು ಹಗಲು ಒರಲುತಿಪ್ಪುದು ಪ

ಮಾರಿಯನ್ನು ಮನೆಗೆ ತಂದು ತೋರಿಯಿಡುವುದು
ಚೋರರನ್ನು ತಂದು ತನಗೆ ಸೇರಿ ಕೊಡುವುದು
ದೂರುಬಪ್ಪ ದಾರಿಯನ್ನು ಸೇರಿ ನಡೆವುದು
ಸಾರಿ ಪರನಾರಿಯನ್ನು ಸೂರೆಗೊಂಬುದು ೧

ಹೆಂಡತಿಯ ಸುಲಿದು ತನ್ನ ಮಿಂಡಿಗಿಡುವುದು
ಕಂಡು ಕಂಡು ಹರುಷ ತಾಳಿ ಕೊಂಡುಯಿರುವುದು
ಭಂಡತನದಿ ಕೊಂದು ದೂರ ಕೊಂಡು ಪೋಪುದು
ಉಂಡು ಉಡುವ ಹರುಷ ಸರಿಯ ಮಿಂಡಿಗಪ್ಪುದು ೨

ಸೂಳೆಯನ್ನು ಕಂಡು ಹರುಷ ತಾಳಿಯಿರುವುದು
ವೇಳೆಗವಳು ಬಾರದಿರಲು ಚೀ[ರಿ]ಯಳುವುದು
ಹಾಳು ಬದುಕಿನೊಳಗೆ ಬಹಳ ಚಾಳು ತೋರ್ವುದು
ಖೂಳರನ್ನು ಕರೆದು ಅನ್ನ ಪಾಲನೆರೆವುದು ೩

ಇಲಿಯು ಹೆಚ್ಚಿತೆಂದು ಮನೆಗೆ ಉರಿಯನಿಡುವುದು
ಚಳಿಯು ಹೋಯಿತೆಂದು ಮನದಿ ನಲಿವುತಿರುವುದು
ಬಿಳಿದು ಬೂದಿಯನ್ನು ಕೊಂಡು ಹೊಳೆಗೆ ಬಿಡುವುದು
ಸ್ಥಳವ ಕೆಡಿಸಿ ಕುಲವನೆಲ್ಲ ಬಳಕೆ ತೀರ್ಪುದು ೪

ಹೆತ್ತ ಮಗನ ತೊರೆದು ತಾನು ದತ್ತ ತಪ್ಪುದು
ಸತ್ತ ಎಮ್ಮೆ ಹಾಲು ಹತ್ತು ಸೇರಿಗಳವುದು
ಕತ್ತಿಯನ್ನು ಬಿಸುಟು ಒರೆಯ ಹತ್ತಿರಿಡುವುದು
ಶತ್ರುವಾಗ ಬಂದ ತನ್ನ ಒತ್ತಿ ನಿಲುವುದು ೫

ಗಾಳವಿಲ್ಲದೆ ಮೀನುಗಳ ಮೇಲೆ ತೆಗೆವುದು
ಕೋಲುಯಿಲ್ಲದ ಕೊಲೆಗಳೆನ್ನ ಮೇಲೆ ಬೀಳ್ವುದು
ಸಾಲವನ್ನು ಕೊಟ್ಟವರು ಸಾಯಲೆಂಬುದು
ಕಾಲನೊಳು ಕೈಯ ಕಟ್ಟಿ ಶೂಲೆ ತಪ್ಪುದು ೬

ಸರ್ವತಂತ್ರವೆಲ್ಲ ಹರಿಯ ಹತ್ತಿರಿಡುವುದು
ಗರ್ವವನ್ನು ತೋರಲವನ ಸುತ್ತಿ ಬರುವುದು
ಇರುವೆಯಂತೆ ಮೈಯನೆಲ್ಲ ಕುತ್ತಿ ತರಿವುದು
ತೋರ ವರಾಹತಿಮ್ಮಪ್ಪನ ಎತ್ತಿ ನೆನೆವುದು ೭

## ೧೦೯

ವ್ಯರ್ಥದಲಿ ತೋರುವನೆ ತ್ರೈಲೋಕ್ಯಕರ್ತ
ಭಕ್ತನಾದರೆ ಪರಮ ಮುಕ್ತಿ ಸೇರುವುದು ಪ

ಉತ್ತಾನ ಭೂಪತಿಯ ಪುತ್ರನಂತಿರಬೇಕು
ಸತ್ಯವೊಂದಿರಬೇಕು ಹರಿಶ್ಚಂದ್ರನಂತೆ
ಭಕ್ತಿರಸವಿರಬೇಕು ಪ್ರಹ್ಲಾದನಂತೆ
ಹಸ್ತವಿರಬೇಕು ಶ್ರೀರಾಮ ಭಕ್ತನಂತೆ ೧

ವ್ರತವ ಮಾಡಲು ಬೇಕು ಅಂಬರೀಶನ ಪರಿಯ
ಪಥವ ನಡೆಯಲು ಬೇಕು ವಿಹಗನಂತೆ
ಶತಮುಖವ ರಚಿಸಿದರೆ ಪುರುಹೂತನಂತಿಹನು
ಯತಿಯಾಗಬೇಕು ಗುರುಮಧ್ವಪತಿಯಂತೆ ೨

ಗೀತಸೇವನೆ ಬೇಕು ನಾರದರ ತೆರನಂತೆ
ಪ್ರೀತನಾಗಲು ಬೇಕು ಪಾರ್ಥನಂತೆ
ನೀತಿಶಾಸ್ತ್ರವು ಬೇಕು ಶುಕಶೌನಕರಂತೆ
ಖ್ಯಾತಿಯಿರಬೇಕು ರವಿಜಾತನಂತೆ ೩

ಶುದ್ಧನಾಗಿರಬೇಕು ಉದ್ಧವನ ತೆರನಂತೆ
ಬದ್ಧನಾಗಿರಬೇಕು ಅಕ್ರೂರನಂತೆ
ಹೊದ್ದಿಕೊಂಡಿರಬೇಕು ಫಣಿರಾಜನಂದದಲಿ
ಮುದ್ದಾಗಿಯಿರಬೇಕು ಆ ವಿದುರನಂತೆ ೪

ವೇದವೋದಲು ಬೇಕು ವ್ಯಾಸಮುನಿಯಂದದಲಿ
ಆದರಿಸಬೇಕು ತಾ ಧರ್ಮನಂದದಲಿ
ಪಾದಪೂಜೆಯು ಬೇಕು ಲಂಕಾಧಿಪತಿಯಂತೆ
ಭೇದ ನೋಡಲು ಬೇಕು ವಸಿಷ್ಠನಂತೆ ೫

ಸ್ಮೃತಿಯ ನೋಡಲು ಬೇಕು ಪಾರಾಶರಂದದಲಿ
ಮಿತಿಯಿರಲು ಬೇಕು ಆ ಭೀಷ್ಮನಂದದಲಿ
ಜೊತೆಯಾಗಿಯಿರಬೇಕು ಪುಂಡರೀಕನ ತೆರದಿ
ವ್ರತವಿರಲು ಬೇಕು ರುಕುಮಾಂಗನಂದದಲಿ ೬

ದಾನ ಮಾಡಲು ಬೇಕು ಬಲಿಯ ಪ್ರೌಢಿಕೆಯಿಂದ
ಧ್ಯಾನವಿರಬೇಕು ಋಷಿ ಗಾರ್ಗ್ಯನಂದದಲಿ
ಪ್ರಾಣ ಸಂದೇಹದೊಳು ಕರಿರಾಜನಂದದಲಿ
ಕಾಣಬೇಕಾ ಹರಿಯ ಅಜಮಿಳನ ತೆರದಿ ೭

ಜಪಗಳನು ತಪಗಳನು ದಾನಧರ್ಮಂಗಳನು
ಅಪರೂಪವಾಗಿರ್ದ ಪೂಜೆಗಳನು
ಉಪವಾಸವನು ಮಾಡಿ ವ್ರತ ನೇಮ ನಿಷ್ಠೆಗಳ
ಕಪಟವಿಲ್ಲದೆ ರಚಿಸಿ ಕಂಡರ್‍ಯೆ ನಿನ್ನ ೮

ಇವರಂತೆ ನೋಡುವರೆ ಸ್ಥಿರವಿಲ್ಲ ಬುದ್ಧಿಗಳು
ಇವರ ದಾಸರ ದಾಸ ದಾಸ ನಾನು
ಇವರ ಸ್ಮರಣೆಯು ನಿತ್ಯ ಮನದೊಳಗೆ ನಿಲುವಂತೆ
ಭಾವಿಸ್ಯೆ ಕೋನೇರಿ ವರಾಹತಿಮ್ಮಪ್ಪ ೯

## ೧೧೦

ಸ್ಮಾರ್ತರು ನಾಮವ ಧರಿಸಿ ಯಥಾರ್ಥವು
ಹರಿನಾಮವ ಬಹಳ ವಿಸ್ತರಿಸಿ ಪ

ಕಣ್ಣಿಗೆ ಕಾಣದೆ ಪೂರ್ಣವಾಗಿಹ ನಾಮ
ಚನ್ನಕೇಶವ ರಾಯನೆಂದೆಂಬ ನಾಮ
ಉನ್ನತವಾಗಿಹ ನಾರಾಯಣ ನಾಮ
ಮನ್ಮಥನಯ್ಯನ ಮಾಧವ ನಾಮವ ೧

ಅಂತರಂಗದಿ ಗೋವಿಂದನ ನಾಮವ
ಚಿಂತಿಸಿ ವಿಷ್ಣುವ ಸಿರಿ ನಾಮವ
ಸಂತತ ಮಧುಸೂದನನೆಂಬ ನಾಮವ
ಪಂಥವಿಡಿದು ತ್ರಿವಿಕ್ರಮ ನಾಮವ ೨

ಮನದೊಳು ಅನುದಿನ ವಾಮನ ನಾಮವ
ವನಜಾಕ್ಷ ಶ್ರೀಧರ ಗುಣ ನಾಮವ
ವಿನಯದಿ ಹೃಷಿಕೇಶನೆನುತಿಹ ನಾಮವ
ತನುವಾದ ಪದುಮನಾಭನ ನಾಮವ ೩

ಅಂದದೊಳು ಧರಿಸಿರುವ ದಾಮೋದರ ನಾಮ
ಚಂದದಿ ವಾಸುದೇವನ ನಾಮವ
ಕುಂದದೆ ಸಂಕರ್ಷಣನೆಂಬ ನಾಮವ
ಬಂಧನ ಪರಿಹಾರ ಪ್ರದ್ಯುಮ್ನ ನಾಮವ ೪

ಅರ್ಥಿಯಿಂದಲೆ ಅನಿರುದ್ಧನ ನಾಮವ
ಉತ್ತಮ ಪುರುಷೋತ್ತಮ ನಾಮವ
ಭಕ್ತಿಯಿಂದಲೆ ಅಧೋಕ್ಷಜನೆಂಬ ನಾಮವ
ಮೃತ್ಯುವು ಕಾಣದ ನರಹರಿ ನಾಮವ ೫

ಆಶ್ಚರ್ಯವಾಗಿಹ ಅಚ್ಯುತ ನಾಮವ
ನಿಶ್ಚಯಿಸಿ ಜನಾರ್ದನ ನಾಮವ
ಬಚ್ಚಿಡಬೇಡ ಉಪೇಂದ್ರನ ನಾಮವ
ಹಚ್ಚಿರೊ ಹರಿಯೆಂಬ ಸಿರಿ ನಾಮವ ೬

ದುಷ್ಟನಿಗ್ರಹವಾದ ಕೃಷ್ಣನ ನಾಮವ
ಬೆಟ್ಟದ ವರಾಹತಿಮ್ಮಪ್ಪನ ನಾಮವ
ಇಟ್ಟುಕೊಂಡರೆ ಅನುದಿನ ಘನ ನಾಮವ
ಸೃಷ್ಟಿಯೊಳು ಉತ್ತಮ ಸ್ಮಾರ್ತನೆ ವೈಷ್ಣವ ೭

## ಎ. ದೀರ್ಘ ಕೃತಿಗಳು

### ೧೧೧

ಏಳು ವೆಂಕಟರಮಣ ಏಳು ಭವಭಯಹರಣ
ಏಳು ರವಿಶಶಿಕಿರಣ ಕೌಸ್ತುಭಾಭರಣ
ಏಳು ಅಘಸಂಹರಣ ಏಳು ಪಂಕಜಚರಣ
ಏಳಯ್ಯ ಫಣಿರಾಜಶಯನ ಏಳಯ್ಯ ಬೆಳಗಾಯಿತು ಪ

ಬಿಸಜಸಖ ತಾ ಮೂಡದೆಸೆಯೊಳಗೆ ತೋರುವನು
ಹಸನಾದ ಸೇವಕರು ಬಂದು ಎಸೆದಿಹರು
ಕುಸುಮ ಸಂಭವ ದಿನದ ಶುಭಾಶುಭವ. ಹೇಳುವನು
ವಸುಧೆ ಮಹಾಲಕ್ಷ್ಮಿಯರ ಹೂವಿನ್ಹಸೆಯೊಳಗೆ ೧

ಎಸೆವ ಮೋಹಕದಿಂದ ವಶವಾದೆಯೊ ನೀನು
ಅಸುರರನು ಮರ್ದಿಸಿಯೆ ಬಸವಳಿದೆಯೊ
ವಿಷವಾಯಿತೊ ನಿನಗೆ ಉರಗಗಿರಿಯೆಂಬುದಿದು
ಅಸಮವೀರನೆ ಸ್ವಾಮಿ ಬರವಸದೊಳು ೨

ಇಂದು ವರ್ಣದ ಗಂಗೆ ಭವನಾಶ ನೀ ಯಮುನೆ
ಸಂದ ವತ್ಸರದೊಳಗೆ ನಿಂದ ಗೋದಾವರಿಯು
ಚಂದದ ಸರಸ್ವತಿಯು ನಲವಿಂದ ನರ್ಮದಾ
ಸಿಂಧು ಕಾವೇರಿ ಸಹಿತ ೩

ಬಂದು ನಿಂದಿಹರು ಗೋವಿಂದ ಮುಖ ಮಜ್ಜನಕೆ
ಇಂದ್ರಾದಿ ಈಶರ್ರೈತಂದು ಓಲಗಿಸುವರು
ಮಂದ ಮಾರುತನು ಸುಳುವಿಂದ ಬೀಸುತಿಹನು
ಇಂದು ನೀನಹಿತಲ್ಪದಿಂದ ೪

ಕಡಗೋಲ ಬೀಸಣಿಗೆ ಚಾಮರವು ಮಡಿದೆಲೆಯು
ಮಡದಿಯರು ಕೈಯೊಡನೆ ಪಿಡಿದು ನಿಂದಿಹರೀಗ
ಕಡೆಯ ಬಾಗಿಲ ಹನುಮ ಕಾಳ ಭೈರವ
ತಮ್ಮ ಸಡಗರದ ವೀಳೆಯವ ತಂದಿರುವರು ೫

ಬಡಿವ ದುಂದುಭಿ ವಾದ್ಯ ಶಂಖ ಜಯ ಗಂಟೆಗಳು
ಕಡೆದ ಮದ್ದಳೆ ತಾಳ ಸಾಲು ನಾಟ್ಯಗಳಿಂದ
ಪೊಡವೀಶ ನೀನೇಳ್ವ ಬರವ ಹಾರೈಸುವರು
ತಡಮಾಡದಡಿಯ ತೋರೈ ೬

ತುಂಬುರರು ನಾರದರು ಗೀತವನು ಪಾಡುವರು
ರಂಭೆ ಉರ್ವಶಿಯರು ನಾಟ್ಯವನು ಆಡುವರು
ಅಂಬುಜಾಕ್ಷನೆ ನಿನ್ನ ನಂಬಿದ ಜನರು ಧ್ವಜ
ಸ್ತಂಭದೊಳು ಜಯವೆನುತಲೆ ೭

ಬೆಂಬಿಡದೆ ಸಲಹಬೇಕೆಂದೆಂಬ ಸ್ತುತಿಗಳಾ-
ಡಂಬರದಿ ಪಾಡುವರು ಕೈಮುಗಿದು ನಿನ್ನ ಕರು-
ಣಾಂಬುಧಿಯೆ ಸೇವೆಯನು ಕೈಕೊಂಡು ಭಕ್ತರನೊ
ಡಂಬಡಿಸಲೇಳಬೇಕೈ ೮

ಮಾಲತಿಯು ಮಂದಾರ ಸುರಹೊನ್ನೆ ಸಂಪಿಗೆಯು
ಮಾಲೆಯಾಗಿರ್ದ ಅರಳು ಮಲ್ಲಿಗೆಯು ಮರುಗಗಳು
ಕಾಲದೊಳು ಪರಿಮಳಿಪ ಜವ್ವಾಜಿ ಪಾರಿಜವು
ಬಾಲಾರ್ಕನುದಯದೊಳಗೆ ೯

ತೋರುತಿಹ ವಾರಿಜವು ಕೇತಕಿಯು ಕುಂದಗಳು
ಸಾಲಾಗಿ ಪರಿಮಳಿಪ ಕುಸುಮಂಗಳೆಲ್ಲವನು
ಬಾಲೆಯರು ಕೊಯ್ತಂದು ಪಿಡಿದು ನಿಂದಿಹರೀಗ
ಏಳಯ್ಯ ವೆಂಕಟೇಶ ೧೦

ಕರಣಿಕರು ಬರಹದೊಳು ಬರೆದ ಲೆಕ್ಕವನೆಲ್ಲ
ತರತರದ ವಿವರವನು ಒರೆದು ಹೇಳುವರೀಗ
ಹರಕೆ ಕಾಣಿಕೆಯಿಂದ ಪರಿಯ ಸೇವೆಗಳಿಂದ
ಬರವಾದ ಹಣಮಣಿಯನು ೧೧

ಸ್ಥಿರವಾದ ಗಣಿತದೊಳು ನೆಲೆಯಾಗಿ ಒಪ್ಪಿಸುವ
ಸಿರಿಯ ನೋಡದೆ ನೀನು ಮಲಗಿಕೊಂಡಿಹರೆನೊ
ದೊರೆಯಾದ ಪರಮಾತ್ಮ ಸಿರಿಯನೆಬ್ಬಿಸಿಕೊಂಡು
ಭರದಿಂದ ಏಳಬೇಕಯ್ಯ ೧೨

ಇಂದಿನಾ ಉದಯದೊಳು ಸಂದ ಊಳಿಗವನ್ನು
ಮುಂದೆ ಆಗುವ ಸೇವೆ ಕಾರ್ಯಕಟ್ಟಳೆಯನ್ನು
ಒಂದ ಬಿನ್ನೈಸುವರೆ ಏಳನೀ ಹರಿಯೆಂದು
ಕಂದಚಾರವು ಸುಮ್ಮನೆ ೧೩

ನಿಂದಿರಲು ಬಹುದೇಶದಿಂದ ಬಂದಿಹ ಪರಿಷೆ
ತಂದೆವೈ ಗೋವಿಂದ ನಿನ್ನ ಕಾಣಿಕೆಗಂಟ
ಎಂದು ಕರೆಯಲು ಸ್ವಾಮಿ ಇಂದಿರೆಯರಸ ಮುದ–
ದಿಂದ ಮೈಮುರಿದೆದ್ದನು ೧೪

ವಿನಿಯೋಗದವರು ತಮತಮ್ಮ ಸೇವೆಯ ಕೊಳಲು
ವನಜನಾಭನ ಮುಂದೆ ಆಗುತಿಹ ಪೂಜೆಗಳು
ಜನರೆಲ್ಲ ಕಣ್ಣಾರೆ ನೋಡಬೇಕೆಂದೆನುತ
ಮನದೊಳಗೆ ಹರುಷದಿಂದ ೧೫

ಅನುಮಾನವನ್ನುಳಿದು ಸ್ನಾನ ಜಪವನು ಮಾಡಿ
ದಿನಕರಗೆ ವಂದಿಸಿಯೆ ಪಿತೃವಿಗರ್ಘ್ಯವ ರಚಿಸಿ
ಮುನಿವಂದ್ಯ ರವಿ ಕಿರಣ ವೆಂಕಟೇಶನ ಗುಡಿಗೆ
ಮನವಿಟ್ಟು ನಡೆತಂದರು ೧೬

ಮಡಿಯಿಂದ ಶಿರದೊಳಗೆ ಮುಡುಪನೇರಿಸಿಕೊಂಡು
ಕಡಲಶಯನನ ಚರಣದೆಡೆಯಲ್ಲಿ ಅರ್ಪಿಸಿಯೆ

ಒಡನೆರಡು ಕರಗಳನು ಮುಗಿದು ತೀರ್ಥವ ಕೊಂಡು
ಬಲಬಂದು ಅಡಿಗೆರಗಿಯೆ ೧೭

ಒಡಲೊಳಗೆ ಅಡಗಿರ್ದ ಪಾಪಂಗಳೆಲ್ಲವನು
ಕಡಿದುಕೊಡಬೇಕೆನುತ ಬೇಡಿಕೊಂಡಲ್ಲಿಂದ
ಪೊಡಮಟ್ಟು ಬೀಡಾರದೆಡೆಯ ಮಂದಿರಕಾಗಿ
ಪದಪಿನಿಂದೈತಪ್ಪುದು ೧೮

ಒಂಬತ್ತು ದಿನದಲ್ಲಿ ನಂಬಿಕೊಂಡಿರುತಿರ್ದ ಆ
ಡಂಬರದ ವಾಹನೋತ್ಸಹಗಳೆಲ್ಲವ ನೋಡಿ
ತುಂಬಿ ಭ್ರಮಿಸುವ ಕಮಲಸಂಭವನು ಹೂ ರಥಕ್ಕೆ
ಅಂಬುಜಾಕ್ಷನು ಏರುವ ೧೯

ಇಂಬಾದ ಬೀದಿಯೊಳು ಸುಪ್ರದಕ್ಷಿಣಗೈದು
ಕುಂಭದೊಳು ಕಾಣಿಕೆಯ ತುಂಬಿಕೊಂಡಂತಪ್ಪ
ಸಂಭ್ರಮದ ಮೂರ್ತಿಯನು ಹಂಬಲಿಸಿ ಮನದೊಳಗೆ
ನಂಬಿಕೊಂಡಿರುತಿಪ್ಪುದು ೨೦

ಉದಯಕಾಲದೊಳೆದ್ದು ಸದಮಲಾತ್ಮಕನೆನಿಸಿ
ಚದುರದೀ ಪದನ ಹೇಳಿದರೆ ಕೇಳಿದರೆ
ಒದಗಿದಿಷ್ಟಾರ್ಥಗಳು ಸೇರುವುದು ಮಹಾಲಕ್ಷ್ಮಿ
ಸದನದೊಳಗಿರುತಿಪ್ಪಳು ೨೧

ಮುದದಿಂದ ವರಾಹತಿಮ್ಮಪ್ಪ ಸಹವಾಗಿ
ಬೆದರಬೇಡೆಂದೆನುತ ಅಭಯವನು ನೀಡುತಲೆ
ಮುದವ ತೋರಿಸಿ ಮುಂದೆ ಗೃಹವಾಸವಾಗಿಹ ಶು
ಭೋದಯವ ಪಾಲಿಸುವನು ೨೨

## ತಿರುಪತಿ ಯಾತ್ರೆ

### ೧೧೨

ನಾರಾಯಣ ನಾರಾಯಣ
ನಾರಾಯಣ ನಾರಾಯಣ ಪ

ಗಣನಾಥಗೆರಗಿಯೆ ತ್ರಿನಯಗೆ ವಂದಿಸಿ
ಫಣಿವೇಣಿ ಶಾರದೆಯರಿಗೆ ಕೈಮುಗಿದು
ಫಣಿಗಿರಿವಾಸನ ಯಾತ್ರೆಯ ಯೋಚಿಸಿ
ಅಣಿಯಾಗಿ ಹೊರಡುತ್ತ ಗುಣವ ವರ್ಣಿಸುವೆ ೧

ದಾಸರು ಕೇಳಿಯೆ ಲೇಸಾಗಿ ಹರುಷದಿ
ಪ್ರಾಸು ತಪ್ಪಿದರಿದ ಪೇಳಿ ತಿದ್ದುವುದು
ಆಸುರವಾಗಿಹ ಸಾಸಿರ ನಾಮನ
ದೋಷರಹಿತರಾಗಿ ಹೋಗಿ ನೋಡುವುದು ೨

ಸ್ಥಿರವಾರ ದಿವಸದಿ ಕರೆತಂದು ದಾಸರ
ಹಿರಿಯರ ಮತದಿಂದ ಹರಿದಿವಸಗಳ
ಕರೆದು ಭೂಸುರರನ್ನು ಎರೆದು ಮೃಷ್ಟಾನ್ನವ
ಹರಕೆಯ ಧರಿಸುತ್ತ ಹೊರಡುವ ಪರಿಯ ೩

ಪ್ರಾಣಸಂಕಟದೊಳು ಆಣೆಪೂರ್ವಕವಾದ
ಕಾಣಿಕೆಗಂಟನು ಕಟ್ಟಿ ಚೀಲದೊಳು
ಜಾಣರಾಗಿಯೇ ಹಾದಿ ಕಾಣಬಲ್ಲವರನ್ನು
ತ್ರಾಣಗುಂದದ ಹಾಗೆ ಮಾಣಿಸುವವರ ೪

ಕಳ್ಳ ಕಾಕರು ಇಲ್ಲದ ಹಾಗೆ
ಎಳ್ಳಷ್ಟು ನೋವುಗಳು ಆಗದ ಹಾಗೆ
ಉಳ್ಳಷ್ಟು ಮಾರ್ಗದಿ ನಡೆಸುತ್ತ ನಮ್ಮ
ಹಳ್ಳಿಪಳ್ಳಿಯ ಕಂಡು ಸುಖಿಸುವ ಧರ್ಮ ೫

ಗೋವಿಂದ ಗೋವಿಂದ ಎಂದು ಕರೆವುತ್ತ
ಭಾವ ಶುದ್ಧದಿ ನೀನು ಎಮ್ಮ ಕಾಯೆನುತ

ದೇವರ ದೇವಗೆ ಶರಣು ಶರಣೆನುತ
ಜೀವರಕ್ಷಣ್ಯವ ಮಾಡಬೇಕೆನುತ ೬

ಚಂಬು ಚರಿಗೆ ತಪ್ಪಲೆಯು ಸವುಟು
ಉಂಬ ಸಂಭ್ರಮಕೆಲ್ಲ ಸಂಭಾರದ ಸುರುಟು
ತುಂಬಿದ ಭಾರಕ್ಕೆ ಬೆಂಬಲವಿಲ್ಲದೆ
ಅಂಬುಜನೇತ್ರನ ಕರೆವುತ್ತ ಮರುಗಿ ೭

ಸಿರಿಲಕ್ಷ್ಮಿಯರಸನು ಕರೆದರೆ ಬರುವನು
ಎಳಗಂದಿ ಕರುವನು ಅರಸುವ ತೆರದಿ
ಪರಿಪರಿ ಮೊರೆಯನು ಲಾಲಿಸಿ ಕೇಳುತ್ತ
ಸ್ಥಿರವಾಗಿ ನಡೆಸುವ ಸಿರಿಭೂಮಿಯರಸ ೮

ಕಾಲಭೈರವ ಬಂದು ಕಾಲ ನೋವನು ಕಳೆದು
ಸಾಲಾಗಿ ನಡೆಸುವ ಬೋಳೈಸಿ ಜನರ
ಆಲಸ್ಯವಿಲ್ಲದೆ ಲೀಲಾ ವಿನೋದನ
ಮೇಲೆ ಮನವನಿಟ್ಟು ನಡೆಸುವುದು ಪರಿಷೆ ೯

ಒಂದಾಗಿ ಜನರೆಲ್ಲ ನೊಂದವರನುಸರಿಸಿ
ಚಂದದಿ ನಡೆವುದು ಗೋವಿಂದನಭಯದಿ
ಹಿಂದಣದವರನ್ನು ಮುಂದಕ್ಕೆ ಒಡಗೊಂಡು
ಇಂದಿರೆಯರಸನ ನೆನೆಯುತ್ತ ನಡೆಯೆ ೧೦

ತೋಪು ತೋಪುಗಳಲ್ಲಿ ತಾಪವ ಕಳಕೊಂಡು
ಕಾಪಥವಾಗದೆ ಅಡಿಗೆಯನುಂಡು
ಪಾಪನಾಶನನನ್ನು ನೆನೆವುತ್ತ ಮನದೊಳು
ಆದಷ್ಟು ಮಾರ್ಗವ ನಡೆವುದು ಮುಂದೆ ೧೧

ಬೆಲ್ಲದ ನೀರನು ಮಾಡಿಯೆ ಲಕ್ಷುಮಿ
ವಲ್ಲಭಗರ್ಪಣವೆನುತಲೇ ನೀಡಿ
ಅಲ್ಲಿ ಗೋವಿಂದನ ಪಾಡಿಯೆ ಕರೆಯಲು
ಬಲ್ಲಿದ ದಾಸರೊಳಲ್ಲಿ ತೋರುವನು ೧೨

ಅಪಾರಮಹಿಮನೆ ಗೋವಿಂದ ದಿವ್ಯ
ರೂಪ ಸಂಪನ್ನನೆ ಪರಮಾನಂದ
ಶ್ರೀಪತಿಯಾಗಿಹ ನಂದಮುಕುಂದ ದ–
ಯಾಪರಮೂರುತಿ ದರುಶನ ಬಂದ ೧೩

ಕೇಳುವ ಭಕ್ತರಿಗೊಲಿದು ತಿಮ್ಮಪ್ಪ
ಪೇಳುವ ಮಾತನು ಮನದೊಳು ತಿಳಿದು
ಸಾಲಾಗಿ ನಡೆಸಿದ ಸರ್ವೇಶಯೆಳೆದು
ಬಾಲವೃದ್ಧರ ಕಾಲನು ಕಾಯ್ದು ೧೪

ದಯಾನಿಧಿ ಕರೆದೊಯ್ದು ಪಯಣದ ಮೇಲೆ
ಅಹಿಮಯವಾಗಿಹ ಗಿರಿಯ ಕಣ್ಣಾರೆ
ಭಯನಾಶವಾಯಿತು ಭಕ್ತರಿಗೊಂದು
ಜಯ ಜಯಯೆಂದು ವಂದಿಸಿ ನಿಂದು ೧೫

ಗೋವಿಂದರಾಜನ ಪುರದ ಬಾಗಿಲೊಳು
ಗೋವಿಂದಯೆನುತಲೆ ಕೂಗುತ್ತ ನಿಲಲು
ಹಾವಿನೊಳ್ ಮಲಗಿಹ ದೇವರಿಗೆರಗಿ
ಜೀವಚೈತನ್ಯನ ಕಾಣುತ್ತ ತಿರುಗಿ ೧೬

ಸ್ನಾನವ ಮಾಡಲು ಕಪಿಲ ತೀರ್ಥದಲಿ
ದಾನ ಧರ್ಮವ ಮಾಡೆ ಬಹಳ ಅರ್ತಿಯಲಿ
ಧೇನು ಕನಕ ಮಣಿಭೂಷಣವನ್ನು
ಗಾನಪರಾಯಣ ಭೂಸುರಗೆನ್ನು ೧೭

ದೇವ ಋಷಿ ಪಿತೃಗಳ ತೃಪ್ತಿಯ ಬಡಿಸಿ
ಭಾವ ಶುದ್ಧದಿ ಉಪವಾಸವ ರಚಿಸಿ
ಜೀವನ ಮುಕ್ತರು ಆಗಬೇಕೆನುತ
ಕೇವಲ ಭಕ್ತಿಯಿಂ ಪ್ರಾರ್ಥಿಸಿಕೊಳುತ ೧೮

ಉದಯದಲೆದ್ದು ಸ್ನಾನವ ಮಾಡಿಕೊಂಡು
ಪದುಮನಾಭನ ಗಿರಿಗೆರಗಲು ದಂಡು

ಸದನವ ಕಾಣುತ್ತ ಕಾಲಭೈರವಗೆ
ಉದಕದಿ ಬೆಲ್ಲವ ಕದಡಿ ಇತ್ತವಗೆ ೧೯

ತನ್ನ ಕಾಣಿಕೆ ಒಪ್ಪುಗೊಂಡನು ಭೈರವ
ಪನ್ನಗಶಯನನ ನೋಡಿ ನೀವೆನುತ
ಉನ್ನತ ಪ್ರಸಾದ ಉಂಡು ನೀವೆಲ್ಲರೂ
ಚೆನ್ನಾಗಿ ಒಡಗೊಂಡು ಬನ್ನಿರೊ ಎನುತ ೨೦

ಗೋಪುರ ಕಂಡಾಗ ಆದಷ್ಟು ವಂದಿಸಿ
ಶ್ರೀ ಪುರುಷೋತ್ತಮ ಕಾಯಬೇಕೆನುತ
ಪಾಪನಾಶನ ಪುಣ್ಯಲೇಪನವಾಗಿಯೆ
ಶ್ರೀಪತಿ ನಿನ್ನನು ಕಾಣಬೇಕೆನುತ ೨೧

ಕಾಯೊ ಸರ್ವೋತ್ತಮ ಗೋವಿಂದ ನಿನ್ನಯ
ಮಾಯಕವರಿಯಲು ಬ್ರಹ್ಮನಿಗರಿದು
ಸೇವಕರಾಗಿಯೆ ಬಂದೆವು ಯೆಮ್ಮಯ
ಜೀವಾತ್ಮಕನಾಗಿಹ ಭಾಗ್ಯದ ಗಿರಿಯೆ ೨೨

ಸ್ವಾಮಿ ಪುಷ್ಕರಣಿಯ ತೀರದೊಳು ನಿಂದು
ರಾಮ ಗೋವಿಂದ ಎನುತಲೆ ಬಂದು
ಕಾಮಿತಾರ್ಥವನೀಯಬೇಕೆಮಗೆಂದು ಸು-
ಪ್ರೇಮದಿ ಕಟ್ಟಿದ ಮುಡುಪನೆ ತಂದು ೨೩

ಒಪ್ಪಿಸಿ ಮುಡುಪಿನ ಹಣವನ್ನು ಪಾದಕ್ಕೆ
ಇಷ್ಟ ಸಂಕಲ್ಪವನೆಲ್ಲ ಬಿನ್ನವಿಸೆ
ಅಪ್ಪ ತಿಮ್ಮಪ್ಪನು ಲಾಲಿಸಿ ಕೇಳಿಯೆ ಲೇ-
ಸಪ್ಪ ಕಾಮಿತವನ್ನು ಸ್ಥಿರವಾಗಿ ನಡೆಸೆ ೨೪

ಜಯ ಜಯ ಭಕ್ತ ಉದಾರಿ ತಿಮ್ಮಪ್ಪ
ಜಯಪರ ಮುಕ್ತಿಗೆ ದಾರಿಯ ತೋರ್ಪ
ಜಯ ಜಯ ಅಘಹರ ಅಂತರಾತ್ಮಕನೆ
ಜಯ ಲಕ್ಷ್ಮಿಪ್ರಿಯ ಬಹಳ ಕೀರ್ತಿಧಾರಕನೆ ೨೫

ತ್ರಾಣವುಳ್ಳಷ್ಟು ಸೇವೆಯನು ಸನ್ನಿಧಿಯಲ್ಲಿ
ಜಾಣರಾಯನ ಮುಂದೆ ಕಾಣಿಸಿಕೊಡಲು
ಕಾಣುತ್ತ ಸಕಲ ತೀರ್ಥವ ಸ್ನಾನ ಮಾಡಲು
ಪ್ರಾಣನಾಯಕ ಮೇಲೆ ಏಣಿ ತೋರಿದನು ೨೬

ಅಂತರ್ಯಾಮಿಯನಲ್ಲಿ ಕಣ್ಣಾರೆ ನೋಡಿ
ಚಿಂತೆಗಳೆಲ್ಲವ ಕಡಿದು ಬೀಸಾಡಿ
ಸಂತತ ಮನದೊಳು ನಿಲುವಂತೆ ಬೇಡಿ
ಗೊಂತಿಗೆ ಕಳುಹೆಂದು ಕಾಣಿಕೆಯ ನೀಡಿ ೨೭

ವೆಚ್ಚಕೆ ಬೇಕಾದ್ದು ಇಟ್ಟು ಕೈಯೊಳಗೆ
ಹೆಚ್ಚಾದ ಹಣವನ್ನು ಸ್ವಾಮಿಯ ವೊಳಗೆ
ಮುಚ್ಚುಮರೆಯ ಮಾಡಿ ಇಟ್ಟರೆ ಬೆಳಿಗ್ಗೆ
ಹುಚ್ಚುದೋರುವ ತಿಮ್ಮರಾಯನು ಫಳಿಗೆ ೨೮

ಅರ್ಘವ ಕೊಟ್ಟು ಅಭಯ ಹಸ್ತಪಾದದ ರೇಣು
ತೀರ್ಥ ಪ್ರಸಾದವ ಕಟ್ಟಬೇಕೆನುತ
ಮೃತ್ಯು ದಾರಿದ್ರ್ಯವು ಬಿಟ್ಟು ಪೋಗುವ ಲೋಕ–
ಕರ್ತನ ಧ್ಯಾನವ ಮನದೊಳು ನೆನೆದು ೨೯

ಅಪ್ಪನೆ ಊರಿಗೆ ಎನುತ ಕೈಮುಗಿದು
ಅಪ್ಪ ತಿಮ್ಮಪ್ಪನ ಬೇಡಿಯೆಕೊಳುತ
ತಪ್ಪದೆ ಇನ್ನೊಂದು ದರುಶನವೆಮಗೆ
ಒಪ್ಪದಿ ಕೊಡಬೇಕು ಎಂದು ಪ್ರಾರ್ಥಿಸುತ ೩೦

ವಿನಿಯೋಗದವರನು ಸನುಮತ ಬಡಿಸಿಯೆ
ಜನರೆಲ್ಲ ಎದ್ದುದು ಗೋವಿಂದ ಎನುತ
ವನಜನಾಭಗೆ ಸಲುವ ಮನವಾರ್ತೆ ಸುಂಕವ
ಎಣಿಸಿಯೆ ಇತ್ತರು ಲಿಖಿತ ಪ್ರಕಾರ ೩೧

## ೧೧೩

ಗಿರಿವಾಸ ವರಾಹತಿಮ್ಮಪ್ಪನಿರವನು
ಸ್ಮರಿಸುತ್ತ ಮನದೊಳು ಭರದಿ ಇಳಿದರು ಪ

ಬೆಟ್ಟವ ಇಳಿಯುತ್ತ ಶಿಷ್ಟ ಸಂತೋಷದಿ
ಪಟ್ಟಣಕಾಗಿಯೆ ಬಂದುದು ಪರಿಷೆ
ಬಿಟ್ಟ ಬಿಡಾರಕ್ಕೆ ಕಟ್ಟಿದ ಬಾಡಿಗೆ
ಕೊಟ್ಟು ಗೋವಿಂದಗೆ ಸಾಷ್ಟಾಂಗವೆರಗಿ ೧

ಬಾಜಾರವೊಳ್ಳೆಯ ಹುಡುಕಿಯೆ ಒಳ್ಳೆಯ
ಗಾಜಿನ ಬಳೆಗಳ ನಾಮವ ಕೊಂಡು
ಪೂಜೆಗೆ ಬೇಕಾದ ಪ್ರತಿಮೆಯ ನೋಡಿಯೆ
ವ್ಯಾಜ್ಯವ ಮಾಡದೆ ತೆಗೆದು ಕಟ್ಟಿದರು ೨

ಚಿಂತೆಯಾದುದು ಊರ ಭ್ರಾಂತಿ ಬಿದ್ದುದು ಮೇಲೆ
ಸಂತತಿಯನು ಕಂಡು ಹರುಷ ತಾಳುವರೆ
ಅಂತರಾತ್ಮಕ ನಮ್ಮ ಸಂತೋಷದಿಂದ ಗೃ-
ಹಾಂತರಕಾಗಿಯೆ ಕಳುಹಲಿ ಎನುತ ೩

ಹಿಂದಣದವರನ್ನು ಒಂದೊಂದು ಬೈವುತ್ತ
ಮುಂದು ಮುಂದಾಗಿಯೆ ಪಯಣವನಿಡುತ
ಬಂದರೆ ಬರಲೀಗ ಬಾರದಿದ್ದರೆ ನಾವು
ಸಂದೇಹವಿಲ್ಲದೆ ಬಿಡುವೆವು ಎನುತ ೪

ಪುಣ್ಯವುಳ್ಳವನೊಬ್ಬ ದಾಕ್ಷಿಣ್ಯದಿಂದಲೆ
ಕಣ್ಣಿಗೆ ನೀರನು ತಂದು ತೊಡೆವುತ್ತ
ಹುಣ್ಣಿನ ಕಾಲಿಗೆ ಔಷಧಿಯನು ಮಾಡಿ
ಮಿಣ್ಣಗೆ ನಡೆಸುತ್ತ ತರುವನು ಬಿಡದೆ ೫

ಬಿಡದಿರಿ ಹಿಂದಕ್ಕೆ ಉಳಿದವರನು ಕ್ಷಣ
ತಡೆಯಿರಿ ಒಡಗೊಂಡು ಪೋಗುವ ನಾವು

ಸಿಡುಕಿನ ಮಾತುಗಳೇಕೆ ನಿಷ್ಠುರವು
ಬಡವರಿಗೊಡೆಯನು ಕರುಣ ತೋರುವನು ೬

ವೆಚ್ಚಕಿಲ್ಲದೆ ನಾವು ಹಚ್ಚಡ ಸಹವಾಗಿ
ಮುಚ್ಚುಮರೆಯ ಬಿಟ್ಟು ಮಾರಿ ಸೇರಿದೆವು
ಇಚ್ಛೆ ಬಂದಾಗೆಲ್ಲ ನಿಮ್ಮ ಮನಕೆ ಸರಿ
ಮೆಚ್ಚಿದ ಪರಿಯೊಳು ಬನ್ನಿರೊ ಎನುತ ೭

ವಾದಗಳೆಲ್ಲವ ನಿಲಿಸಿಯೆ ಮೇಲೊಂದು
ಭೇದ ಹುಟ್ಟದ ಹಾಗೆ ನಡಸಿಯೆ ತಂದು
ಆದರವಾಗಿಯೆ ಪಾದವನಿರಿಸುತ್ತ
ಮೇದಿನಿಗೊಡೆಯನ ಮನದೊಳು ನೆನೆದು ೮

ಒದಗಿದ ಪಯಣದೊಳೊಂದಾಗಿ ಬಂದುದು
ಉದಯವಾದನು ರವಿಯಿಪ್ಪತ್ತು ಬಾರಿ
ಮದುವೆ ಹೋದವರಂತೆ ಪದುಮನಾಭನ ಯಾತ್ರೆ
ಮುದದಿಂದ ಮಾಡಿಯೆ ಬಂದೆವು ಯೆನುತ ೯

ಇದಿರುಗೊಂಬರೆ ಬಂದ ಸದನದ ಬಳಗಕ್ಕೆ
ಅದನೆಲ್ಲ ಹೇಳುತ್ತ ಸಂತೋಷದೊಳಗೆ
ಹದನವೆಲ್ಲವ ಕೇಳೆ ಹಾರಿತು ಮನದೊಳು
ಬೆದರಿಕೆ ನಿಮ್ಮನು ಕಂಡ ಮೇಲೆಮಗೆ ೧೦

ಭೂಮಿಗೆ ವೈಕುಂಠವೆಂದು ತೋರುತ ಮೂರು
ನಾಮದಿ ಮೆರೆವುತ್ತ ಬಂದಲ್ಲಿ ನಿಂದ
ಪ್ರೇಮದಿಂದಲೇ ನಮ್ಮ ಸಂಗಡ ಗೋವಿಂದ
ಗ್ರಾಮ ಮಂದಿರಕಾಗಿ ಕರಕೊಂಡ ಬಂದ ೧೧

ಇಂತು ಮಾತಾಡುತ್ತ ಚಿಂತೆಯ ಕಳಕೊಂಡು
ಸಂತೋಷದಿಂದ ಗೃಹಾಂತರಕ್ಕೈದೆ

ಸಂತತವೆಮ್ಮ ಬೆನ್ನಾಂತು ಲಕ್ಷ್ಮೀಕಾಂತ ಭ–
ವಾಂತರದಿ ಕರುಣಿಸಿ ಸಲಹಬೇಕೆನುತ ೧೨

ಮೂರ್ತವ ನೋಡಿಸಿ ತೀರ್ಥ ಪ್ರಸಾದವ
ಅರ್ತಿಯೊಳೊಳಗಿಟ್ಟು ಕರ್ತು ದಾಸರೊಳು
ವರ್ತಿಸಿ ಹರಿದಿನ ಮಾಡಿಸಬೇಕೆಂದು ಯ –
ಥಾರ್ಥದಿ ಹಿರಿಯರಿಗೆರಗಿ ಕೈಮುಗಿದು ೧೩

ಮಂದವಾಸರದೊಳು ಹರಿದಿವಸವ ಮಾಡಿ
ಚಂದವಾಗಿಯೆ ದ್ವಿಜವೃಂದಕಿಕ್ಕಿದರೆ
ತಂದ ಪ್ರಸಾದವು ತೀರ್ಥವು ಜನರಿಗೆ
ವಂದಿಸಿ ಗೋವಿಂದಗರ್ಪಣವೆನುತ ೧೪

ಹೀಗೆಂದು ದಾಸರು ಹೇಳಿಯೆ ಹೋಗಲು
ಬೇಗದಿ ಆ ದಿನ ಬರುವೆವುಯೆನುತ
ಆಗಲೇಬೇಕಾದ ಸಾಮಾನವನು ತರಿಸಿ
ಓಗರ ರಚಿಸುವ ಬ್ರಾಹ್ಮರ ಕರೆಸಿ ೧೫

ಸ್ವೀಕಾರವಾಗಿಯೆ ಪಾಕವ ಮಾಡಿಸಿ
ಆಕಳ ತುಪ್ಪದಿ ಎಲ್ಲವೊಗ್ಗರಿಸಿ
ಬೇಕಾದ ಕಜ್ಜಾಯ ದೋಸೆ ಪಾಯಸವನು ವಿ–
ವೇಕದಿ ರಚಿಸಲು ಲೋಕ ನಾಯಕಗೆ ೧೬

ಪೂಜೆಯ ಮಾಡಿಯೆ ಮೂಜಗದೊಡೆಯಗೆ
ವ್ಯಾಜ್ಯವ ಮಾಡದೆ ನೈವೇದ್ಯಕ್ಕೆ ಇಡಲು
ಮಾಜದೆ ಉಂಬಂತರಂಗದ ಪರಿಯೊಳು
ಆ ಜನಾರ್ದನನಿಗೆ ಮಂಗಳಾರತಿಯ ೧೭

ಮಂಗಳ ಜಯ ಜಯ ಮಂಗಳ ಮಹಿಮಗೆ
ಮಂಗಳ ಜಯ ಜಯ ರಂಗನಾಯಕಗೆ
ಕಂಗಳ ಸೊಬಗಿನ ಬಂಗಾರಗಿರಿವಾಸ
ತುಂಗವಿಕ್ರಮನಾದ ವೆಂಕಟಪತಿಗೆ ೧೮

ಆಸುರವಾಗಿಹ ಆರತಿ ಬೆಳಗಲು
ದಾಸರೊಳಾವೇಶವಾದನು ಹರಿಯು
ಲೇಸ ಕಾಣಿಸಿ ಮುಂದೆ ಸಂತೋಷಯೀವೆನು
ಭೂಸುರ ಭೋಜನವಾಗಲೆಂದೆನುತ ೧೯

ಹರಿದಿನ ಕಾಣಿಕೆ ಬರಬೇಕು ಈಗಲೆ
ಇರಿಸೊಂದು ಹೊನ್ನನು ಕರದೊಳು ಎನುತ
ವರದನು ಯಜಮಾನ ಭಕ್ತನೊಳಾಗದೆ
ಸಿರಿಲಕ್ಷ್ಮಿಯರಸನು ದರುಶನದಿಂದ ೨೦

ದಾಸರ ಮೈಯನು ಬಿಟ್ಟು ಗೋವಿಂದನು
ವಾಸವಾದನು ಉಂಬ ಭೂಸುರರೊಳಗೆ
ಲೇಸಾಗಿ ಪೀಠವ ಯಿರಿಸಿಯೆ ಕದಳಿಯ
ರಾಶಿಪತ್ರಗಳನ್ನು ಹಾಸಿ ದೊನ್ನೆಗಳ ೨೧

ಓರಣವಾಗಿಯೇ ಕುಳಿತಿಹ ಜನರಿಗೆ
ಆರಾಧಿಸಿಯೆ ಗಂಧ ಅಕ್ಷತೆಯಿತ್ತು
ನೂರಾರು ಜನರಿಗೆ ಭೂರಿ ಭೋಜನದೊಳು
ವಾರಿಜನಾಭನು ತೃಪ್ತಿಯಬಡಲು ೨೨

ಉಂಡು ಕೈ ತೊಳೆವುತ್ತ ತಾಂಬೂಲ ದಕ್ಷಿಣೆ
ಕೊಂಡು ಮಂತ್ರಾಕ್ಷತೆ ವೇದ ಘೋಷದಲಿ
ಹಿಂಡು ವಿಪ್ರರ ಹರಕೆ ಮಂಡೆಯೊಳು ಧರಿಸಿಯೆ
ಕೊಂಡು ಕೈಮುಗಿದನು ಯಜಮಾನ ತಾನು ೨೩

ಹೆಂಗಳೆಲ್ಲರು ಕೂಡಿ ಮಂಗಳಾರತಿ ಎತ್ತಿ
ರಂಗ ತಿಮ್ಮಪ್ಪನ ಕರೆದು ಪಾಡಿದರು
ಕಂಗಳ ಸೊಬಗಿನ ಭೃಂಗಕುಂತಳೆಯರು
ಅಂಗಜನಯ್ಯನ ಕರೆದು ಪಾಡಿದರು ೨೪

ಜಲಚರ ರೂಪನ ಕುಲಗಿರಿಯನು ತಾಳ್ದ
ಚಲುವ ವರಾಹನ ಕರೆದು ಪಾಡಿದರು

ಬಲುಮೃಗ ರೂಪನ ನೆಲನ ಸೆಳೆದುಕೊಂಡು
ಚೆಲುವ ಭೂಸುರನನ್ನು ಕರೆದು ಪಾಡಿದರು ೨೫

ವಾರಿಧಿಯನು ಕಟ್ಟಿ ಚೋರನೆಂದೆನಿಸಿದ
ಮೇರೆದಪ್ಪಿದವನ ಕರೆದು ಪಾಡಿದರು
ವಾರುವವನು ಏರಿ ಧೀರನೆಂದೆನಿಸಿದ
ಈರೈದು ರೂಪನ ಕರೆದು ಪಾಡಿದರು ೨೬

ಈ ರೀತಿ ಸ್ತುತಿಯನು ಓರಂತೆ ಪಠಿಸಿಯೆ
ನಾರಾಯಣನೆಂದು ನಲಿಯಲು ಮುಂದೆ
ಘೋರ ಭವದ ದುಃಖ ವಾರಿಧಿಯನು ದಾಟಿ
ಸೇರುವ ವರಾಹತಿಮ್ಮಪ್ಪನ ಅಡಿಯ ೨೭

## ಲಕ್ಷ್ಮೀಕಲ್ಯಾಣ

## ೧೧೪

ಕಲ್ಯಾಣಂ ಲಕ್ಷ್ಮೀ ಕಲ್ಯಾಣಂ ಪ

ಕಲ್ಯಾಣಂ ನಮ್ಮ ಕಾರುಣ್ಯ ಮೂರ್ತಿಗೆ
ವಲ್ಲಭನಾಗಿಹ ವೆಂಕಟಗೆ ಅ.ಪ

ದೇವರ ದೇವ ಸದಾಶಿವನ
ಶೀವಿಯ ತನಯ ಗಣೇಶ್ವರನ
ಪಾವನವಾಗಿಹ ಶಾರದೆ ಗಿರಿಜೆಯ
ಭಾವಿಸಿ ಮನದೊಳು ಪ್ರಾರ್ಥಿಸುವೆ ೧

ಇಂದ್ರಾದಿ ದೇವರಿಗೊಂದಿಸಿಯೆ
ಚಂದ್ರ ಆದಿತ್ಯರ ಬಲಗೊಂಡು
ಮಂದರ ಮೇರುವಿನಿಂದ ಸುರಾಸುರರ್
ಸಿಂಧುವ ಮಥಿಸಿದ ಕಥೆಗಳನು ೨

ಆಗಮಸಿದ್ಧವು ರಾಗ ಪುರಾಣವು
ಭಾಗವತೋತ್ತಮ ಸಾರಗಳು
ಸಾಗರ ರಾಯನ ಮಗಳ ಕಲ್ಯಾಣವು
ಭಾಗೀರಥಿಯ ಫಲ ತೋರುವುದು ೩

ಕೊಬ್ಬಿದ ದಾನವರಡಿಯಿಡುವಬ್ಬರ–
ಕುಬ್ಬಸವಾದುದು ಧಾರುಣಿಗೆ
ಗರ್ಭದಿ ಭಯಗೊಂಡು ಅಜಭವ ಸುರರಿಗೆ
ಒಬ್ಬಳೆ ನಾರಿಯೆ ದೂರಿದಳು ೪

ಬ್ರಹ್ಮೇಂದ್ರಾದಿಗಳೆಲ್ಲರ ಬಳಿಯೊಳು
ಉಮ್ಮಳಿಸುತ ಭೂಭಾರದಲಿ
ಹಮ್ಮಯಿಸಲು ಕಂಡು ಧರ್ಮಪಾಲಕನಿಗೆ
ತಮ್ಮೊಳೊಂದಾಗಿಯೆ ದೂರಿದರು ೫

ಉರ್ವಿಯ ಮೇಲೆಲ್ಲ ಸರ್ವ ದೋಷಿಗಳುಟ್ಟಿ
ಪರ್ವತದಂದದಿ ಬೆಳೆದಿಹರು
ಓರ್ವರಿಗಳವಲ್ಲ ಗರ್ವವ ಮುರಿವರೆ
ಸರ್ವಾತ್ಮಕ ದಯದೋರೆನುತ ೬

ಕರ್ಣಿಕೆಯಾತ್ಮಜೆ ವರ್ಣಿಸಿ ಪೇಳಲು
ತನ್ನಿಂದ ತಾನೇ ಮನದೊಳಗೆ
ಅರ್ಣವ ಮಥಿಸುವ ಕಾಲದಿ ಖಳರನು
ನಿರ್ನಾಮವ ಮಾಡಬೇಕೆನುತ ೭

ಕರೆಯಲು ಕಳುಹಿದ ದುರುಳ ದಾನವರನು
ಶರಧಿಯ ತೀರದಿ ನೆರಹಿದನು
ತರಿಸಿಯೆ ಮಂದರ ಮೇರುವಿಗುರಗನ
ಕರಸಿಯೆ ಸುತ್ತಿದರಾಕ್ಷಣಕೆ ೮

ಹೆಡೆಯೊಳು ಸುರರೆಲ್ಲ ಫಣಿಪತಿಯ
ಪಿಡಿಯಲು ಅಸುರರು ಖತಿಗೊಂಡು
ಪಿಡಿಯಲು ಫಣೆಯೊಳು ಸುರರೊಡಂಬಟ್ಟರು
ತೊಡಗಿದರಾಕ್ಷಣ ಮಥಿಸುವರೆ ೯

ಶರಧಿಯ ಭರದೊಳು ಮಥಿಸುತಿರೆ
ಸಿರಿಯುದಿಸಿದುದನು ಈಕ್ಷಿಸುತ
ದುರುಳರು ಕಾಮಿಸಿ ತರಹರಿಸಲು ಕಂಡು
ಸುರರೊಂದುಪಾಯವ ವರ್ತಿಸಲು ೧೦

ಆ ಮಹಾ ಖಳ ಸಂದೋಹದೊಳುದಿಸಿದ
ಕಾಮುಕ ಕಲಹವ ಪರಿಹರಿಸಿ
ತಾ[೧] ಮನ ಮೆಚ್ಚಿದ ಪುರುಷನ ವರಿಸಲಿ
ಕಾಮಿನಿಯೆಂದನುಸರಿಸಿದರು ೧೧

ಸುಜ್ಜಲವನು ಹೊಂಗೊಡನೊಳು ತಂದರು
ವಜ್ರದಂತನು ಸುಪ್ರತೀಕ ಗಜ
ಕಜ್ಜಳ ಕಂಗಳ ಬಾಲೆಯ ಶಿರದೊಳು
ಮಜ್ಜನವೆರೆದವು ಮಹಾಲಕ್ಷ್ಮಿಗೆ ೧೨

ದೇವಿಯ ಕೈಯೊಳು ಹೂವಿನ ಸರವನು
ತಾವೊಂದಾಗಿಯೆ ಪಿಡಿಸಿದರು
ಭಾವದಿ ತೋರಿದ ಪುರುಷಗೆ ತೊಡಿಸೆಂದು
ಸಾವಿರ ನಾಮನ ಜಪಿಸುವರು ೧೩

ವೇದ ನಿರೀಕ್ಷೆಯು ಶಾಸ್ತ್ರವು ಮಂಗಳ
ವಾದ ಪೌರಾಣದ ಮಾಲಿಕೆಯ
ಆ ಮಹಾ ಉದಧಿಯ ತನಯಳು ಪಿಡಿದಳು ವಿ-
ನೋದದಿ ನೋಡಿಯೆ ಮನದೊಳಗೆ ೧೪

---

೧. ಕಾ

ನಿನ್ನ ಮನಕೆ ಬಂದ ಚನ್ನಗೆ ಹಾಯ್ಕೆಂದು
ಕನ್ಯೆಯ ಕೈಯೊಳು ವರ್ಣಿಸಲು
ನಿರ್ಣಯವಾಗಿಯೆ ಮನದೊಳು ಯೋಚಿಸಿ
ಪನ್ನಗಶಯನಗೆ ತೊಡಿಸಿದಳು ೧೫

ಆಲದೆಲೆಯ ಮೇಲೆ ಕಾಲಬೊಟ್ಟನೆ ಕಚ್ಚಿ
ಮೂಲವ ಯೋಚಿಸಿ ಒರಗಿಹನ
ಲೀಲೆಯನೆಲ್ಲವ ತಿಳಿವುತ ಮನದೊಳು
ಕಾಲದಿ ಮಾಲೆಯನಿಕ್ಕಿದಳು ೧೬

ಆದಿ ಕಾಲದೊಳ್ವೇದವನೊಯ್ದಿಹ
ಸಾಧು ವಿರೋಧಿಯ ಭೇದಿಸಿಯೆ
ಸಾಧಿಸಿ ನಿಗಮವನಾದರಿಸಿದ ಸಿರಿ ವಿ–
ನೋದಗೆ ಮಾಲೆಯನಿಕ್ಕಿದಳು ೧೭

ಅಲ್ಲಿಯೆ ಭೂಮಿಯು ಪಲ್ಲಟವಾಗಲು
ಬಲ್ಲಿದನಾಗಿಯೆ ತಳಕಿಳಿದು
ವಲ್ಲಭೆಯನ್ನು ಬೆನ್ನೊಳಿರಿಸಿದ ನಲ್ಲಗೆ
ಮಲ್ಲಿಗೆ ಸರವನ್ನು ಹಾಕಿದಳು ೧೮

ಧರಣಿಯ ದಾನವನೊಯ್ಯಲು ಆ ಕ್ಷಣ
ವರಾಹನಾಗಿಯೆ ಧರೆಯಪಹರಿಸಿ
ದುರುಳನ ದಾಡೆಯ ಖುರದೊಳು ಸೀಳ್ದನ
ಕೊರಳಿಗೆ ಮಾಲೆಯನಿಕ್ಕಿದಳು ೧೯

ತರಳನು ಕರೆಯಲು ಕಂಬದೊಳುದಿಸಿಯೆ
ನರಹರಿಯಾಗಿಯೆ ನಿಂತವನ
ಪರಿಯನು ಕಾಣುತ ಹರುಷವ ತಾಳಿಯೆ
ತರಳಾಕ್ಷಿ ಮಾಲೆಯನಿಕ್ಕಿದಳು ೨೦

ಸಣ್ಣವನಾಗಿಯೆ ಬಲಿಯೊಳು ದಾನವ
ಮಿಣ್ಣನೆ ಕೇಳಲು ಕೊಡಲವನ
ಬಣ್ಣವಗೆಡಿಸಿದ ಚನ್ನಿಗರಾಯನ
ಬಣ್ಣಿಸಿ ಮಾಲೆಯನಿಕ್ಕಿದಳು ೨೧

ಪೊಡವಿಯ ರಾಯರ ಕಡಿದು ಈಡಾಡಲು
ಕೊಡಲಿಯ ಪಿಡಿದಿಹ ಭೂಸುರಗೆ
ಮಡದಿ ಮಹಾಲಕ್ಷ್ಮಿ ಪಿಡಿದಿಹ ಮಾಲೆಯ
ಸಡಗರದಿಂದಲೆ ತೊಡಿಸಿದಳು ೨೨

ಹತ್ತುರಥಗೆ ಹರಿಪುತ್ರನೆಂದೆನಿಸಿಯೆ
ಪೃಥಿವಿ ಜಾತೆಗೆ ಕರ್ತನಾಗಿ
ಧೂರ್ತದಲ್ಲಣನಾದ ಸತ್ಯಸ್ವರೂಪಗೆ
ಅರ್ತಿಯಿಂದಲೆ ಮಾಲೆಯಿಕ್ಕಿದಳು ೨೩

ಉಡುವ ಸೀರೆಯ ಕೊಂಡು ಕಡಹದ ಮರನೇರಿ
ಮಡದಿ ಮಾನಿನಿಯರ ಮೋಹಿಸುತ
ಕಡುಗದಲ್ಲಣನಾದ ಕಡು ಮುದ್ದುಕೃಷ್ಣಗೆ
ತೊಡಿಸಿದಳು ಹೂವಿನ ಮಾಲೆಯನು ೨೪

ಬೆತ್ತಲೆಯಾಗಿಹ ಉತ್ತಮ ಪುರುಷನ
ಮತ್ತಗಾಮಿನಿ ಕಂಡು ಮೋಹಿಸುತ
ಮುತ್ತಿನ ಕಡಗದ ಹಸ್ತದಿ ಮಾಲೆಯ
ಕುತ್ತಿಗೆಗಿಕ್ಕಿಯೆ ನೋಡಿದಳು ೨೫

ವಾಜಿಯನೇರಿ ವಿರಾಜಿಪ ವೀರಗೆ
ರಾಜೀವನೇತ್ರೆಯು ಮಾಲೆಯನು
ಸೋಜಿಗದೊಳಗಿಕ್ಕಿ ಮೂಜಗದೊಡತಿ ಸ–
ರೋಜವದನವನ್ನು ನೋಡಿದಳು ೨೬

ದಶವಿಧ ರೂಪನ ವಶವಾದಳು ದೇವಿ
ಅಸುರ ಸಂತತಿಗೆಲ್ಲ ವಿಷವೀಯೆ
ಶಶಿಧರ ಕಂಠದಿ ಧರಿಸಿದ ಸುರರಿಗೆ
ಕುಶಲದಿ ಅಮೃತವು ಸೇರಿದುದು ೨೭

ಲೋಕನಾಯಕನನ್ನು ಕಾಣುತ ದೇವಿ ವಿ–
ವೇಕದಿ ಹತ್ತಿರ ನಿಂದಿರಲು
ನಾಕಾಧಿಪರೆಲ್ಲ ಪುಷ್ಪದ ವೃಷ್ಟಿಯ
ಸಾಕೆನಿಸಲು ಹರಿಮಸ್ತಕದಿ ೨೮

ದೇವ ದುಂದುಭಿ ವಾದ್ಯ ಮೊಳಗಲು ಗಿರಿಜೆಯು
ದೇವಿಯರೆಲ್ಲರನೊಡಗೊಂಡು
ಆ ಮಹಾಲಕ್ಷ್ಮಿ ವಿವಾಹವ ರಚಿಸುವ
ಠಾವಿಗೆ ಬಂದರು ಹರುಷದಲಿ ೨೯

ಸಾಗರನಾಗಲೆ ಭಾಗೀರಥಿ ಸಹ–
ವಾಗಿಯೆ ಬಂದರು ಮಂಟಪಕೆ
ನಾಗವೇಣಿಯ ನಾಗಶಯನಗೆ ಧಾರೆ ಲೇ
ಸಾಗಿಯೆ ಯೆರೆಯಲು ಬೇಕೆನುತ ೩೦

ಅರುವತ್ತು ನಾಲುಕು ನದಿಗಳನೊಡಗೊಂಡು
ಪಶುಪತವಾಗಿಹ ಹರುಷದಲಿ
ಗುರುವೆ ಮಹಾಲಕ್ಷುಮಿಯ ಧಾರೆಯನೆರೆದನು
ಸಾರ್ವಭೌಮನ ಕರಕಮಲದಲಿ ೩೧

ವಿಧ್ಯುಕ್ತ ಮಾರ್ಗದಿ ವರಿಸಿಯೆ ದೇವಿಯ
ಭದ್ರವಿಷ್ಟರದೊಳು ಕುಳಿತಿರಲು
ಮುದ್ದು ಮಹಾಲಕ್ಷ್ಮಿ ತೊಡೆಯ ಮೇಲೊಪ್ಪಿರೆ
ಗೆದ್ದನೆಂಬ್ಹಾಡನು ತೊಡಗಿದರು ೩೨

ಶರಧಿಯೊಳುದಿಸಿದ ವರ ಮಹಾಲಕ್ಷ್ಮಿಯ
ಮುರರಿಪು ಗೆದ್ದನು ಹರುಷದಿ
ವರಮದ ಕರಿಯನು ಗೆದ್ದನು ಹರಿಯೆಂದು
ಸರಸಿಜಾಕ್ಷಿಯರೆಲ್ಲ ಪಾಡಿದರು ೩೩

ಸ್ವಾಮಿ ಸರ್ವೇಶನು ಕಾಮಧೇನುವ ಗೆದ್ದ
ಭೂಮಿಗೆ ಕಲ್ಪದ ತರು ಗೆದ್ದ
ಆ ಮಹಾ ವಾಜಿಯ ಪ್ರೇಮದಿಂದಲೆ ಗೆದ್ದ
ಸೋಮಸನ್ನಿಭನೆಂದು ಪಾಡಿದರು ೩೪

ಪಾರಿಜಾತವ ಗೆದ್ದ ಪರಮ ಸಂತೋಷದಿ
ತೋರಿಸಿ ಗೆದ್ದನು ಅಮೃತವನು
ತೀರಿದ ದನುಜರ ಉರಗನ ಗರಳದಿ
ವಾರಿಜಾಕ್ಷನು ಗೆದ್ದನೆನುತಿರಲು ೩೫

ಮೂರು ಲೋಕದೊಳುಳ್ಳ ಮೂಲ ಮೃತ್ಯುವನೆಲ್ಲ
ಹಾರಿಸಿ ಗೆದ್ದನು ಹರಿಯೆಂದು
ನಾರಿಯರೆಲ್ಲರು ಪಾಡುತ ಪೊಗಳುತ
ಸೂರೆಗೊಂಡರು ಕಣು ಮನದಿ ೩೬

ಕಂಗಳ ಚಲುವಿನ ಮಂಗಳ ಮಹಿಮೆಗೆ
ಶೃಂಗಾರವ ಮಾಳ್ಪ ಭರದೊಳಗೆ
ಅಂಗನೆಯರು ಬಂದು ಮಂಗಳಸೂತ್ರವ
ಅಂಗಜನಯ್ಯಗೆ ತೊಡಿಸೆಂದರು ೩೭

ನಾರಿಯ ಮೈಯೊಳು ಸೇರುವಾಭರಣವ
ವಾರಿಜನಾಭನೆ ತರಿಸೆಂದು
ವಾರಿಜನೇತ್ರಗೆ ಪೇಳಲಾಕ್ಷಣ ಕು–
ಬೇರನ ಮೊಗವನು ನೋಡಿದನು ೩೮

ಮನಕೆ ಬೇಕಾಗಿಹ ಕನಕಾಭರಣವ
ಧನಪನು ಇತ್ತನು ಉಚಿತದಲಿ
ವನಧಿಪ ರತುನದ ತೆನೆಯನೆ ಕೊಯ್ತಂದು
ವಿನಯದಿ ಮಗಳಿಗೆ ಇತ್ತನಾಗ ೩೯

ಅಷ್ಟದಿಕ್ಪಾಲರು ಕೊಟ್ಟರು ಉಡುಗೊರೆ
ಪಟ್ಟೆ ಪೀತಾಂಬರ ವಸನಗಳ
ಶಿಷ್ಟರಾಗಿಹ ಋಷಿಪತ್ನಿಯರ್ವೆರಸಿಯೆ
ಸೃಷ್ಟಿಯ ಮಾತೆಗೆ ತೊಡಿಸಿದರು ೪೦

ಲಕ್ಷಣಯುಕ್ತದಿ ವಸನಾಭರಣ ಕೃ–
ಪಾಕ್ಷನ ರಾಣಿಗೆ ತೊಡಿಸಿದರೆ
ಪಕ್ಷಿವಾಹನ ಕಂಡು ಉಚಿತವನಿತ್ತನು
ಅಕ್ಷಯವಾಗಲಿ ಜಗಕೆನುತ ೪೧

ಶೃಂಗಾರವಾಗಿಹ ಮಂಗಳ ಮಹಿಮನು
ಅಂಗನೆ ಲಕ್ಷುಮಿಯು ಒಪ್ಪಿರಲು
ಹೆಂಗಳೆಲ್ಲರು ಬಂದು ಮಂಗಳಾರತಿ ಎತ್ತಿ
ಅಂಗಜನಯ್ಯನ ಪಾಡಿದರು ೪೨

ತುಂಬುರ ನಾರದರು ಗೀತವ ಪಾಡಲು
ರಂಭೆ ಊರ್ವಶಿಯರು ಅಂಬರದಿ
ಸಂಭ್ರಮದಿಂದಲೆ ನಾಟ್ಯವನಾಡಿಯೆ
ಅಂಬುಜನೇತ್ರನ ಪೊಗಳಿದರು ೪೩

ಉರಗನ ಹಸೆಮಣೆ ಇರಿಸಲು ಆ ಕ್ಷಣ
ಸಿರಿಸಹವಾಗಿಯೆ ಹರಿ ಬಂದು
ಮರಕತ ಮಣಿಮಯ ಜಗುಲಿಯೊಳೊರಗಿಯೆ
ಅರಸಿಯ ಮೊಗವನು ನೋಡಿದನು ೪೪

ಅಷ್ಟದಿಕ್ಪಾಲರ ಪಟ್ಟದ ರಾಣಿಯರು
ಕುಟ್ಟಿದರರಿಷಿಣ ಚೂರ್ಣವನು
ಬಟ್ಟಲ ಪರಿಮಳದೆಣ್ಣೆಯಗೂಡಿಸಿ
ಕೊಟ್ಟರು ದೇವಿಯ ಹಸ್ತದಲಿ ೪೫

ಕೇಶವ ಆದಿಯ ಸಾಸಿರ ನಾಮದಿ ವಿ-
ಶೇಷವಾಗಿಹದೊಂದ ಹೇಳಿದನು
ಆ ಸುದತಿಯು ಕಂಡು ತನ್ನ ನಾಮವ ಕೂಡಿ
ಈಶನೆ ಮೊಗವನು ತಾರೆಂದಳು ೪೬

ಶಂಖ ಚಕ್ರವು ಗದಾ ಪದ್ಮವು ಒಪ್ಪುವ
ಬಿಂಕದ ಹಸ್ತವ ತಾರೆನುತಾ
ಶಂಕಿಸಿ ಮನದೊಳು ವೆಂಕಟರಾಯಗೆ
ಕುಂಕುಮದೆಣ್ಣೆಯ ತಿವುರಿದಳು ೪೭

ಮೇದಿನಿಗೆಲ್ಲವು ಆಧಾರವಾಗಿಹ
ಪಾದಸರೋಜವ ತೋರೆನುತಾ
ಆದಿ ನಾರಾಯಣ ಅರಸನೆಂದೆನುತ ವಿ-
ನೋದದಿ ಅರಿಷಿಣ ತಿವುರಿದಳು ೪೮

ಬಟ್ಟಲವೀಳ್ಯವ ಕೊಟ್ಟಳು ಕೈಯೊಳು
ಹುಟ್ಟಲಿ ನಿನ್ನೊಳು ಸುತರೆನುತ
ಇಟ್ಟಳು ಅಕ್ಷತೆ ಪಟ್ಟದ ರಾಣಿಯು
ತಟ್ಟನೆ ಕುಳಿತಳು ವಿಷ್ಟರದಿ ೪೯

ರಾಜಲಕ್ಷುಮಿ ರವಿತೇಜದಿಂದೊಪ್ಪುವ ಸ-
ರೋಜವದನವನೊಮ್ಮೆ ತಾರೆನುತ
ಮೂಜಗದೊಡೆಯನು ಅರಿಷಿಣದೆಣ್ಣೆಯ
ಮಾಜದೆ ಹರುಷದಿ ತಿವುರಿದನು ೫೦

ಹತ್ತಿರೆ ಕುಳಿತಿಹ ಕೀರ್ತಿಲಕ್ಷ್ಮಿಯೆ ನಿನ್ನ
ಹಸ್ತ ಸರೋಜವ ತಾರೆನುತ
ಉತ್ತಮವಾಗಿಹ ಅರಿಷಿಣದೆಣ್ಣೆಯ
ಒತ್ತಿದ ನಿತ್ಯವು ಮಂಗಲೆಗೆ ೫೧

ಸಡಗರದಿಂದಲೆ ಕಡಲ ಮಗಳ ಕಂಡು
ಒಡೆಯನು ವೀಳ್ಯವ ಕೊಡಲಾಗಿ
ಕಡೆಯ ಮುಂಜೆರಗನು ಪಿಡಿದುಕೊಂಡಳು ತನ್ನ
ಕಡೆಗಂಗಳಿಂದವೆ ನೋಡಿದಳು ೫೨

ಈ ಪರಿ ದಿನ ದಿನ ತಪ್ಪದೆ ನಡೆಸಲು
ಶ್ರೀ ಪರಮಾತುಮನು ಉತ್ಸಹವ
ಪಾಪನಾಶನ ನದಿಗಳು ಅವಭೃತ ಸರ್ವ–
ವ್ಯಾಪಕನಿಗೆ ತಾವ್ ರಚಿಸಿದರು ೫೩

ದೂರ್ವೆಯೊಳ್ ತೈಲವವಿಡಿಸಿಯೆ ಫಣೆಯೊಳು
ಸರ್ವಾಭರಣವ ಸಡಿಲಿಸಿಯೆ
ಸರ್ವೋತ್ತಮನಿಗೆ ಮಜ್ಜನವೆರೆದರು
ಉರ್ವಿಗೆ ಮಂಗಳವೆಸಗಿದವು ೫೪

ದೆಸೆಯ ಮೋಹಿಸುವಂಥ ವಸನಾಭರಣವ
ಹೊಸ ಪರಿಯಾಗಿಯೆ ಧರಿಸಿದರು
ಮಿಸುನಿಯ ಮಂಟಪ ಮಧ್ಯದೊಳೊಪ್ಪಿರೆ
ಹಸನವಾದುದು ಸುರಸಂತತಿಗೆ ೫೫

ಧಾರೆ ಚತುರ್ಥಿ ನಾಗೋಲೆ ಸಹವಾಗಿ
ಆಯಿತು ಐದನೆ ದಿವಸದಲಿ
ವಾರಿಜನಾಭನು ವಾರಿಧಿಯನು ಕಂಡು
ಊರಿಗೆ ಪೋಗುವೆನೆಂದೆನಲು ೫೬

ಕಾಮಿತ ಫಲಗಳ ಆ ಮಹಾ ದಿವಿಜರ
ಸೀಮೆಯೊಳಡಗಿಸಿ ಹರಿ ತನ್ನ
ಭಾಮಿನಿಯೊಡಗೊಂಡು ಪೋಪೆನು ಎನ್ನನು
ಪ್ರೇಮದಿ ಕಳುಹಿಸಬೇಕೆನಲು ೫೭

ವಾರಿಜನಾಭನು ಆಡುವ ಮಾತಿಗೆ
ಭೋರೆಂಬ ಕುರುಹನು ತೋರುತಲೆ
ಸೇರುವೆಯಲ್ಲಿಹ ನಾರಿಯನೊಡಗೊಂಡು
ತೀರದಿ ಸ್ಥಿರದೊಳು ನಿಲ್ಲೆನಲು ೫೮

ಚನ್ನಿಗರಾಯನೆ ನಿನ್ನನು ಮಗಳನು
ಇನ್ನೊಂದು ಘಳಿಗೆಯು ಬಿಡಲಾರೆ
ಉನ್ನತವಾಗಿಹ ಗೃಹದೊಳು ಉರಗನ
ಬೆನ್ನೊಳು ಒರಗಿರು ನೀನೆನಲು ೫೯

ಮನೆಯೊಳು ಅಳಿಯನು ಎನಿಸಿಯೆ ದಿನವಿರೆ
ತನಗದು ಕಷ್ಟವು ಎಂದೆನಲು
ವನಜನಾಭಗೆ ಕೈಯ ಮುಗಿದನು ವನಧಿಯು
ಅನುಮಾನ ಬೇಡವೋ ನಿನಗೆನುತ ೬೦

ಸಂತಸದೊಳಗಿರು ಚಿಂತೆ ಬೇಡಿದಕೆಂದು
ಅಂತರ್ಯಾಮಿಗೆ ವಂದಿಸಲು
ಸಂತೈಸಿಯೆ ಸುರಸಂತತಿಯೆಲ್ಲ ಗೃ-
ಹಾಂತರಕಾಗಿಯೆ ಕಳುಹಿದನು ೬೧

ಕಷ್ಟಗಳೆಲ್ಲವ ಕಡಿದು ಈಡಾಡಿಯೆ
ದುಷ್ಟರನೆಲ್ಲರ ನಿಗ್ರಹಿಸಿ
ಇಷ್ಟಾರ್ಥಗಳನು ಸುರರೊಳು ವರ್ತಿಸಿ
ಕೊಟ್ಟನು ಕರುಣದಿ ಅಪ್ಪಣೆಯ ೬೨

ನೆಲ್ಲಿಯ ಕಾಯನು ಚೆಲ್ಲಿದ ತೆರದಲಿ
ಅಲ್ಲಲ್ಲಿಗೈದಲು ಸುರರೆಲ್ಲ
ವಲ್ಲಭೆ ಸಹವಾಗಿ ಅಲ್ಲಿಯೆ ಇರುತಿರೆ
ಮೆಲ್ಲನೆ ಗಿರಿಯೊಳು ತೋರಿದನು ೬೩

ಕಾಮಿತಾರ್ಥವನೆಲ್ಲ ಸುರರಿಗೆ ಇಪ್ಪುದು
ಪ್ರೇಮದಿ ಮಥಿಸುವ ಕಾಲದೊಳು
ಆ ಮಹಾ ಪ್ರತಿನಿಧಿಯಾಗಿಯೆ ತೋರ್ಪುದು
ಭೂಮಿಯ ಜನರಿಗೆ ಕಣು ಮನಕೆ ೬೪

ಕ್ಷೀರ ಸಾಗರದಲ್ಲಿ ಸಿರಿ ನಾರಾಯಣ
ಮೇರುವಿನಗ್ರದಿ ಸೇರಿದನು
ಸ್ವಾಮಿ ಪುಷ್ಕರಣಿಯ ತೀರವೆ ಉದಧಿಯು
ಆ ಮಹಾ ಅಂಜನಗಿರಿ ಮೇರು ೬೫

ವೇದವು ಬಂದುದು ಶಾಸ್ತ್ರವು ನಲಿದುದು
ಆದಿ ನಾರಾಯಣ ಪರ್ವತದಿ
ಪಾದವನೂರಿದ ಸಾಧು ಸಜ್ಜನರ ವಿ–
ನೋದದಿ ಸಲುಹಲುಬೇಕೆನುತ ೬೬

ಪಕ್ಷಿವಾಹನನು ಆ ಮಹಾಲಕ್ಷ್ಮಿಯ
ಸಾಕ್ಷಾತ್ ವರಿಸಿದ ಕಥೆಗಳನು
ಲಕ್ಷ್ಮಣಯುಕ್ತದಿ ಹೇಳಿದ ಜನರಿಗೆ
ಅಕ್ಷಯವಾಗಿಯೆ ತೋರುವುದು ೬೭

ಆರನೆ [illegible]ರದಿ ನಾರಿಯರೆಲ್ಲರು
ಓರಣವಾಗಿಯೆ ಹೇಳಿದರೆ
ನಾರಿ ಮಹಾಲಕ್ಷ್ಮಿ ನಾರಾಯಣ ಸಹ
ಸೇರಿಯೆ ಇರುವರು ಗೃಹದೊಳಗೆ ೬೮

ಮೇಲಪ್ಪ ಫಲಗಳ ಪಾಲಿಪ ಶ್ರೀಹರಿ
ಬಾಲ ಸಂತಾನವು ಸೌಭಾಗ್ಯ
ಲೀಲೆಯಿಂದಲೆ ಇತ್ತು ಮೂಲ ರೂಪವನೆಲ್ಲ
ಕಾಲದಿ ತೋರುವ ಭಕ್ತರಿಗೆ ೬೯

ಮಂಗಲವೆನ್ನಿರೆ ಅಂಗಜನಯ್ಯಗೆ
ಮಂಗಲರಂಗ ತಿಮ್ಮಪ್ಪನಿಗೆ
ಮಂಗಲ ಮಾಧವ ಶ್ರೀಧರ ಕೃಷ್ಣಗೆ
ಮಂಗಲ ವೆಂಕಟನಾಯಕಗೆ ೭೦

ಲಕ್ಷುಮೀವಲ್ಲಭ ಲಕ್ಷ್ಮೀನಾರಾಯಣ
ಲಕ್ಷುಮೀಕಾಂತನೆ ಜಯ ಜಯತು
ಲಕ್ಷುಮೀಪಕ್ಷನೆ ರಕ್ಷಿಸೆಂದೆನುತಲೆ
ಅಕ್ಷತೆಯಾರತಿ ಎತ್ತಿದರು ೭೧

ಎನ್ನ ಮನದಿ ನಿಂತು ಪನ್ನಗಾದ್ರಿಯವಾಸ
ವರ್ಣಿಸಿದಂದದಿ ಹೇಳಿದೆನು
ಇನ್ನಿದರೊಳಗುಳ್ಳ ಭಿನ್ನಭೇದಗಳೆಲ್ಲ
ಉನ್ನತ ಭಕ್ತರು ತಿದ್ದುವುದು ೭೨

ಮಕ್ಕಳ ಬಾಯೊಳು ಸಕ್ಕರೆಯನು ತಂದು
ಯಿಕ್ಕಿದ ಪರಿಯೊಳು ಸಿರಿಯರಸ
ಒಕ್ಕಣೆಯೆಲ್ಲವ ತಿದ್ದಿದ ಕಾರಣ
ನೆಕ್ಕರ ಕೃಷ್ಣದಾಸ ರಚಿಸಿದರು ೭೩

ಹೆಂಗಳೆಲ್ಲರು ಕೂಡಿ ಮಾಂಗಲ್ಯದೊಳಿದ
ಸಾಂಗ್ಯದಿ ಹೇಳಿಯೆ ಪಠಿಸಿದರೆ
ಬಂಗಾರ ಗಿರಿವಾಸ ವರಾಹತಿಮ್ಮಪ್ಪನು
ಮಂಗಲವನುದಿನ ತೋರುವನು ೭೪

## ೧೧೫

## ಹನುಮಂತ

(ಲಂಕೆಯಲ್ಲಿ ಹನುಮಂತ ಸೀತೆಯನ್ನು ಕಂಡು ಮುದ್ರಿಕೆಯನ್ನು ಒಪ್ಪಿಸಿದ ಪ್ರಸಂಗ).

ಹನುಮಂತ ಬಲವಂತ ಬಹು ಭಾಗ್ಯವಂತ
ಮನುಕುಲೋದ್ಭವ ರಾಮಸೇವೆಯೋಳ್ನಿಂತ ಪ

ದನುಜರಟ್ಟುಳಿಯನ್ನು ಪರಿಹರಿಸುವಂಥ
ವನಗಿರಿವಾಸವಾಗಿರುವ ಹರಿ ಶಾಂತ ಅ.ಪ

ಮಿನುಗುವ ಕುಲಿಶದಂದದಿ ನಿನ್ನ ಕಾಯ
ಘನತರ ವಾನರವಾಗಿಹ ದೇಹ
ವಿನುತಿಸಿ ತಿಳಿಯಲು ಪರಬ್ರಹ್ಮದ ಮಾಯ
ಜನರಿಗೆ ಸಕಲಾಗಮದೊಳು ನ್ಯಾಯ ೧

ತರಣಿವಂಶಜ ರಾಮನರಸಿ ಸೀತೆಯನು
ದುರುಳ ರಾವಣನೊಯ್ದ ಲೋಕಮಾತೆಯನು
ಅರಸಲು ಕಳುಹಿದ ಧರಣಿಜಾತೆಯನು
ಬೆರಳ ಮುದ್ರೆಯ ಕೊಂಡು ಪೋದ ರೀತಿಯನು ೨

ಹರಪುರ ಸುರಪುರವೆಲ್ಲವ ಕಂಡು
ಗಿರಿಗುಹೆ ಎಲ್ಲವ ಶೋಧಿಸಿಕೊಂಡು
ತಿರುಗಿ ಬರಲು ಹರಿ ಬಲವೆಲ್ಲ ಬಂದು
ಶರಧಿಯ ಹಾರೆಂದು ಜಾಂಬವ ನುಡಿಯೆ ೩

ರಾಮನಪ್ಪಣೆಯನ್ನು ಧರಿಸಿ ಶಿರದೊಳಗೆ
ಭೂಮಿಜೆ ದರುಶನ ಮಾಳ್ಪ ಭರದೊಳಗೆ
ಆ ಮಹಾ ಶರಧಿಯ ದಾಟಿ ಪುರದೊಳಗೆ
ತಾಮಸನ ಕೆಡೆಯೊದೆವೆನೆಂಬ ಮನದೊಳಗೆ ೪

ಕಾಮುಕನಾಗಿಯೆ ಕಡು ಮನವೆರಸಿ
ಭೀಮ ಪರಾಕ್ರಮದಿಂದ ಝೇಂಕರಿಸಿ
ಆ ಮಹಾ ಪರ್ವತಕಾಗಿಯೇ ಬಂದು ಉ–
ದ್ದಾಮನಾಗಿಯೆ ಹಾರಿ ಸಿಂಹಿಕೆಯ ಕೊಂದು ೫

ಜಲಧಿಯನ್ನು ದಾಂಟಿ ಬಲವಂತನೈತಂದು
ಬಲುಗೈಯ ದಶಮುಖನ ಹೊಳಲೊಳು ನಿಂದು
ಜಲಜಮಿತ್ರನು ಕಡಲ ಸಾರ್ದ ಬಳಿಕಂದು
ಹೊಳಲನೆಲ್ಲವ ಸುಳಿದು ಕಾಣದೆ ನೊಂದು ೬

ಕಳಕಳವಾಗಿಯೆ ಮನದೊಳು ತಾ ನೊಂದು
ಸುಳುಹ ಕಾಣೆನು ಸೀತೆಯ ಇರವೇನು
ಹಳಿವಾದಳೊ ಮಹಿಜಾತೆಯೆಂದೆನುತ
ತಿಳುಹುವರಿಲ್ಲವೊ ಎಂದು ಚಿಂತಿಸುತ ೭

ಚೋರ ದಶಕಂಠನಿಹ ಊರನೆಳೆದೊಯ್ದು
ತೋರುವೆ ರಾಘವಗೆನುತ ಬಿಸುಸುಯ್ದು
ವಿರಿಯೆ ಮನದೊಳು ಚೀರಿ ಹಲು ಕಿರಿದು
ವಾರಿಜಾಕ್ಷನ ಒಲವು ತೋರೆ ಮನವೊಯ್ದು ೮

ಸಾರಿ ಸಾರಿಗೆ ಉಬ್ಬೇರಿ ಕೋಪಿಸುತ
ಕೇರಿ ಕೇರಿಗಳೆಲ್ಲವನು ಶೋಧಿಸುತ
ಈರೈದು ಶಿರದನ ಮಗ್ಗುಲೊಳಿರುವ
ನಾರಿಯ ಮೈಯೊಳು ಕುರುವ ನೋಡಿದನು ೯

ಅಸುರರನುಜ ಬಿಡು ಉಸುರೊಳು ಸಿಕ್ಕಿ
ಎಸೆದು ಹಾರಿದೆ ಎಲ್ಲಿ ದೆಸೆಗೆ ದುಮ್ಮಿಕ್ಕಿ
ಕುಸುಮನಾಭನ ಭಕ್ತನೊಸರೆ ಕೈ ಸಿಕ್ಕಿ
ಬಿಸಜಾಕ್ಷಿ ಜಾನಕಿಯು ಕುಶಲ ಮನ ಉಕ್ಕಿ ೧೦

ದಶಶಿರನನುಜನು ಹೇಳಿದ ಮೇಲೆ
ವಸುಮತಿ ತನುಜೆಯ ರಾಮನ ಲೀಲೆ
ದೆಸೆಗೆ ಪ್ರಕಾಶಿಪುದು ಎನುತ ಸಂತಸದಿ
ಪಸರಿಸಿ ಹರುಷದ ಪುಳಕೋತ್ಸವದಿ ೧೧

ಹೇಳಿಕೊಂಡಲ್ಲಿಂದ ಹೊರವಂಟು ಬಂದು
ಬೇಳುತಿರೆ ಕೋಳಿ ವೃಕ್ಷದೊಳು ನಿಂದು
ಚಾಳೈಸುವ ಸುರಪತಿಯೇಳೆ ಮನ ನೊಂದು ಬ–
ಹಳ ಹರುಷವ ತಾಳಿ ಮುದ್ರಿಕೆಯ ತಂದು ೧೨

ಬಾಳುವೆ ಒಳ್ಳಿತು ರಾಮ ಲಕ್ಷ್ಮಣರ
ವಾಲಿಯ ಅನುಜನು ನೆರಹಿದ ಬಲದ
ಪಾಳೆಯವೆಲ್ಲವು ಶರಧಿಯ ತಡಿಗೆ
ಭಾಳ ಉಗ್ರದಿ ಬಂದುದು ನಿನ್ನಡಿಗೆ ೧೩

ರಾಯ ಕಳುಹಿದನೆನ್ನ ತಾಯಿ ನಿನ್ನೆಡೆಗೆ
ವಾಯುಸುತ ತಾನೆನುತ ಎರಗಿದನು ಅಡಿಗೆ
ಮಾಯಕವೆನುತಲಿ ನೋಯಲಾ ನುಡಿಗೆ
ಆಯುತವಾಗಿಹ ಕುರುವ ಕೈಯೆಡೆಗೆ ೧೪

ಬಾಯೊಳು ಬಿನ್ನಪ ಮಾಡಲು ಕೇಳ–
ರ್ಧಾಯ ಹರುಷವನು ಮನದೊಳು ತಾಳಿ
ನೋಯ ನುಡಿಯನೆ ರಾಘವನು ಎನ್ನುತ್ತ
ಕಾಯದ ಭಯದೊಳು ಕಳವಳಿಸುತ್ತ ೧೫

ಜನಕಜಾತೆಗೆ ಇತ್ತೆ ಕನಕ ಮುದ್ರಿಕೆಯ
ದಿನಕರವಂಶಗೆ ಬದಲು ಭದ್ರಿಕೆಯ
ವನಕೆಡಿಸಿ ಮುರಿದೆದ್ದ ದನುಜ ಸಂತತಿಯ
ವನಜಭವಾಸ್ತ್ರದೊಳು ನಿಂದೆ ನೀ ಕಡೆಯ ೧೬

ಮನದೊಳು ಹರುಷವ ಕಾಣಬೇಕೆನುತ
ಘನತರವಾಗಿಹ ಬುದ್ಧಿ ಯೋಚಿಸುತ
ಹಳುಕುತ ಮಿಣುಕುತ ಕೆಣಕಿ ನುಡಿಯುತ್ತ
ಎಣೆಕೆಗೊಳ್ಳದು ಎನ್ನ ಬಾಲವೆಂದೆನುತ ೧೭

ಸೊಕ್ಕಿದ ಅಸುರನ ಕೈಮಿಕ್ಕಿ ಮಾತಾಡಿ
ರಕ್ಕಸರಿಕ್ಕಿದ ವಾಲದುರಿನೋಡಿ
ಅಕ್ಕರಿಲ್ಲದೆ ನಾಗರಕಿಕ್ಕಿ ಉರಿ ಮಾಡಿ
ಗಕ್ಕನಲ್ಲಿಂದ ಧುಮ್ಮಿಕ್ಕಿ ನೀ ಓಡಿ ೧೮

ಮಕ್ಕಳಾಟಿಕೆಯಿಂದ ಮನೆ ಮನೆ ಸಿಲುಕಿ
ಮಿಕ್ಕ ಮಾತುಗಳೇನೊ ಪತಿವ್ರತೆಯರಿಗೆ
ಉಕ್ಕುವ ಮನೆಗಳು ಅಗ್ನಿಯ ಹೊರೆಗೆ
ಚೊಕ್ಕಟ ಮಾಡಿದರೆಲ್ಲ ರಾಕ್ಷಸರು ೧೯

ಬಂದು ರಾಘವನಿಗೆ ವಂದಿಸಿ ನಿಂದು
ಕಂದ ಬಂದ್ಯೆಯೆನುತ ಭಕ್ತ ದಯಾಸಿಂಧು
ಬಂದು ಮೈ ತಡಹಲು ನೀನವನೋಳಂದು
ಚಂದದಿ ವೃತ್ತಾಂತ ಪೇಳೆ ಮನ ಬಂದು ೨೦

ಇಂದಿರೆಯರಸನು ಮನ್ನಿಸಿ ಮುದದಿ
ತಂದ ಚೂಡಕವನ್ನು ಕಾಣುತ್ತ ಉದಧಿ-
ಯಿಂದಲೆ ಪುಟ್ಟಿತು ಮಥನದೊಳಂದು
ಇಂದ್ರನು ಇತ್ತನು ಜನಕನಿಗಂದು ೨೧

ಪ್ರಜೆಯಾಧಿಪತ್ಯವ ಮುಂದೆ ರಘುರಾಮ
ಮೂಜಗದೊಡೆತನ ಇತ್ತ ನಿಸ್ಸೀಮ
ತೇಜವುಳ್ಳವನಾಗಿ ಖಳನ ಸಂಗ್ರಾಮ
ಬಾಜಾರದೊಳಗೆಲ್ಲ ನೀನೇ ಜಯಭೀಮ ೨೨

ಮೂಜಗದೊಳು ನಿನ್ನ ಹೋಲುವರಿಲ್ಲ
ಸಾಜ ನಿನ್ನಯ ಗುಣ ರಾಮನೆ ಬಲ್ಲ
ಸೋಜಿಗವಾಗಿಯೆ ತೋರ್ಪುದು ಜಗಕೆ
ಪೂಜೆಗೆ ನೀನಲ್ಲದೆ ಹರಿ ಪದಕೆ ೨೩

ಯಾರು ಬಲ್ಲರು ನಿನ್ನ ತೋರ ಮಹಿಮೆಯನು
ವಾರಿಜಾಕ್ಷನ ಚರಣ ಚಾರು ಸೇವಕನು
ಸಾರಿದರನು ಹೊರೆವ ಸಂಸಾರಿ ಪ್ರೇರಕನು
ವಾರಿಧಿ ಬಲದಿ ಗಂಭೀರನಾಗಿಹನು ೨೪

ಧಾರುಣಿಯೊಳು ನಿನ್ನ ಮಹಿಮೆಯ ತಿಳಿದು
ಓರಣವಾಗಿಯೆ ಸ್ತುತಿಗಳ ಗೈದು
ವೀರವಾನರ ನಿನ್ನ ಮನದೊಳು ಭಜಿಸಲು
ಘೋರ ದುರಿತ ಭಯ ಹಾರಿಯೆ ಹೋಗಲು ೨೫

ತ್ರೇತಾಯುಗದಿ ಹನುಮಂತ ನಾಮದೊಳು
ಪ್ರೀತನಾಗಿಯೆ ಜಗನ್ನಾಥ ಸೇವೆಯೊಳು
ಖ್ಯಾತಿವಡೆದು ಸೋಮ ವಂಶಜಾತದೊಳು
ದ್ಯೂತಪಾತಕರ ವಿಘಾತಿ ನಿಮಿಷದೊಳು ೨೬

ಜಾತಿ ಸುವಿಪ್ರರ ಗೋತ್ರದೊಳುದಿಸಿ ಅ-
ತೀತ ಮಹಿಮ ಮಧ್ವ ಗುರುಪತಿಯೆನಿಸಿ
ಮಾತುಳಾಂತಕನಾದ ಕೃಷ್ಣನ ಮೂರ್ತಿಯ
ನೂತನವಾಗಿಹ ಮತದ ಪ್ರವೃತ್ತಿಯ ೨೭

ಗಿರಿವಾಸನಾಗಿರುವ ವರಾಹತಿಮ್ಮಪ್ಪ
ಪುರದ ಬಾಗಿಲ ಮುಂದೆ ವೀರ ಹನುಮಪ್ಪ
ಸ್ಥಿರವಾಗಿ ಭಕ್ತರೊಳು ಬಿಡದೆ ನೆಲೆಸಿಪ್ಪ
ಹರಿಯ ಸೇವಕರಿಗೆ ಗುರುವಾಗಿ ತೋರ್ಪ ೨೮

ಚರಣವ ನೆನೆಯುತ್ತ ತರುಣಿಯರೆಲ್ಲ
ಕರೆದು ಸೋಬಾನವ ಪಾಡುವ ಸೊಲ್ಲ
ವಿರಚಿಸಿ ಪೇಳಿದೆ ಬಲ್ಲದಂದದಲಿ
ಗುರು ಪೂರ್ಣಪ್ರಜ್ಞನ ವರ ಕಟಾಕ್ಷದಲಿ ೨೯

## ೧೧೬

ಶ್ರೀ ವೆಂಕಟೇಶಾಯ ನಮೋ
ಶ್ರೀ ವೆಂಕಟೇಶಾಯ ಶೇಷಾದ್ರಿವಾಸಾಯ ಪ

ಶ್ರೀ ವೆಂಕಟೇಶಾಯ ಭೂಲಕ್ಷ್ಮಿಯೀಶಾಯ
ಶ್ರೀ ವೆಂಕಟೇಶಾಯ ಭಕ್ತಭವನಾಶಾಯ ಅ.ಪ

ಪ್ರಳಯ ಕಾಲದಿ ಇಳೆಯು ಮುಳುಗಿ ಜಲಮಯವಾಗೆ
ಎಲೆಯ ಮಂಚದ ಮೇಲೆ ಮಲಗಿರುವ ಕಾಲದೊಳು
ಸುಳಿ ನಾಭಿಗೊಪ್ಪುತಿಹ ನಳಿನ ಪುಷ್ಪದ ಮೇಲೆ
ಕುಲಪುತ್ರ ತಾನುದಿಸಲು ೧

ಸ್ಥಳವ ಕಾಣದೆ ಮನದಿ ಬಳಲುತಿರೆ ಮೈದೋರಿ
ಚಲುವ ಕರ್ಣದೊಳಿರ್ದ ಮಲವ ಜಲಧಿಯೊಳಿಡಲು
ಕುಲಗಿರಿಗೆ ನೂರ್ಮಡಿಯ ಖಳರು ಜನಿಸಿದರವರ
ಕೊಲೆಗೆ ನಿಚ್ಚಳವಾದೆಯ ೨

ಮಧುಕೈಟಭರು ಬಂದು ಇದಿರಾಂತು ನಿಂದಿರಲು
ಉದದಿ ಮಧ್ಯದಿ ನಿಂತು ಕಾದಿದರು ಹಲಕಾಲ
ಚದುರತನದಲಿ ಖಳರು ಮದವೇರಿ ಬೇಡೆನಲು
ವಧೆಗೆ ಸಿಲುಕುವವರನು ೩

ಮುದದಿಂದ ಕೇಳಿದರೆ ಮನದೊಳಗೆ ಭಯಗೊಂಡು
ಉದಕವಿಲ್ಲದೆ ಸ್ಥಳದಿ ಸದೆಯೆನಲು ಮೊಳಕಾಲ
ತುದಿಯನೇರಿಸಿಕೊಂಡು ಉದರವನು ಪಸರಿಸಿದ
ಉದಧಿ ವಾಸಾಯನ್ನಮೋ ೪

ಸರ್ವಾಧಿಕಾರವನು ನಿರ್ವಹಿಸಿ ಕಮಲಜಗೆ
ಉರ್ವಿಯನು ಪಾಲಿಸುವ ಗರ್ವವನು ನೀನಿತ್ತೆ
ಪರ್ವತದ ಭಾರವನು ನಿಜದಿ ಬೆನ್ನೊಳು ತಾಳ್ದೆ
ಓರ್ವದಾಯಕನೆನಿಸಿದೆ ೫

ಪಾರ್ವಪಾವನವಾಗಿ ಚೇರ್ವ ಕರ್ಮಂಗಳನು
ಸರ್ವಾಯದೊಳು ನೆಲೆಸಿ ತೋರ್ವ ಅಘರಾಶಿಗಳ
ಬೇರ್ವರಿದು ಕಡಿಯುತ್ತ ಪರ್ವತಾಗ್ರದಿ ನಿಂತ
ಸರ್ವಾತ್ಮರೂಪಾಯನ್ನಮೋ ೬

ಆದುದೆಲ್ಲವು ನಿನ್ನ ಪಾದಾದಿಕೇಶದೊಳು
ಆಧಾರವಾಗಿರ್ದ ಮೇದಿನಿಯು ಹದಿನಾಲ್ಕು
ಭೇದಗಳು ವೇದಗಳು ಆದಿತ್ಯ ಮೊದಲಾದ
ಗ್ರಹತಾರೆ ನಕ್ಷತ್ರವು ೭

ಸಾಧು ಶೌರ್‍ಯವು ಕುಶಲ ಕ್ರೋಧತರ ವರ್ಣಗಳು
ಪಾದೋರು ಮುಖಕಮಲ ಕರಮೂಲದೊಳು ತೋರಿ
ಮಾಧುರ್ಯದೊಳು ಜನ ಶುಭೋದಯಕೆ ಕೈಸಾರ್ದ
ವೇದಾಚಲಾಯನಮೋ ೮

ಸೃಷ್ಟಿಯಾಳುವ ದೊರೆಗಳಷ್ಟದಿಕ್ಪಾಲಕರು
ಅಷ್ಟ ವಸುಗಳು ಚತುರ್ದಶರಾದ ಮನುಗಳು ವ-
ಶಿಷ್ಠಾದಿ ಸಪ್ತ ಋಷಿಗಳು ಮುಖ್ಯ ಭೂಸುರರು
ಮೊದಲಾದ ನದಿನದಗಳು ೯

ಕಷ್ಟ ಕರ್ಮಂಗಳನು ಕಡಿದು ಈಡಾಡುತಿಹ
ಇಷ್ಟವಾಗಿಹ ಪುಣ್ಯತರವೆಲ್ಲ ತೋರಿದುದು
ಸೃಷ್ಟಿ ಸ್ಥಿತಿ ಸಂಹಾರ ಕರ್ತಕಾರಣನಾದ
ಬೆಟ್ಟವಾಸಾಯನ್ನಮೋ ೧೦

ಕೊಡನೊಳಗೆ ಅಡಗಿರ್ದ ಸಾಸಿವೆಯು ಹೊಲನೊಳಗೆ
ಒಡೆದು ಪಸರಿಸುವಂತೆ ಪೊಡವಿಯೊಳು ಸೇರಿಸಿಯೆ
ಕಡೆಯ ಭಾರವನೆಲ್ಲ ಕೈಕೊಂಡು ಜಗದೊಳಗೆ
ಅಡಿಗಡಿಗೆ ಮೈದೋರುತ ೧೧

ಪಡೆದ ಮಾತೆಯು ಸುತರ ಬಿಡದೆ ಸಲಹುವ ತೆರದಿ
ಒಡಗೊಂಡು ವಿಶ್ವದೊಳು ಮೃಡನಾಗಿ ಸಲಹಿರ್ದ
ಒಡೆಯ ಮೂಡಲಗಿರಿಯಯೆಡೆಯಲ್ಲಿ ಅಡಿಯಿಟ್ಟ
ದೃಢನಿವಾಸಾಯನ್ನಮೋ ೧೨

ಸಾಧು ಸಜ್ಜನಪಾಲ ವೈರಿಗಳ ಸಹಮೂಲ
ಭೇದಿಸುವ ಗುಣಶೀಲ ವಾರಿಧಿಯ ಮಧ್ಯದೊಳು
ಆದಿ ಅಂತ್ಯವನೆಲ್ಲ ಉದರದೊಳು ಕೈಕೊಂಡೆ
ವೇದ ಬಲ್ಲುದೆ ನಿನ್ನನು ೧೩

ಓದಿ ನೋಡಲು ನಿನ್ನ ಹಾದಿ ಹಲವಾಗಿಹುದು
ಹೋದ ಹಲಬನು ಕಾಣೆ ಭೇದಗಳು ಕಾಣುತಿದೆ
ಕಮಲದ ನೆಳಲ ಸಾಧಿಸದು ತನುಮನವ
ನಾದಿವಾಸಾಯನ್ನಮೋ ೧೪

ಅಣುರೇಣು ಮಹಾದ್ರೂಪು ಅವರೂಪು ಮೊದಲಾದ
ಎಣಿಸಲಾರದ ಜೀವರಾಶಿಗಳ ಒಳ ಹೊರಗೆ
ಗುಣವ ತೋರುತ ಆತ್ಮಚೈತನ್ಯನಾಗಿರ್ದು
ಕ್ಷಣಕೆ ಅಳಿಸುವ ನಗಿಸುವ ೧೫

ಮಣಿಕನಕ ಭವನಗಳ ಇತ್ತು ಸೃಜಿಸುವೆ ಕೆಲವ
ಭಣಿತೆ ತಪ್ಪಿಸಿ ಮಾಯಾಧಾರ ಬದ್ದುಗೆಯಿಂದ
ಕುಣಿಸುವರೆ ದಣಿಸುವರೆ ಫಣಿಗಿರಿಯೊಳು ನೆಲೆಸಿರ್ದ
ಪ್ರಣವ ರೂಪಾಯನ್ನಮೋ ೧೬

ಸ್ನಾನ ಜಪತರ್ಪಣೆಯು ಮಾನಸದ ಅರ್ಚನೆಯು
ಧ್ಯಾನಧಾರಣೆ ಹೋಮ ಜ್ಞಾನಾಗ್ನಿ ಹೋತೃಗಳು
ಹೀನವಾಗದೆ ಮಾಳ್ಪ ಸರ್ವದಾನಂಗಳೊಳು
ತಾನಾಗಿ ನೆಲೆಸಿಪ್ಪನು ೧೭

ಮೌನವಾಗಲು ಮೂರು ಗಾನಗಳು ಬುಧರೊಳಗೆ
ನಾನಾವತಾರವನು ತಾಳಿ ಯುಗಯುಗದಲ್ಲಿ
ಹಾನಿಯನು ಪರಿಹರಿಸಿ ಅನಾಥರನು ಸಲುಹುತಿಹ
ಶ್ರೀನಿವಾಸಾಯನ್ನಮೋ ೧೮

ಜಲಚರತ್ವವ ಧರಿಸಿ ಕುಲಗಿರಿಯನುದ್ಧರಿಸಿ
ಹೊಲನೆಲನ ಸಂಚರಿಸಿ ಬಲು ಮೃಗದ ರೂಪಾಗಿ
ನೆಲನನಾಕ್ರಮಿಸಿರ್ದು ಮಲೆತವರ ಸಂಹರಿಸಿ
ಜಲಧಿ ಬಂಧನವಾಗಲು ೧೯

ಚಲುವ ರೂಪದಿ ಗೋವು ಕುಲವನ್ನು ಸಲುಹಿ ಬ-
ತ್ತಲೆಯಾಗಿ ವಾಜಿಯನು ಕಲಿಯ ಕಾಲದಿಯೇರಿ
ಕೊಲುವೆ ದುಷ್ಟರ ಕುಲವ ಹಲವು ಅವತಾರದೊಳು ಅ-
ಚಲವಾಸಾಯನ್ನಮೋ ೨೦

ಉತ್ತಮ ಸ್ಥಾನದೊಳು ಒತ್ತಿ ಬಹ ಮೃತ್ಯುಗಳ
ಕಿತ್ತು ಕಳೆವರೆ ಜಗದ ಕರ್ತನಾಗಿಯೆ ನಿಂದು
ಭೃತ್ಯವತ್ಸಲನೆನಿಸಿ ದೈತ್ಯರನು ಸಂಹರಿಸಿ
ಎತ್ತಿ ಕರೆದಭಯ ಕೊಡುತ ೨೧

ಅರ್ಥಿಯೊಳು ಅಹಿರಾಜ ಸುತ್ತಿರ್ದ ಗಿರಿಯನ್ನು
ಹತ್ತಿರುವ ವರಾಹತಿಮ್ಮಪ್ಪನಿಷ್ಠತ್ತಿರದಿ
ನಿತ್ಯದೊಳು ಮೈದೋರು ನಿರ್ಮಲಾತ್ಮಕನಾದ
ಚಿತ್ತವಾಸಾಯನ್ನಮೋ ೨೨

## ಅ. ಗಣಪತಿ – ಸರಸ್ವತಿಯರು

### ೧೧೭

ಶ್ರೀ ಗಣಪತಿ ಓಂ ನಮೋನಮೋ । ಜಯ
ಶ್ರೀ ಗಣಪತಿ ಓಂ ನಮೋನಮೋ ಪ

ಅಗಜಾವರಸುತ । ನಿಗಮಾಗಮನುತ ।
ಯೋಗಿಗಳರಸನೆ । ಭಾಗವತರ ಪ್ರೀಯ ಅ.ಪ

ವಿಘ್ನಹರನೆ ಶುಭ । ಲಗ್ನಪ್ರದಾಯಕ ।
ಭಗ್ನದುರಿತ ನಿಜ । ಮಗ್ನ ಪ್ರಭಾಕರ ೧

ವಿದ್ಯಪ್ರದಾಯಕ । ಬುದ್ಧಿ ಪ್ರದಾಯಕ ।
ಸಿದ್ಧಿಸಂಪದ ಆಯುರ್ ವೃದ್ಧಿ ಪ್ರದಾಯಕ ೨

ಶಕ್ತಿ ಪ್ರದಾಯಕ । ಸೌಖ್ಯಪ್ರದಾಯಕ ।
ಭಕ್ತಿದಾಯಕ ನಿಜ । ಮುಕ್ತಿದಾಯಕ ನಮೋ ೩

ಋಣಬಂಧಂಗಳ । ಗುಣದಿಂ ಬಿಡಿಸುತ್ತ ।
ತ್ರಿಣಯಕುಮಾರನೆ । ಪ್ರಣತನ ಪಾಲಿಸೋ ೪

ಭವ ಭಯ ಹರ । ತ್ರೈಭುವನಜನಾರ್ಚಿತ ।
ಕವಿಸುತಲೋಲನೆ । ಶಿವಸದಾನಂದನೆ ೫

## ೧೧೮

ಜಯದೇವ ಜಯದೇವ ಜಯ ಲಂಬೋದರ ।
ಜಯ ಶಂಭು ಸತಿಗತಿ ಪ್ರಿಯ ಸುಕುಮಾರ ಪ

ಜಯತು ಜಯತೆಂಬೆ ನಿನ್ನಯ ಪದವನಾಶ್ರಯಿಸಿ ।
ಜಯತು ಪಾಲಿಸೋಯೆನ್ನ ಮನದಿಷ್ಟ ಸಲಿಸಿ ಅ.ಪ.

ಸುರರ ಪೂಜೆಯಗೊಂಡು ಸಂತುಷ್ಟಿಗೊಳದೆ ।
ನರರ ಭಕ್ತಿಗೆ ಮೆಚ್ಚಿ ಧರೆಗೆ ನೀನಿಳಿದೆ ॥
ಪರಿಪರಿ ಭಕ್ಷ್ಯ ಪಾಯಸ ಕಜ್ಜಾಯಗಳ।
ವರಶುಭ ದಿನ ಚೌತಿಗುಂಬೆ ಲೇಸುಗಳ ೧

ತ್ರಿಭುವನದೊಳು ಸರ್ವರಿಂದ ಸೇವೆಯನು ।
ವಿಭವದಿ ಕೈಗೊಳ್ಳುತ್ತೊರೆದ ಶುಭವನು ॥
ಅಭಯವನಿತ್ತು ರಕ್ಷಿಸುವೆ ಭಕ್ತರನು ।
ಇಭಮುಖ ಗಣಪ ಪಾಲಿಸೊ ಭಾಗ್ಯಗಳನು ೨

ಅನುದಿನ ತವ ಪಾದ ನೆನೆವೆ ಮನ್ಮನದಿ ।
ಘನ ದುರಿತವ ದೂರಪಡಿಸು ನೀ ಮುದದಿ ॥
ಚಿನುಮಯ ಮೂರ್ತಿಯ ಪದವ ಧ್ಯಾನಿಸುವ ।
ಮನಕೆ ಸುಜ್ಞಾನ ಮತಿಯ ಪಾಲಿಸಯ್ಯ ೩

ದಾಸರಿಗೊಡೆಯ ಗಣೇಶ್ವರ ನಿನ್ನ ।
ಲೇಸಿನೊಳ್ ಭಜಿಸಿ ಕೇಳುವೆ ಗುಣರನ್ನ ।
ದಾಸನೆಂದೆನಿಸಿ ಲೋಕದಿ ರಂಜಿಸೆನ್ನ ।
ದೋಷವ ತ್ಯಜಿಸನುದಿನ ಸಲಹೆನ್ನ ೪

ಸಕಲ ಸುಜ್ಞಾನ ಕವಿತೆಗಳ ಮುದದಿ ।
ಸಖನಾಗುತೆನ್ನ ನೀ ಪೊರೆಯಯ್ಯ ದಯದಿ ॥

ಭಕುತ ವತ್ಸಲ ಶ್ರೀನಿವಾಸನ ಪ್ರಿಯ ನೀ ।
ಸುಕುಮಾರ ಕುಡುಮದೊಡೆಯ ಗಜವದನ ೫

೧೧೯

ವಾಣಿ ಬ್ರಹ್ಮನ ರಾಣಿ ಕಲ್ಯಾಣೀ।
ಫಣಿವೇಣಿ ಸದ್ಗುಣ ।
ಶ್ರೇಣಿ ವೀಣಾ ಪುಸ್ತಕ ಪಾಣಿ ಪ

ಜಾಣೆ ಶ್ರೀ ಜಗತ್ರಾಣಿ ಶಾಸ್ತ್ರ ಪ್ರ–
ವೀಣೆ ವೇದ ಪ್ರಮಾಣಿ ನಿನಗೆಣೆ ।
ಗಾಣೆ ಸಂತತಕೇಣವಿಡದೆನ್ನಾಣೆ ।
ನೆಲಸಿರು ಮಾಣದೆನ್ನೊಳು ಅ.ಪ.

ತಾಯೆ ತ್ರಿಜಗ ಸಹಾಯೆ ಶುಭ ಕಾಯೇ ।
ಓಂಕಾರರೂಪಿಣಿ ।
ಮಾಯೆ ಮುನಿಜನಗೇಯೆ ಸುಖದಾಯೇ ॥
ತೋಯಜಾಂಬಕಿ ಶ್ರೀಯರ ಸೊಸೆ ।
ಆಯದಿಂದಲಿ ಶ್ರೇಯಸ್ಸುಖಪದ –
ವೀಯೆ ಸಂತತ ಕಾಯೆ ಶತಧೃತಿ ಪ್ರೀಯೆ ।
ನೀನೆನಗೀಯೆ ವಾಕ್ಸುಧೆ ೧

ಅಕ್ಷರ ಸ್ವರೂಪೆ ನಿರ್ಲೇಪೇ ।
ಮೌನಿಜನ ಮಾನಸ ।
ಪಕ್ಷ ಸಕಲಾಧ್ಯಕ್ಷೆ ಶುಭಚರಿತೇ ।
ಸೂಕ್ಷ್ಮ ಸ್ಥೂಲ ಸುಲಕ್ಷಣಾನ್ವಿತೆ ।
ಯುಕ್ತೆ ಶಕ್ತೆ ಮುಮುಕ್ಷು ಜನ ನಿಜ ।
ಭಕ್ತಿ ಭುಕ್ತಿವರ ಪ್ರದಾಯಕಿ ।
ಮುಕ್ತಿ ಸುಖ ಸೌಖ್ಯ ಪ್ರದಾಯಕಿ ೨

ಸುಂದರಾಂಗಿ ಆನಂದ ಗುಣ ಭರಿತೇ ।
ವಂದಿಸುವೆ ತವಪದ –।
ದ್ವಂದಕಾನತನಾಗಿ ಸಚ್ಚರಿತೇ ।
ಯೆಂದು ಮದ್ಹೃನ್ ಮಂದಿರದಿ ನೀ ।
ನಿಂದು ಆಪದ್ ಬಂಧು ಕರುಣಾ ।
ಸಿಂಧುವನು ನಾನೆಂದು ಪೊಗಳ್ವಾ –।
ನಂದವರ ಸದಾನಂದ ಪಾಲಿಸೇ ೩

## ೧೨೦

ನಿನ್ನ ನಂಬಿದೆ ಶಾರದೇ । ಭಕ್ತಿಗೆ ಮತಿ– ।
ಯನ್ನು ಪಾಲಿಸ ಬಾರದೇ ಪ

ನಿನ್ನ ನಂಬಿದೆ ನಾನು । ಎನ್ನ ಜಿಹ್ವೆಯೊಳ್ ನೀನು ।
ಖಿನ್ನತ್ವಗೊಳ್ಳದೆ । ಸನ್ನುತೆ ನೆಲಸವ್ವ ಅ.ಪ

ಜಡಮತಿಯನು ತ್ಯಜಿಸಿ । ನೀ ದಯದಿಂದ ।
ದೃಢಮತಿಯನು ಪಾಲಿಸಿ ॥
ಕಡಲ ಶಯನ ಸೊಸೆ । ಪೊಡವಿಗಧಿಕವಾದ ।
ಮೃಡನ ಸ್ಮರಿಪ ಜ್ಞಾನ । ತಡೆಯದೆ ಕರುಣಿಸು ೧

ತ್ವತ್ಸಂಗವನು ಪಾಲಿಸಿ । ನೀ ದಯದಿಂದ ।
ದುಸ್ಸಂಗವನು ಛೇದಿಸಿ ॥
ಸತ್ಸಂಗವೆನಗಿತ್ತು । ಮತ್ಸಂಗ ನೀನಾಂತು ।
ತ್ವತ್ಸುಗುಣ ನುಡಿಗಳ । ಹೃತ್ಸರೋಜದೊಳಿರಿಸೆ ೨

ಸನುಮತ ಪಥಗಾಣಿಸಿ । ಕವಿತೆಗಳ ।
ಮನದಲ್ಲಿ ಸ್ಥಿರಗೊಳಿಸಿ ॥
ಜನನ ಮರಣವೆಂಬ । (ವನ) ದೊಳಗೆನ್ನನು ।
ವಿನಯದಿ (ಂದಲಿ) ಪಾರ । ಗಾಣಿಸೆ ಶಾರದೆ ೩

ದಾಸನೆಂದೆನಿಸೆಯೆನ್ನ । ಕೀರ್ತಿಗಹಿತ ।
ದೋಷವ ತ್ಯಜಿಸೆ ಮುನ್ನ ॥
ಕ್ಲೇಶಗೈವರ ಮನ । ಲೇಸಿನೊಳ್ ವಂಚಿಸಿ ।
ದಾಸರ ದಾಸನ । ವಾಸವ ಕರುಣಿಸೆ ೪

ಚಿನುಮಯಾತ್ಮಕನಿರುವ । ವೈಕುಂಠದ ।
ಘನತರ (ಸತ್) ಪದವಿಯ ॥
ಅನುದಿನ ತವ ಪತಿ । ಪಿತ ಶ್ರೀನಿವಾಸನ ।
(ಅನುಯಾಯಿ) ಸೇವೆಗ । ಳೆನಗಿತ್ತು ಪಾಲಿಸೆ ೫

## ಶಿವ – ಪಾರ್ವತಿಯರು

### ೧೨೧

ಪರಮೇಶ್ವರಾ ಮಹದೇವಾ । ಗಿರಿಜಾವರ ಶಿವ ಶಂಭೋ ।
ಪರಮೇಶ್ವರ ಮಹದೇವಾ ಪ

ಹರಶರ್ವ ಕಾಲಕಾಲ । ವಿರೂಪಾಕ್ಷ ರುಂಡಮಾಲಾ ।
ಶರಣು ಜನರಪಾಲಾ । ಗಿರಿ ಶೋಭಾವಾ ನೀ ಲೋಲಾ ೧

ಭೂತೇಶ ವ್ಯೊಮಕೇಶಾ । ಶಿತಿಕಂಠ ಕೃತ್ತಿವಾಸಾ ।
ಸ್ತುತಿಪೇ ಉಮಾ ಮಹೇಶಾ । ಕ್ರತು ಧ್ವಂಸಿ ದುಷ್ಟ ನಾಶಾ ೨

ಈಶಾನ್ಯ ಭರ್ಗರುದ್ರಾ । ಪಶುಪತೇ ವೀರಭದ್ರಾ ।
ಕೃಶಾನು ರೇತಸ್ ರೌದ್ರಾ । ಶಶಿಧರಾ ಯೋಗನಿದ್ರಾ ೩

ಪಿನಾಕಿ ಮೃತ್ಯುಂಜಯನೇ । ನಾ ನಿನ್ನ ಮರತಿಹನೇ।
ದೀನರ ಪಾಲಿಸುವನೇ । ನೀನೆನ್ನ ಕಾಯೋ ಭವನೇ ೪

ಗಜಮುಖ ತಾತ ಬಾರೋ । ಭಜಿಸುವೆನೀ ಮೈದೋರೋ ।
ನಿಜದಾ ಸದಾನಂದ ಬಾರೋ । ರಜತಾದ್ರಿವಾಸ ತೋರೊ ೫

## ೧೨೨

ಪಾಲಿಸೋ । ಪಾರ್ವತಿಯ ಪ್ರಾಣೇಶ ।
ಪಾಲಿಸೋ ಪ

ಪಾಲಿಸೆಮ್ಮನು ಪಶುಪತಿಯೆ । ನಿಜ ।
ಬಾಲಾರ್ಕ ಕೋಟಿದೀಧಿತಿಯೆ । (ನಮ್ಮ) ।
ಏಳಿಗೆಗೊಳಿಪ ಸದ್ಗತಿಯೆ ಎಂಬು ॥
ದಾಲಸ್ಯಗೊಳದೆ ಝೇಂಕೃತಿಯೆ ಶಂಭೋ ॥
ಮೂಲ ಮೂರುತಿ ಸರ್ವಕಾಲಕಾಲನೆ ತ್ರೀ ॥
ಶೂಲವ ಪಿಡಿದೆನ್ನ ಆಲಸ್ಯ ತ್ಯಜಿಸಿನ್ನು ೧

ಪ್ರಮಥ ಪ್ರಜಾಪ್ರಭೂದಾರ । ಧರ್ಮ ।
ದ್ರುಮ ಸುಮನಸರಿಗಾಧಾರ ।ಜಗ ।
ತ್ಕ್ರಮಜಳಿಂತೆನುವ ವಿಚಾರ । ಸ್ವಾಮಿ ।
ನಮಿಸಿ ಕೇಳುವೆ ಸರ್ವಸಾರ । ಆಹಾ ॥
ಕಮಲನಾಭನ ಮಿತ್ರ । ದ್ಯುಮಣಿಶೋಭನ ಗಾತ್ರ ।
ದ್ಯುಮಣಿಸನ್ನುತ ನಮೋ । ನಮೋಯೆಂಬೆ ಜಯ ಶಂಭೋ ೨

ಶರಣವತ್ಸಲ ಮೃತ್ಯುಂಜಯನೆ । ನಿನ್ನ ।
ಮರೆಯ ಹೊಕ್ಕೆನು ಕಾಲಾಂತಕನೆ । ಎನ್ನ ।
ಕರುಣದಿ ಸಲಹೊ ಶಂಕರನೆ । ಶಿರ–
ವೆರಗಿ ಬೇಡುವೆ ದಯಾಪರನೆ । ದೇವ ॥
ಕರುಣಾಸಾಗರ ನಿನ್ನ । ತರಳನಾಗಿರ್ದೆನ್ನ ।
ಪೊರೆಯೊ ಸದಾನಂದ । ಪರ ಗುರುರಾಯನೆ ೩

## ೧೨೩

ಪಾಲಿಸೆನ್ನ ಪಾರ್ವತೀಶನೆ । ಮಹಾನುಭಾವ ।
ನೀಲಕಂಠ ರುಂಡಮಾಲನೆ ಪ

ಪಾಲಿಸೆನ್ನ ಭವದೊಳಿಂದು ।
ಬಾಲಚಂದ್ರಧರನೆ ಬಂದು ।
ಕಾಲಕಾಲ ದುರಿತಜಾಲ ।
ಮೂಲನಾಶಗೈದುವೊಲಿದು ಅ.ಪ.

ಅಂತರಾತ್ಮನಖಿಲ ಪೋಷಣ । ಕಪಾಲಧರ ದು–।
ರಂತ ಮಹಿಮ ತ್ರಿಗುಣ ಕಾರಣ ॥
ಸಂತಸುಜನ ಚಿಂತಿತಾರ್ಥ ।
ಕಂತುಹರ ಭವಾಬ್ಧಿ ಪೋತ ।
ಅಂತಕಾಂತನಖಿಲ ಭುವನ ।
ಕ್ರಾಂತಾನಂತ ಮಹಿಮ ದೇವ ೧

ಭುಜಗಾಭರಣ ಅಜಸುರಾರ್ಚಿತ । ತ್ರಿಶೂಲಧಾರ।
ಸುಜನ ಬಂಧು ಮುಕ್ತಿದಾಯಕ ॥
ತ್ರಿಜಗದೀಶ ತ್ರಿಪುರನಾಶ ।
ರಜತಶೈಲವಾಸ ಭಕ್ತ ।
ನಿಜಮನೋರಥಾಬ್ಧಿ ಚಂದ್ರ ।
ಭಜಿಸುವೆ ಚರಣಾರವಿಂದ ೨

ಆದಿಮಧ್ಯಾಂತರಾತ್ಮನೆ । ಜಗನ್ನಿವಾಸ ।
ವೇದವೇದ್ಯ ಸುಜನಸೇವ್ಯನೆ ॥
ಆದಿಮಾಯೆಯಾದಿಮೂಲ ।
ಆದಿಪುರುಷ ಶ್ರೀನಿವಾಸ ।
ಸಾದರದೊಳೆನ್ನ ಕಾಯ್ದು ।
ಮೋದದಿಂದ ಸಲಹೊ ದೇವ ೩

## ೧೨೪

ಶರಣು ಶ್ರೀ ನಂದನೇಶ್ವರ । ಪಾಲಿಸು ಜಗದೀಶ್ವರ ।
ಶರಣು ಶ್ರೀ ನಂದನೇಶ್ವರ ಪ

ಶರಣು ಶ್ರೀ ಗುರುವರ ಗಂಗಾಧರ ।
ಕರ ಕಪಾಲಧರ ಹರ ಮೃತ್ಯುಂಜಯ ಅ.ಪ.

ತಂದೆ ನಿನ್ನಯ ಪಾದವ । ಮರೆತಿಹುದರಿಂದ ।
ನಿಂದ ಹಲವಂಗದಲಿ ಭವಭವದಿ ॥
ನೊಂದು ಬಂದೆ ನಾನಿಂದೀ ಭವದೊಳು ।
ಹೊಂದಿ ತವಾಂಘ್ರಿಯನಂದದಿ ಭಜಿಸುವೆ ೧

ಭೇದ ಬುದ್ಧಿಯ ಮಾನವರು । ವೇದ ಶಾಸ್ತ್ರದ।
ಹಾದಿಯರಿಯದ ಮತ್ಸರರು ॥
ಸಾಧುಗಳೊಡನೆ ವಿರೋಧವನೆಣಿಸುವ ।
ಬಾಧಕರಾದರು ಹೇ ದಯಾನಿಧಿಯೇ ೨

ತೊಡಕುಗಳನ್ನೆ ಬಿಡಿಸಿ । ಬಾಧೆಗಳ ವಾರಿಸಿ ।
ಕಡು ದುಷ್ಟಾತ್ಮರ ಶಿಕ್ಷಿಸಿ ।
ಎಡೆಬಿಡದೆನ್ನ ಮನೋರಥ ಸಲಿಸುತ ।
ದೃಢತರ ಭಕುತಿಯ ಕೊಡು ಕೃಪೆಯಿಂದಲಿ ೩

ಭಕತಜನರನೀಕ್ಷಿಸೊ । ನಿನ್ನಯ ಪಾದ ।
ಮುಕುತಿ ಸಂಪದ ಪಾಲಿಸೊ ॥
ಶಕುತಿಯೊಳಗೆ ನೀ ಯುಕುತಿಯಿಂದ ನಿಜ ।
ಸುಖದ ಪದವಿಯೊಳು ಪ್ರಕಟದಿ ಪೊರೆಯೈ ೪

ಯೋಗಿಗಳರಸ ನೀನೆಂಬ । ಬಿರುದುಗಳ ತೋರಿಸು- ।
ತೀಗೆನ್ನಪರಾಧವ ಕ್ಷಮಿಸೆಂಬ ॥
ರಾಗದ ನುಡಿಯೊಳೆನ್ನಾಗಮನವೊಪ್ಪಿಸು- ।
ತೀಗ ಸದಾನಂದ ಯೋಗಾಂತರ್ಗತ ೫

## ೧೨೫

ಅನ್ನಪೂರ್ಣೇಶ್ವರಿ ನಿನ್ನ ಪಾದಕೆ ಶರಣು ।
ಮನ್ನಿಸಿ ಕರುಣದಿ ಎನ್ನನುದ್ಧರಿಸವ್ವ ಪ

ಮಾತೆ ನೀನೆನ್ನನು । ಪ್ರೀತಿಯೊಳ್ ಸಲಹವ್ವ ॥
ದಾತೆಯೆ ಭವಭಯ (ದ) । ಭೀತಿಯೊಳೆನ್ನ ಪೊರೆ ೧

ಸರಸಿಜಾಂಬಕಿ ಯೆನ್ನ । (ಸ) ರಸೆ (ಸುಗುಣೆ) ರನ್ನೆ ।
ಕರುಣದಿ ಪೊರೆವ ಭಾರ । ಗಿರಿಜೆ ನಿನಗರ್ಪಿಸಿದೆ ೨

ಭಾವಭಕ್ತಿಯೊಳ್ನಿನ್ನ । ಸೇವೆಯೊಳಿರುವರನ್ನೆ ॥
ದೇವ ವಿಶ್ವೇಶ್ವರ ಪ್ರಿಯೆ । ದೇವಿ ಸಂತಸದಿ ಕಾಯೆ ೩

ಸಾಧುಸಂತರ ಸೇವೆ । ಎಂದೆಂದಿಗಾದರು ॥
ಕುಂದದೆ ಸಾಗುವರೆ । ಕಂದನಿಷ್ಟವ ಸಲಿಸೆ ೪

ವಾಸುದೇವನ ಭಗಿನಿ । ಲೇಸಿನೊಳಗ್ರಜನ ॥
ದಾಸನಾದೆನ್ನ (ವ) ರೊಳ್ । ಸಾಸಿ (ರ) ಸೇವೆಗೈಸೆ ೫

ಭಗವತ್ಸೇವೆಯೊಳೆನ್ನ । ಸುಗುಣದ ಪರಂಪರೆ ॥
ಸೊಗಸಿನೊಳ್ ಹೊಂದಿರುವ । ಅಗಣಿತ ವರವೀಯೆ ೬

ತಾಯೆನ್ನಿಷ್ಟವನು ಪ್ರೀಯದಿಂ ಸಲಿಸುವ ॥
ರಾಯ ಶ್ರೀಕೃಷ್ಣಾನುಜೆ । ಕಾಯೆ ಸದಾನಂದದೊಳು ೭

## ೧೨೬

ದೇವೀ ಸಲಹೆನ್ನನೂ । ತವ ಬಾಲಕನನೂ ।
ದೇವೀ ಸಲಹೆನ್ನನೂ ಪ

ದೇವಿ ನೀನೆನ್ನಾವ ಕಾಲಕು ।
ಕಾವ ನಿಜ ಸುಖವೀವ ಶಕ್ತಿಯೆ ।
ಶ್ರೀವರನ ಪ್ರೀಯ ಭಗಿನಿ ದೇವರ ।
ದೇವ ವಿಶ್ವೇಶ್ವರನ ಸುಪ್ರೀಯೆ ಅ.ಪ

ಖಂಡಿಸಿದೆ ಮಹಿಷಾಸುರನ ಶಿರವಾ । ಶುಂಭ ನಿಶುಂಭರ ।
ದಿಂಡುಗೆಡಹಿದೆ ದುಷ್ಟ ಸಂಕುಲವಾ । ಚಂಡ ಮುಂಡ ।
ಧೂಮ್ರಾಕ್ಷ ದೈತ್ಯರ ತಂಡಗಳ ರುಂಡವನು ಧರೆಯೊಳು ।
ಚಂಡನಾಡುತ ರಕ್ತಬೀಜರ । ಹಿಂಡಿ ರಕ್ತನುಂಡ ಶಂಕರೀ ೧

ದುರಿತ ಹರೆ ಆರ್ಯಾ ಕಾತ್ಯಾಯನಿಯೇ ।
ಗೌರಿ ಹೈಮಾವತಿ ।
ಕರುಣಸಾಗರೆ ಕಾಳಿಕಾ ಮಾರೀ ।
ಪರಮ ಶಿವೆ ಈಶ್ವರಿ ಭವಾನಿ ।
ಸುರಮುನೀ ಸುತೆ ಸರ್ವಮಂಗಲೆ ।
ಶರಣ್ಯೆ ತ್ರಿಯಂಬಕಿ ।

---

* "ವೇದವಚನದ ಸಾರದೊಳು ತಾ ।
ನಾದ 'ಸರ್ವಂ ವಿಷ್ಣು ಮಯ' ಮೆಂ ।
ದಾದರದಿ ಪೇಳುವರಕುಟಿಲರು ಸಾಧುಗಳಿಗೆಂಬೆ ॥
ಓದಿ ನೋಡಿರೊ ವಾದವಿಲ್ಲದೆ ।
ಭೇದರಹಿತ ವಿನೋದ ಸುಸ್ಥಿರ ।
ವಾದ ತನ್ನಾದಿಗೆ ಸದಾನಂದಾತ್ಮಮಯನಾಗಿ"
–ಮುಕ್ತಿಸಾರ ಸಂಗ್ರಹ (ಶ್ರೀ ಗುರುಸದಾನಂದ ಕೃತಿ)

ಸರ್ವಾರ್ಥ ಸಾಧಕೆ ।
ಶರಣು ಶರ್ವಾಣಿಯೆ ರುದ್ರಾಣಿಯೆ ೨

ಸರ್ವ ಭವ ಭಯಹಾರಿ ಓಂಕಾರೀ ।
ಮುರಾರಿಯೊಲ್ಲಭೆ ।
ಸರ್ವ ಸದ್ಗುಣ ಭಕ್ತ ಸಂಸಾರೀ ।
ಸೃಷ್ಟಿ ಸ್ಥಿತಿ ಲಯಂಗಳ ।
ಸರ್ವ ಕಾರಣ ಭೂತೆ ಮುನಿ ಸುತೆ ।
ಸರ್ವ ಸಂಪದಭೀಷ್ಟದಾಯಕಿ ।
ಸರ್ವ ಸೌಖ್ಯ ಸುಖ ಪ್ರದಾಯಕಿ ೩

ಮಾತೆ ತ್ರಿಜಗಖ್ಯಾತೆ ಶಿವಪ್ರೀತೇ ।
ಜಗದ್ಭರಿತೆ ಸದ್ಗುಣ ।
ದಾತೆ ಯೋಗಿಮನೋನು ಶುಭ ಚರಿತೇ ।
ನೀತಿ ಶಾಸ್ತ್ರ ಪುರಾಣ ।
ತತ್ವಾತೀತೆ ನಿರುಪಮ ಶಕ್ತಿ ದೇವತೆ ।
ಸೋತೆ ನೀ । ದಾರಿದ್ರ ದುಃಖ
ವ್ರಾತವನು ಪರಿಹರಿಸಿ ರಕ್ಷಿಸೆ ೪

ತಂದೆ ತಾಯೆನ್ನ ಬಂಧು ಬಳಗಗಳೂ ।
ನಾರಾಯಣಿಯನೀ– ।
ನಂದಿಗಿಂದಿಗು ಯೆಂದಿಗಾದರೆಯೂ ।
ಹೊಂದಿರುವ ತಾಪತ್ರಯವನಾ ।
ನಂದದಿಂದಲಿ ಪಾರಗಾಣಿಸಿ ।
ಕುಂದು ಕೊರತೆಗಳನು ನಿವಾರಿಸು ।
ತಿಂದೆನ್ನನು ಸದಾನಂದನೆನಿಸುತ ೫

## ೧೨೭

ದೇವಿ ಸಲಹೆಮ್ಮನು ಭವ ಭಯದಿ ಬಂದೆವು
ದೇವಿ ಸಲಹೆಮ್ಮನು ಪ

ಕಾವ ಕರ್ತಳು ನೀನೆ ನಿರ್ಮಿಸಿ ।
ತೋರ್ವ ಶಕ್ತಳು ನೀನೆ ಭುವನವ ।
ನಾಳ್ವ ತ್ರಿಜಗಜ್ಜನನಿ ತವಪದ ।
ಸೇವೆ ನಿಜಸುಖವೀ ಮಹೇಶ್ವರಿ ಅ.ಪ

ನೊಂದೆವು ದಾರಿದ್ರ್ಯದ । ಬಲು ಬಾಧೆಯಿಂದಲಿ ।
ಬೆಂದೆವು ಹಲವಂಗದ ॥
ದಂದುಗಕ್ಕೊಳಗಾಗಿ ಜೀವಿಪ ।
ವಂದವೆಂತೆಂಬುದನು ಕಾಣದೆ ।
ಅಂಧಕರವೋಲಾಗಿ ತವ ಪದ ।
ದ್ವಂದ್ವಕಾನತರಾಗುತಿರುವೆವು ೧

ಸರಸ್ವತಿ ಮಹಾಲಕ್ಷ್ಮಿಯು । ಗೌರಿ ಮಹೇಶ್ವರಿ ।
ಪರಮೇಷ್ಠಿಯವತಾರಿಯು ॥
ಹರಿಹರಾದಿ ಸುರೇಂದ್ರ ಮುಖ್ಯಾ ।
ಮರರು(ಗಳು) ಗಂಧರ್ವ ವಿದ್ಯಾ ।
ಧರರುರಗ ಗರುಡಾದಿ ತುಂಬುರ
ನಾರದಾದ್ಯವತಾರ ರೂಪಿಣಿ ೨

ಶರಣಾಗತರ ನೋಡೆ । ಕರುಣಾ ಕಟಾಕ್ಷದಿ ।
ತರಳರಿಷ್ಟಗಳ ನೀಡೆ ॥
ದುರಿತಗಳನೀಡಾಡಿ ಸಂಪದ ।
ಭರಿತದಿಂ ಕಾಪಾಡುತೆಮ್ಮನು ।

ನಿರುತ ಭಕ್ತರ ಸಾಲೊಳಿರಿಸುತ ।
ಸ್ಥಿರ ಸದಾನಂದದೊಳು ಪಾಲಿಸೆ ೩

## ೧೨೮

ಶಂಕರಿ ಪಾರ್ವತಿ ಶಿವನರ್ಧಾಂಗಿಯೆ ।
ಪಂಕಜ ಲೋಚನೆ ಕಿಂಕರನನು ಪೊರೆಯೆ ಪ

ಮಂಗಲಾಂಗಿಯೆ ಭವ ಭಂಗ ನಿವಾರಿಣಿ ।
ಹಿಂಗದೆನ್ನನು ರಂಗನ ಭಗಿನಿ ೧

ಒಂದರಿಂದೆರಡಾಗಿ ಒಂದೆ ಶಕ್ತಿಯೊಳು (ನೀ) ।
ನಂದ ಮೂರುತಿಯಾದಾನಂದ ಮಹಾಮಾಯೆ ೨

ದೇಶದೊಳ್ ದೋಷ ವಿನಾಶಗೊಳಿಸುವೆ ।
ದಾಸರಿಷ್ಟಗಳೀವ ಈಶೆಯಾಗಿರುವೆ ೩

ಉಣಿಸುವೆ ಎಣಿಸುವೆ ತಣಿಸುವೆ ನೀನೆ ।
ದಣಿದರ ಭವದೊಳುದ್ಧರಿಸುವೆ (ನೀನೆ) ೪

ವಾಸವಾರ್ಚಿತೆ ಜಗದೀಶ ಸುಪ್ರೀತೆ ।
ದಾಸನ ಪೊರೆ ಶ್ರೀನಿವಾಸಾನುಜಾತೇ ೫

## ೧೨೯

ಶರಣಾಗತನಾದೆನು । ಭವಾನಿ ।
ಶರಣಾಗತನಾದೆನು ।
ಭೂರಿಜಗದುದ್ಧಾರೆ ಲೋಕವಿ-।
ಹಾರೆ ಸತ್ಯವಿಚಾರೆ ಮುನಿಮನ ।

ಸಾರೆ ಸರ್ವಾಧಾರೆ ಲೋಕವಿ-।
ಚಾರೆ ನಿನ್ನಡಿದಾವರೆಗೆ ನಾ ಅ.ಪ

ಖಂಡಪರಶು ಸುಪ್ರೀತೆ । ನಾರಾಯಣಿ ।
ಚಂಡಿಕೆ ಗಿರಿಜಾತೆ ॥
ಚಂಡ ಮುಂಡ ಧೂಮ್ರಾಕ್ಷ ತ್ರಿಜಗ- ।
ದ್ಧಂಡ ಶುಂಭನಿಶುಂಭ ಮಹಿಷನ ।
ದಿಂಡುಗೆಡಹುತ ರುಂಡಗಳ ಚೆಂ-।
ಡಾಡಿ ರಕ್ತವನುಂಡ ಶಂಕರಿ ೧

ಹೈಮವತಿ ಶರ್ವಾಣಿ । ಶರಣ್ಯೇ ।
ಕೌಮಾರಿ ಗೌರಿ ರುದ್ರಾಣಿ ॥
ಕಾಮಹರ ಸುಪ್ರೀ(ಯೆ) ತ್ರಿಜಗ-।
(ದ್ಧಾಮೆ) ಧರ್ಮ (ನಿ)ದಾ(ನೆ) (ನಿ)ರ್ಮಲ ।
(ಕಾಮೆ) ಮನ್ಮನ ಧಾ(ಮೆ) ನೀನೆ ।
(ವಾಮೆ) ಪೊರೆ ಬ್ರಹ್ಮಾಂಡ ನಾಯಕಿ ೨

ಆದಿಶಕ್ತಿಯೆ ಈಶ್ವರಿ । ಭುವನೇಶ್ವರಿ ।
ವೇದ್ಧಾತ್ಮೆ ಸರ್ವೇಶ್ವರಿ ॥
ನಾದ ಬಿಂದು ಕಲಾದಿಮಯ(ಳೆ) ವಿ-।
ನೋದೆ ಪರಮಾಹ್ಲಾದೆ ನಿರುಪಮ ।
ಬೋಧೆ ನಿಜನಿರ್ವಾದೆ ಆದಿಮ ।
ಧ್ಯಾಂತರಹಿತೆ ಸದಾನಂದೋದ್ಧರೆ ೩

## ೧೩೦

ಶರಣು ಶಂಕರಿ । ಗೌರಿ ಶಿವೇ ।
ಶರಣು ಶಂಕರಿ ಪ

ಮಾರವೈರಿಯ । ನಾರಿ ನಿನ್ನ ಚರ – ।
ಣಾರವಿಂದಕೆ ನಮೋ ಅ.ಪ

ತರಳರಾಗಿ ನಾವು ನಿನ್ನ । ಮರೆಯೊಳಿಪ್ಪುದರಿಂದ
ಕರುಣಾಮೃತದೊಳ್ ಪರಿಪಾಲಿಸುತ ।
ಪೊರೆಯೆ ನೀನೆ ಸ್ಥಿರಸುಖದೊಳು ೧

ಸೃಷ್ಟಿಕರ್ತೆಯಾಗಿ ಸಕಲ । ದುಷ್ಟಭವದೊಳ್ ಕಷ್ಟಪಡಿಸಿ ।
ಭ್ರಷ್ಟರೆನಿಸಿ ಕೈಯಬಿಟ್ಟರೆ ।
ಕೆಟ್ಟೆವಲ್ಲವೇ ಭವಾನಿ ೨

ಆದಿಶಕ್ತಿ ನಿನ್ನ ಮಾಯಾ । ಭೇದದೊಳಗೆ ಹಲವು ಭ್ರಮೆಯ ।
ಹಾದಿಯೊಳಗೆ ತಪ್ಪಿಸದೆ ।
ಕಾಯ್ದು (ನೀ) ಆದರಿಸವ್ವ ೩

ಮಂತ್ರರೂಪಿಣಿಯೆ ಸಕಲ । ತಂತ್ರಧರ್ಮ ಯಂತ್ರದ ।
ಚಿಂತೆಯಿಲ್ಲದೆ ಶಿವನ ।
ಕಾಂತೆ ಸಲಹೆಮ್ಮನು ೪

ಗಣಪಗುಹರ ಆಣೆ ನಿನಗೀ ।
ಋಣದ ಬಾಧೆ ಬಿಡಿಸದಿರೆ ।
ಅಣುವಿನಷ್ಟು ಗುಣವಿಲ್ಲೆನುತಲಿ ।
ಮಣಿದು ಪ್ರಾರ್ಥಿಸುವೆನು ೫

ಪೂರ್ವ ಪುಣ್ಯ ಹೀನರಾಗಿ ।
ಉರ್ವಿಯೊಳ್ ಸುಖವಿಲ್ಲದಾಗಿ ।
ಶರ್ವವಲ್ಲಭೆಯೆಮ್ಮ ಬವಣೆ ।
ನಿರ್ವಾರಿಸಲುಸುರಿದೆವು ೬

ತಾಯೆ ಜಗನ್ಮಾಯೆ ಯೆಮ್ಮ ।
ಆಯದಿ ಸದಾನಂದದೊಳ್ ।
ತಾಯೆ ಮಹಾದೇವ ಪ್ರಿಯ
ಜಾಯೆ ನಮೋ ಸರ್ವೇಶ್ವರಿ ೭

## (ಇ) ಶ್ರೀಹರಿ – ಲಕ್ಷ್ಮಿಯರು

### ೧೩೧

ಅಚ್ಯುತಾನಂತ ಗೋವಿಂದ । ಗುರು ।
ಸಚ್ಚಿದಾನಂದ ಮುಕುಂದ ಮುರಾರಿ ಪ

ಪಕ್ಷಿವಾಹನ ಕಮಲಾಕ್ಷ । ಅನಾಥರ ।
ಪಕ್ಷ ಶ್ರೀ ಲಕ್ಷ್ಮೀನಾರಾಯಣನೆ ॥
ನಿಶ್ಚಿಂತ ನಿರ್ಗುಣ ಸಚ್ಚರಿತ್ರ ವಿಷ್ಣು ।
ಮೆಚ್ಚಿದ ಸುಜನರಿಗಿಚ್ಛೆಯ ಸುಖವೀವ ೧

ಶೇಷಶಯನ ಸರ್ವಲೋಕ । ಲೋಕೇಶ್ವರ ।
ದೋಷ ನಾಶ ಭವಪಾಶದೂರ ॥
ಭಾಸುರಾಂಗ ಹೃಷೀಕೇಶ ಭಕ್ತಜನ ।
ಪೋಷ ಕೃಪಾಕರ ಶ್ರೀಶ ನಮೋ ನಮೋ ೨

ಪರಮ ಪಾವನ ಪರಮೇಶ । ಪರಂಜ್ಯೋತಿ ।
ನಿರುಪಮ ನಿಶ್ಚಿಂತ ನಿರವದ್ಯನೆ ॥
ಸರಸಿಜನಾಭ ಪುರಾಣ ಪುರುಷೋತ್ತಮ ।
ಹರಿ ಮುರಾರಿ ಪರಮಾತ್ಮ ಸದಾನಂದ ೩

## ೧೩೨

ಇನ್ನಾದರೂ ದಯಬಾರದೆ ನಿನಗೆ ಸಂ-।
ಪನ್ನ ಮೂರುತಿ ಶ್ರೀಹರಿ ಪ

ಮುನ್ನ ಮಾಡಿದ ಸುಕೃತದಿಂದಲಿ ।
ನಿನ್ನ ನಾಮಸ್ಮರಣೆ ದೊರಕಿತು ॥
ಚೆನ್ನಕೇಶವರಾಯ ಪಾಲಿಸು ।
ನಿನ್ನ ನಂಬಿದನಾಥನನುದಿನ ಅ.ಪ

ಘೋರ ಸಂಸಾರದಿ ಪಾರಗಾಣದೆ ಬಿದ್ದೆ ।
ಧಾರಿಣಿಯಲಿ ಬಳಲಿದೆ ॥
ನೀರಜಾಕ್ಷನೆ ನಿಗಮವೇದ್ಯನೆ ।
ಪಾರ ರಹಿತನೆ ನಿರ್ಗುಣಾತ್ಮಕ ।
ವೀರ ನರಹರಿ ರೂಪ ತಾಳ್ದು ಕು ।
ಮಾರನನು ರಕ್ಷಿಸಿದ ದೇವನೆ ೧

ಕಂದ ಧ್ರುವನು ಬಂದು ನಿಂದು ಮಧುವನದಲ್ಲಿ ।
ಚಂದದಿಂ ತಪಗೈಯಲು ॥
ಬಂದು ಧ್ರುವಪದವಿಯನು ಕರುಣಿಸು ।
ತಂದು ಕಂದನ ಕಾಯ್ದ ದೇವಮು-।
ಕುಂದ ಲಕ್ಷ್ಮೀವರನೆ ಪೊರೆಯ್ಯೆ ।
ನಂದನಂದನ ದೇವ ಪಾಲಿಸು ೨

ಅಂಬರೀಷನ ಕಾಯ್ದೆ । ಕುಂಭಿನೀ ಪತಿಯಾದೆ ।
ನಂಬಿದ ದ್ರೌಪದಿಗಭಯವಿತ್ತೆ ॥
ಶಂಭುಮಿತ್ರನೆ ಪಾಲಿಸೀಕ್ಷಣ ।
ನಂಬಿದಜಮಿಳನಿಂಗೆ ಮೋಕ್ಷವ ।
ಸಂಭ್ರಮದಿ ಕೊಡುವಂತೆ ಭಕ್ತಕ–।
ದಂಬಪಾಲಕ ಶ್ರೀನಿವಾಸನೆ ೩

## ೧೩೩

ಇವನೆಂತ ಮಾಯಗಾರ । ಗೋಪಮ್ಮ ಕೇಳೆ ।
ಭುವನದೊಳಿವನೆ ಶೂರ ಪ

ಕವಿಗಳಿಗಾದರು । ವಿವರಿಸಲಸದಳ ।
ಭವಬಂಧಗಳ ನಿನ್ನ । ಕುವರನೆ ಬಿಡಿಸುವ ಅ.ಪ

ಮಕ್ಕಳ ಕೂಡಿಕೊಂಡು । ನಮ್ಮನೆಗಿವ–।
ನೊಕ್ಕಲಿಕ್ಕುವನು ಬಂದು ॥
ಹೊಕ್ಕು ಕರೆಯದ ಮುನ್ನ । ಚಿಕ್ಕ ಕರುಗಳ ಬಿಟ್ಟು ।
ಪಕ್ಕನೆ ಓಡುವ । ಸಿಕ್ಕನು ಯೆಮಗಿವ ೧

ಸುರಿಯುವ ಪಾಲ್ಮೊಸರ । ಬೆಣ್ಣೆಯ ಮುದ್ದೆ ।
ಕರದೊಳಗೀಡಾಡುವ ॥
ಜರೆದಡಳುತ ನಕ್ಕು । ಮರೆಸುವ ನಮ್ಮನು ।
ಒರಗಿದ ಮಕ್ಕಳ । ಕರೆದು ಡಬ್ಬಿಸುವನು ೨

ಉಂಡುದಕಾರಳುವರು । (ದನ ಕರು) ಗಳ ।
ಹಿಂಡಿದ ಪಾಲ್ಮೊಸರು ॥
ಕಂಡು ಇದೇನೆನೆ । ಭಾಂಡವ ಬಿಸುಡುತ್ತ ।
ಚೆಂಡಾಟದೊಳು ನೆಲ–। ನುಂಡುಂಡು ಕೆಸರಾಯ್ತು ೩

ನಿಲುಹುಗಳಲ್ಲಿಟ್ಟರು । ಕೈಗಳನೆತ್ತಿ ।
ನಿಲುಕದಿದ್ದರೆ ಭಾಂಡವು ॥
ಕಲುಗುಂಡಿ(ನಲಿ) ಕುಟ್ಟಿ । ಬಲು ಉದ್ದವರ ಮೇಲ್ ।
ನಿಲುತ ಪಾತ್ರವ ಕೊಂಡು । ಮೆಲುವ ನಾಟಕಧಾರಿ ೪

(ಬಲು) ಗತ್ತಲೆಯೊಳಿರಿಸೆ । ರತ್ನಾಭರಣ ।
ಬೆಳಗನ್ನು ಮೇಳವಿಸೆ ॥
ಕೆಳೆಯರ ಕರೆದಾಗ । ತಳವನ್ನು ತೋರಿಸಿ ।
ಕಳೆದು ತರಿಸುವ ನಾವಿ । ನ್ನುಳಿ (ವು)ಪಾಯವ ಕಾಣೆ ೫

ದೊರೆಯದಿದ್ದರೆ ಬೈವನು । ಮನೆಗೆ ಕಿಚ್ಚ-।
ನ್ನಿರಿಸುವೆನೆನ್ನುವನು ॥
ಕೆರಳಿ ಹೊಸ್ತಿಲ ಮೇಲೆ । ಸುರಿಯುವ (ಹೊಲಸನು) ।
ವೊರಳೊಳು ವಿಷ್ಟಿಸಿ । ಮರೆಯೊಳಡಗುವ ೬

ಛಲವುಳ್ಳಡೆಮ್ಮ ಮೇಲೆ । ಗೋಧನವನ್ನು ।
ನಿಲದೀಗ ತರಿಸಲ್ಲ(ದೆ) ॥
ಸುಲಿಗೆಗಾರಗೆ ತಕ್ಕ । ಬಲುಮೆಯೊಳ್ ಬುದ್ಧಿಯ-।
ನೊಲಿದು ಪೇಳುತಲೆಮ್ಮ । ಕುಲವನುದ್ಧರಿಸವ್ವ ೭

ಎಂದು ನಾನಾ ತೆರದಿ । ನಾರಿಯರು ಗೋ-।
ವಿಂದನನತಿ ಮುದದಿ ॥
ಸುಂದರ ಮೂರ್ತಿಯಾ । ನಂದದಿಂದಲೆ ನೋಡಿ ।
ಇಂದುವದನೆ ಗೋಪಿ । ಗೆಂದರೀ ಪರಿ ಚಾಡಿ ೮

ಮಕ್ಕಳಾಟವ ತಾಯಿಗೆ । ಪೇಳುವದಿದು ।
ತಕ್ಕ ಪದ್ಧತಿ ಧಾತ್ರಿಗೆ ॥
ಚಿಕ್ಕವನಿಗೆ ಬುದ್ಧಿ । ಪಕ್ಕನೆ ಪೇಳುವೆ ।
ಚೆಕ್ಕಸಗೊಳದಿರಿ ಅಕ್ಕು ಸದಾನಂದ ೯

## ೧೩೪

ಎಂಥ ಪಾಪಿ ನಾನು ಹರಿ ಹರಿ । ಗೋಪಾಲಕೃಷ್ಣ ।
ಎಂಥ ಪಾಪಿ ನಾನು ಹರಿ ಹರಿ ಪ

ಎಂಥ ಪಾಪಿ ನಾನು ಪೂರ್ವಭ । ವಾಂತರದೊಳಾರ್ಜಿಸಿದ ಕರ್ಮ ।
ತಿಂತಿಣಿಗಳ ಬಾಧೆಗಳನು । ಅಂತ್ಯಗಾಣದಾದೆನಯ್ಯ ಅ.ಪ

ಪರರಿಗುಪಕಾರಗಳ ಮಾಡದೆ । ನಾನನುದಿನದೊಳು ।
ಪರಹಿತಾರ್ಥ ಮನದೊಳೆಣಿಸದೆ ॥
ದುರಿತಬಾಧೆಯೊಳಗೆ ಬಿದ್ದು । ಪರಿಪರಿಯಾಸೆಯೊಳ್ ಬಳಲ್ದು ।
ನರಕದುಃಖದೊಳು ಗೋಳಿಡಲು । ಬರುವರಾರು ಕಾಣದಿರಲು ೧

ಪರರ ಆಪತ್ತುಗಳಿಗೊದಗದೆ । ಪರ ಪೀಡನಾಗಿ ।
ಇರುತ ಮಾಯಾಬಲೆಯೊಳಗೆ ಬಿದ್ದೆ ॥
ದುರಿತ ಕೋಟಿ ಋಣ ರೂಪಗಳು । ನಿರುತ ಬಾಧಿಸುತ್ತಲಿರಲು ।
ಕರೆದರಾರು ಬಾರದಿನಿತು । ಪರಿಯ ಭವಕಿಲ್ಬಿಷವನುಣುವ ೨

ದಾನ ಧರ್ಮಗಳನು ಮಾಡದೆ । ದರಿದ್ರನಾಗಿ ।
ಶ್ವಾನನಂತೆ ನಾನು ತೊಳಲಿದೆ ॥
ಏನು ಸಾಹಸಗಳನು ಮಾಡೆ । ಪಾನ ಭೋಜನಗಳಿಗಿಲ್ಲ ।
ತಾನು ತನ್ನದೆಂದಧರ್ಮ ನಾ । ಏನನೆಂದರು ಕೇಳರಯ್ಯ ೩

ಹೆಣ್ಣು ಹೊನ್ನು ಮಣ್ಣಿನಾಸೆಯ । ಜಾಲದೊಳು ಸಿಕ್ಕಿ ।
ಕಣ್ಣು ಕಾಣದಾದೆನಲ್ಲಯ್ಯ ॥
ಹಣ್ಣಿ ಕಾಮಕ್ರೋಧಲೋಭ । ವೆಣ್ಣೆ ಮಹಾಮದಮತ್ಸರದಿ ।
ಅನ್ಯರೆಂದು ಪರರ ನಿಂದಿಸಿ । ಪುಣ್ಯಹೀನನಾದೆನಯ್ಯ ೪

ಸರ್ವನಾಮ ಸರ್ವಕಾರಣ । ಸರ್ವಾತ್ಮನಾಗಿ ।
ಸರ್ವಶಬ್ದ ಸ್ಪರ್ಶರಸ ಗುಣ ॥
ಸರ್ವರೂಪ ಸರ್ವಗಂಧ । ಸರ್ವ ಜಗದ್ವಂದ್ಯ ನಿನ್ನ ।
ಸರ್ವವಿಧದಿ ಭಜಿಸಿ ನಿಜ । ಸರ್ವೇಶ ಶ್ರೀನಿವಾಸನೆನದೆ ೫

## ೧೩೫

ಏನು ನಿರ್ದಯನಾದೆ । ಭಕತ ವತ್ಸಲ ಕೃಷ್ಣ ।
ಕೃಪೆಯಿಲ್ಲವೇನೊ ನಿನಗೆನ್ನ ಮ್ಯಾಲೇ ಪ

ದೀನ ವತ್ಸಲನಾಗಿ ಯೆನ್ನ ಪೊರೆಯುವ ಭಾರ ।
ಇನ್ಯಾರಿಗಿಹುದಯ್ಯ । ಮನ್ನಿಸೆಲೊ ದೇವಾ ಅ.ಪ

ಒಂದೆ ಚಿತ್ತಿನೊಳು ನೀ । ನಂದೆ ನಾನಾಗಿ ಭವ ।
ಬಂಧನಕೆ ಹೊಂದಿಸಿದುದೇನಿದಯ್ಯಾ ।
ಮಂದ ಬುದ್ಧಿಯೊಳು ನಿಜದಂದವನೆ ಮರೆ ಮಾಡಿ ।
ಕೊಂಡು ಹುಟ್ಟಿಸುವ ಭ್ರಮೆಯಿಂದೆರಿ ನಿವಾರಿಸದೆ ೧

ಭೇದವಾದಾಟದೊಳು ಹಾದಿ ತಪ್ಪಿಸುತ ಶಿಲ ।
ಬಾಧೆಯೊಳು ಪೀಡಿಸುವದೇನಿದಯ್ಯಾ ।
ಮಾಧವನೆ ನಿನ್ನ ನಿಜ ಬೋಧೆಯಿಂದೆನಗಾಗಿ ।
ಆಧಾರವಾಗದೆ ನಿರಾಧಾರನಾಗುವರೆ ೨

ಸೃಷ್ಟಿ ಸ್ಥಿತಿ ಲಯವೆಂಬ ಕಟ್ಟಳೆಗಳಿಲ್ಲದಿಹ ।
ಶ್ರೇಷ್ಠ ಪರ ವಸ್ತು ನೀನಾಗಿರುತ್ತಾ ।
ಅಷ್ಟ ಪುರಪತಿಯೆನಿಸಿ ಗುಟ್ಟಿನೊಳಗಿರುತಿಹುದ ।
ಬಿಟ್ಟು ಮೈ ದೋರೊ ದಯವಿಟ್ಟು ಸದಾನಂದ ೩

## ೧೩೬

ಓಂ ನಮೋ ನಾರಾಯಣಾ ।
ಜಯ ಜಯ ನಮೋನಮೊ ।
ಓಂ ನಮೋ ನಾರಾಯಣ ಪ

ಓಂ ನಮೊ ಜಯ ಜಯತು ಶ್ರೀವರ ।
ಓಂ ನಮೋ ಸಜ್ಜನ ದುರಿತ ಹರ ।
ಓಂ ನಮೋ ರಘುಪತಿ ಮುರಾಂತಕ ।
ಓಂ ನಮೋ ಜಗದೀಶ ಪಾಲಿಸೊ ಅ.ಪ

ಶರಣು ಶರಣೆನುತಲಾನೂ । ಶರಣರಧಾತನೇ ।
ಸ್ಮರಿಸುವೆ ತವ ಲೀಲೆಯನೂ ।
ಪರಮ ಪುರುಷನೆ ನಿನ್ನ ।
ಶರಣನಲ್ಲವೆಯೆನ್ನೊಳು ।
ಕರುಣಾ ವಾರುಧಿ ನಿಂದು ।
ಪೊರೆಯೊ ಅನಾಥ ಬಂಧು ೧

ಆದಿ ದೇವನೆ ನಾ ನಿನ್ನ । ಆತುರದ ವಿ–।
ನೋದದಿ ಜನಿಸಲೆನ್ನಾ ।
ಬಾಧಿಸುವ ಮಾಯಾಗುಣಂಗಳು ।
ಹಾದಿ ತಪ್ಪಿಸಿ ಭವ ಶರಧಿಯೊಳು ।
ಮಾಧವನ ಮೈ ದೋರದಿರೆ ಯೆನ ।
ಆಧರಿಸಿ ಸಲಹುವರ ಕಾಣೆನು ೨

ಮಂದರಧರ ಮುಕುಂದಾ । ಗೋಪಿಯ ಕಂದಾ ।
ವಂದಿಸುವೆನು ಗೋವಿಂದಾ ।
ಸಂದೇಹ ಮಾಡದೆ ।

ಕಂದನ ಮೇಲ್ ಕೃಪೆ ।
ಯಿಂದು ಮೈ ದೋರೆನ್ನಾ ।
ತಂದೆ ಸದಾನಂದ ೩

## ೧೩೭

ಕಪಟ ನಾಟಕ ಸೂತ್ರಧಾರಿ ಸದಾನಂದ ।
ಕೃಪೆಯಾಗೆನ್ನೊಳು ಜಗತ್ಪತಿ ಶ್ರೀ ಗೋವಿಂದ ಪ

ಮಾತೆ ಪಿತನು ಸತಿ ಜಾತ ಬಾಂಧವರೆಂಬ ।
ರೀತಿಯಿಂದಖಿಳ ಯೋನಿಗಳ ಮಾಯಾ ।
ಆತುರ ಸಂಸಾರ ಶರಧಿಯಿಂದೆತ್ತುವ ।
ಧಾತ ನಿರ್ಭೀತ ಅನಾಥ ಸಂಜೀವಾ ೧

ಸತ್ಯವೆಂದೆನುತಲಾ ನಿತ್ಯ ಭೋಗಂಗಳಾ ।
ಕೃತ್ಯದಿ ಸುಖ ದುಖ್ಖಾಟವಿಯೊಳಗೇ ।
ಸತ್ತು ಹುಟ್ಟುತ ಮತ್ತೆ ಹತ್ತಿ ನಾಕದಿಂದತ್ತಾ ।
ಸುತ್ತಿರುವ ಕಾರಣ ಕರ್ತು ಮೈದೋರೋ ೨

ಓಂಕಾರದಾದಿ ಮಧ್ಯಾಂಶ ತ್ರೈಗುಣದಿ ನೀ ।
ಲಂಕರಿಸಲು ತಾಮಸರಜಾದಾ ।
ಶಂಕೆಗಳಡಗೆ ನಿಶ್ಯಂಕೆ ಚಿದಾನಂದ ।
ವೆಂಕಟರಾಯನೆ ದಯಮಾಡಯ್ಯಾ ೩

ಆದಿ ಮಧ್ಯಾಂಶದೋಳ್ನೀನೆ ಯೆನಗೆ ದಾತ ।
ಭೇಧವ ವೇಧಿಸಿ ಆಧರಿಸೋ ।
ಶ್ರೀಧರ ಸಾಕ್ಷಾತ್ತಿನೋದ ಸಾರೂಪ್ಯದ ।
ಪಾದ ಸಾಮೀಪ್ಯ ಸಾಲೋಕ್ಯವಿತ್ತೂ ೪

ಕರುಣವಾರುಧಿ ತವ ಚರಣದ್ವಯಂಗಳ ।
ನಿರತ ಸೇವಕನೊಳು ಕರುಣವ ಮಾಡೋ ।
ಶಿರಿಯರಸನೆ ಗುರುರಾಯ ವೈಕುಂಠದೊ ।
ಥ್ತರಳನ ಸಲಹಯ್ಯ ದೊರೆ ಶ್ರೀನಿವಾಸಾ ೫

## ೧೩೮

ಕಿಂಕರನು ನಾನೊಂದು ಬಿನ್ನಪವ ಪ

ಪಂಕಜಾಕ್ಷನೆ ನಿನ್ನೊಡನೆ ನಾ ।
ಮಂಕುಗಳ ನುಡಿಯೊರೆಯೆನೆಂದಿಗು ।
ಸೋಂಕಿಕೊಂಡಿಹದೊಂದವಸ್ಥೆಯ ।
ಶಂಕೆಯನು ಪರಿಹರಿಸೊ ಕರುಣದಿ ಅ.ಪ

ಕರ ಮುಗಿದು ಬೇಡುವೆನು ಭಾಗ್ಯನಿಧೀ । ತಾಪತ್ರಯವ ತರ –।
ಹರಿಸಲಾರದೆ ಕರಗುವೆನು ದಿನದಿ ॥
ಗರುಡವಾಹನನೆನ್ನ ದೃಢವನು ।
ಪರಿಕಿಸಲು ನಾನೇಸರವನೀ ।
ಶರಣರಕ್ಷಕನೆಂಬ ಬಿರುದನು ।
ನೆರೆದು ಪಾಲಿಪುದೆನ್ನ ಮುದದಲಿ ೧

ದೃಢದೊಳಗೆ ಭಜಿಸುವೆನು ತವಚರಣ । ಸೌಭಾಗ್ಯಸುಖದಿಂ ।
ಪೊಡವಿಯೊಳಗಿರಿಸೆನ್ನ ಭಯಹರಣ ॥
ಎಡೆಬಿಡದೆ ಅನುದಿನದಿ ವಾಸದ ।
ಕಡಲೊಳಗೆ ಬಿದ್ದಿರುವ ಎನ್ನನು ।
ಪಿಡಿದೆಳೆದು ಇಷ್ಟಾರ್ಥ ಸಂಪದ ।
ಸಡಗರದಿ ಕೊಡು ಜಡಜಲೋಚನ ೨

ಗುಡುಗುಡೆನುತಿದೆ ಮಿಂಚು ಗುಡುಗುಗಳು । ಈ ದಿನದೊಳೆಲ್ಲ ।
ಎಡೆಬಿಡದೆ ತುಂಬಿಹವು ಮೋಡಗಳು ॥

ತಡೆಯದೀ ಕ್ಷಣ ಮಳೆಯ ಸುರಿದರೆ ।
ಬಡವನೊಡವೆಗಳೆಲ್ಲ ಕೆಡುವುದು ।
ಅಡಸಿದಾಪತ್ತಿನೊಳು ಕಾಯುವ ।
ಒಡೆಯ ನೀನೆ ಗತಿ ಸದಾನಂದ ೩

## ೧೩೯

ಕ್ಷಮಿಸೊ ಯೆನ್ನಪರಾಧಗಳನು । ಗೋಪಾಲಕೃಷ್ಣ ।
ಕ್ಷಮಿಸೊ ಯೆನ್ನಪರಾಧಗಳನು ಪ

ಕುಮತಿ ನಾನು ನಿನ್ನ ಮಾಯಾ
ಭ್ರಮಿತನ ಕರುಣದೊಳೀಕ್ಷಿಸೊ ಅ.ಪ

ಸೃಷ್ಟಿಸಿದಾತನು ಪಾಲಿಸುವಾತನು ।
(ಇಷ್ಟನು) ನೀನೆ ಗೋವಿಂದರಾಯ ॥
ಅಷ್ಟಿಷ್ಟಲ್ಲದ ಕಷ್ಟದ ಭವದೊಳ–।
ಗಿಷ್ಟಾದರು ದಯೆಯಿಟ್ಟು ಪೊರೆಯೊ ಹರಿ ೧

ತಂದೆಯು ತಾಯಿಯು ಬಂಧುವು ನೀನೆ ।
ಮಂದರಧರ ಸರ್ವೇಶ್ವರನೆ ॥
ಕಂದನು ಬೇಡುವೆನಿಂದು ತವಾಂಘ್ರಿಯ ।
ನಂದದ ಸ್ಮರಣೆಯ ಕುಂದದೆ ಪಾಲಿಸೊ ೨

ಸತಿಸುತರಿಹಪರವೆನಗೆ ನೀನೆ ಸ–।
ದ್ಗತಿಮತಿ ನೀನೆ ಸರ್ವೇಶಯೀಶ ॥
ಶ್ರುತಿ ನುತ ಎನ್ನಯ ಜತೆಯನ್ನಗಲದೆ ।
ಸತತ ಮೈದೋರೊ ಸದಾನಂದ ಗುರುವರ ೩

## ೧೪೦

ಗೋವಿಂದ ಹರಿ ಗೋವಿಂದ । ನಮ್ಮ ।
ನಂದನ ಕಂದ ಮುಕುಂದ ಮುರಾರಿ ಪ

ಮತ್ಸ್ಯ ಕೂರ್ಮನಾಗಿ ಆಡಿದನೆ ।
(ಪಶ್ಯತಿ) ವರಹನೆಂದೋಡಿದನೆ ।
ಉತ್ಸಹದಲಿ ನರಹರಿರೂಪ ತಾಳ್ದ ಶ್ರೀ–।
ವತ್ಸಲಾಂಛನ (ವಟುರೂಪ) ವಾಮನ ಹರಿ ೧

ಭಾರ್ಗವ ರಾಮ ಶ್ರೀ ಕೃಷ್ಣ ಚಿದಾನಂದ ।
ಮಾರ್ಗದ ಬುದ್ಧ ದಯಾಪರನೆ ।
ಸ್ವರ್ಗಾಪವರ್ಗ ವಿಸರ್ಗ ಪಾತಾಳದಿ ।
ಭೋಗ್ರುಡಿಸುವ ಕಲ್ಕಿ ನಿರ್ಗಮನೆ ಹರಿ ೨

ವಾರಿಜನಾಭ ಮುರಾರಿ ಮುಕುಂದ ಉ–।
ದಾರ ಸುದಾರ ಕೃಪಾಕರನೆ ।
ಸಾರಸಾಕ್ಷಮದ್ ಹೃದಯದಿ ನೆಲಸಿ ಮೈ–।
ದೋರೋ ಸದಾನಂದ ನಾರಾಯಣ (ಹರಿ) ೩

## ೧೪೧

ನಾ ಮಾಡಿದ ತಪ್ಪ ಕ್ಷಮಿಸೊ ರಂಗಯ್ಯ ।
ಸ್ವಾಮಿ ರಕ್ಷಿಸೊ ಬಂದು ನೀನೆ ಎನ್ನಯ್ಯ ಪ

ಪ್ರೇಮದೋರದೆ ನಿನಗಿನ್ನು ಶ್ರೀಹರಿಯೆ ।
ಸೋಮಶೇಖರ ಪ್ರಿಯ ಸಲಹೆನ್ನ ದೊರೆಯೆ ಅ.ಪ

ಜಲ್ಮ ಜಲ್ಮದ ದೋಷವೆಲ್ಲ ಬಂಧಿಸುತೆನ್ನ । \
ನಿಲ್ಲಗೊಡದ ಪರಿ ಸೊಲ್ಲಿಸಲರಿಯೆನು ॥
ಪುಲ್ಲಲೋಚನ ಪಾದಪಲ್ಲವದೊಳು ಬಿದ್ದು ।
ತಲ್ಲಣಿಸುವೆ ನಿನಗಿನ್ನು ಕರುಣವಿಲ್ಲ ೧

ನೀನೆನ್ನ ಸೃಷ್ಟಿಸಿದಂದಿನಿಂದೀ ವರೆಗೆ ।
ನಾನೇನ ಗೈದೆನೊ ವರ್ಣಿಸಲರಿಯೆ ॥
ಸಾನುರಾಗದಿ ಕೈಯ ಮುಗಿದು ಬೇಡುವೆನು ।
ದೀನರಕ್ಷಕ ತ್ರಾಹಿ ತ್ರಾಹಿ ಮಣಿವೆನು ೨

ದಮ್ಮಯ್ಯ ಬಳಲಿಸದಿರು ಎನ್ನ ತಂದೆ ।
ಹಮ್ಮೆನ್ನೊಳಿಲ್ಲವೆಂಬುದ ನೀನೆ ಕಂಡೆ ॥
ಕರ್ಮ ವಂಚಿಸುತಲಿ ಸಲಹಬೇಕೆಂದೆ ।
ನಿರ್ಮಲಗೊಳಿಸೆನ್ನ ಮನವ ನೀನಿಂದೆ ೩

ಧ್ರುವ ಪ್ರಹ್ಲಾದಾಂಬರೀಷ ರುಕ್ಮಾಂಗ ।
ತವ ಪಾದಭಜಕನಕ್ರೂರ ಸುದಾಮ ।
ಭುವನ ವಿಖ್ಯಾತ ಸತ್ಯಾತ್ಮ ಹರಿಶ್ಚಂದ್ರ ।
ಇವರಿಗಿಷ್ಟಾರ್ಥವನಿತ್ತು ಪಾಲಿಸಿದಾತ ೪

ಸೋತೆ ನೀ ಭವ ಬಂಧದೊಳಗೆ ನಾ ಸಿಲುಕಿ ।
ದಾತ ನೀನ್ನೈತಂದೆನ್ನನು ತಕ್ಕೈಸಿ ॥
ಪ್ರೀತಿಯೊಳೆನ್ನ ಮನದಿ ನಿಂದು ಸುಖದಿ । ನಿ ।
ರ್ಭೀತ ಶ್ರೀನಿವಾಸ ಪಾಲಿಸೊ ಮುಕುತಿ ೫

## ೧೪೨

ನಾರಾಯಣಯೆಂಬ ನಾಮಾಮೃತವ ಸವಿಯೊ ।
ಘೋರ ಭವಶರಧಿಯೊಳಗಿರುವ ಮನವೆ ಪ

ದುರಿತವರ್ಜಿತನಾಗಿ ಕರಕರಿಯ ಹೋಗಾಡಿ ।
ನಿರತ ಸುಖ ಸಾಮ್ರಾಜ್ಯ ಗುರುವೆ ನೀನಾಗಿ ಅ.ಪ

ನಿನ್ನೊಳವ ನೀನರಿಯೆ, ಅನ್ಯವೆಂಬುವದಿಲ್ಲ ।
ಚಿನ್ಮಯ ಚಿದಾನಂದ ನೀನಿದೆಲ್ಲ ॥
ಬನ್ನಬಡುವವನಲ್ಲ, ಗನ್ನಗಾತಕನಲ್ಲ ।
ಜನ್ಮ ಜರೆ ಮರಣದ ಭಿನ್ನ ನಲ್ಲ ೧

ಚಿತ್ತ ಚಂಚಲನಲ್ಲ ಅಸ್ಥಿರದ ಪದವಲ್ಲ ।
ಸುತ್ತಿ ಸುತ್ತಿ ತೊಳಲಿ ಬಳಲುವನಲ್ಲ ।
ಅತ್ತಲಿತ್ತಲು ಎತ್ತಲುತ್ತಮೋತ್ತಮನೆಲ್ಲ ।
ಕರ್ತೃ ಪರಮಾತ್ಮ ಪರಂಜ್ಯೋತಿ ನೀನೆಲ್ಲ ೨

ಆದಿ ಮಧ್ಯಾಂತಗಳ ವಾದಾಟದವನಲ್ಲ ।
ಭೇದ ಕಲ್ಮಷವಖಿಲಬಾಧನಲ್ಲ ॥
ವೇದವೇದಾತ್ಮ ಶುದ್ಧಾತ್ಮ ನಿಜದಾತ್ಮ ಜಗ ।
ದಾಧಾರ ಮೂರ್ತಿ ಸದಾನಂದ ಕೀರ್ತಿ ೩

## ೧೪೩

ನಾರಾಯಣ ಹರಿ । ನಾರಾಯಣ ಲಕ್ಷ್ಮೀ ।
ನಾರಾಯಣ ಹರಿ ಗೋವಿಂದ ಪ

ಕ್ಷೀರ ಶರಧಿಯೊಳು । ಉರಗಶಯನದೊಳು ।
ಸಿರಿಯು ಸಹಿತ ಮೆರೆದಿರುವ ಜಗದ್ಗುರು ಅ.ಪ

ಮತ್ಸ್ಯಾವತಾರದೊಳ್ ಜಲಧಿಯೊಳಾಡಿದೆ ।
ಧೂರ್ತ ತಮಾಸುರನನು ತರಿದೆ ॥
ಸತ್ಯವ್ರತನನು ಸ್ವಸ್ಥದೊಳಿರಿಸಿದೆ ।
ಇತ್ತು ವೇದವ ಶತಧೃತಿಯನೆ ಸಲಹಿದೆ ೧

ಸುರರನ್ನಸುರರ ನೆರಹಿದೆ ದುಗ್ಧ ।
ಶರಧಿಯ ಮಥನವ ಮಾಡಿಸಿದೆ ॥
ಗಿರಿಯನು ಕೂರ್ಮಾಕೃತಿಯೊಳು ಧರಿಸಿದೆ ।
ಸುರಿ ಸುರಿದಮೃತವ ದಿವಿಜರಿಗುಣಿಸಿದೆ ೨

ಲೋಕೇಶನ ನಾಸಿಕದೊಳಗುದಿಸುತ ।
ಸೂಕರನೆನಿಸಿ ವಿತಳಕಿಳಿದೆ ।
ಪೋಕ ಹಿರಣ್ಯನ ಶಿರವ ಕತ್ತರಿಸಿದೆ ।
ಜೋಕೆಯಿಂದ ತ್ರೈಜಗವನು ಸಲಹಿದೆ ೩

ಕಂಭದಿ ರೌದ್ರಾಕಾರದೊಳುದಿಸಿದೆ ।
ಸಂಭ್ರಮದೊಳು ದುರುಳನ ತರಿದೆ ॥
ನಂಬಿದ ಪ್ರಹ್ಲಾದನ ನೀ ಸಲಹಿದೆ ।
ಕುಂಭಿನಿಯೊಳು ನರಹರಿಯೆಂದೆನಿಸಿದೆ ೪

ಲಲನೆಯಸಿತಿ ಗರ್ಭದಿ ಸಂಜನಿಸಿದೆ ।
ಛಲದೊಳು ಭೂದಾನವ ಕೇಳ್ದೆ ॥
ಬಲಿಯನು ವಿತಳದಿ ಸುಸ್ಥಿರಗೊಳಿಸಿದೆ ।
ಒಲಿದು ತ್ರಿವಿಕ್ರಮ ವಾಮನನೆನಿಸಿದೆ ೫

ಜಮದಗ್ನಿಯ ಸತಿಯುದರದೊಳುದಿಸಿದೆ ।
ಕುಮತಿ ಕ್ಷತ್ರಿಯರನು ಹತಗೈದೆ ॥
ನಮಿಸುತ ಮಾತೆಯ ಶಿರವನ್ನಿಳುಹಿದೆ ।
ಅಮಿತ ಪರಾಕ್ರಮಿ ಭಾರ್ಗವನೆನಿಸಿದೆ ೬

ದಶರಥನರಸಿ ಕೌಸಲ್ಯೆಯೊಳುದಿಸಿದೆ ।
ಕುಶಿಕಾಧ್ವರ ಪಾಲನಗೈದೆ ॥
ವಿಷಮ ರಾವಣನ ಶಿರವ ಕತ್ತರಿಸಿದೆ ।
ಶಶಿಮುಖಿ ಸೀತಾರಾಮನೆಂದೆನಿಸಿದೆ ೭

ವಸುದೇವನ ಸತಿದೇವಕಿಗುದಿಸಿದೆ ।
ಕಂಸ(ದೈತ್ಯ)ನನು ಹತಗೈದೆ ॥
ಸಸಿ(ನದಿಂ) ಭೂಮಿಯ ಭಾರವನಿಳುಹಿದೆ ।
ಅಸುರಾಂತಕ ಶ್ರೀಕೃಷ್ಣನೆಂದೆನಿಸಿದೆ ೮

ತ್ರಿಪುರರ ಸತಿಯರ ವ್ರತವನು ಕೆಡಿಸಿದೆ ।
ಗುಪಿತದೊಳಮೃತವ ಸೇವಿಸಿದೆ ॥
ಕೃಪೆಯೊಳು ದಿವಿಜರ ನೆರವಿಯ ಸಲಹಿದೆ ।
ಅಪರಿಮಿತ ಮಹಿಮ ಬುದ್ಧನೆಂದೆನಿಸಿದೆ ೯

ಭೂಸುರ ವಿಷ್ಣು ಕೀರ್ತಿಯ ಸತಿಗುದಿಸಿದೆ ।
ದಾಸ ಜನರ ಬಿನ್ನಪ ಕೇಳ್ದೆ ॥
ಘಾಸಿ(ಪ) ಮ್ಲೇಂಛರ ಕುಲವ ಮರ್ದಿಸಿದೆ ।
ಸಾಸಿರ ನಾಮನೆ ಕ(ಲ್ಕಿ)ಯೆಂದೆನಿಸಿದೆ ೧೦

ಹತ್ತವತಾರದಿ ದೈತ್ಯರ ಮಡುಹಿದೆ ।
ಪೃಥ್ವಿಯ ಭಾರವನಿಳುಹಿಸಿದೆ ॥
ಭೃತ್ಯರ ಕುಲವ ಪವಿತ್ರವಗೈದೆ ।
ಹೃತ್ಕಮಲೇಶ ಸದಾನಂದನೆನಿಸಿದೆ ೧೧

## ೧೪೪

ನಿನ್ನ ಕೃಪೆಯಿಲ್ಲದನ್ಯವು ಬೇಡ ಕೃಷ್ಣಾ ।
ನಿನ್ನ ದಾಸರ ದಾಸನೆನಿಸೂ ಶ್ರೀಕೃಷ್ಣ ॥ ಪ

ನಿನ್ನ ಕೃಪೆಯಿದ್ದರೀ ದೇಹಕ್ಕೆ ಸುಖವಿಹುದು ।
ನಿನ್ನ ಕೃಪೆಯಿರೆ ಬುದ್ಧಿ ಶುದ್ಧವಹುದೂ ।
ನಿನ್ನ ಕೃಪೆಯಿರೆ ಮನಕೆ ಶಾಂತಿ ಗುಣ ಸಿದ್ಧಿಪುದು ।
ನಿನ್ನ ಕೃಪೆಯೊಳು ಜನ್ಮ ಸುಪವಿತ್ರವಹುದೂ ೧

ನಿನ್ನ ಕೃಪೆಯಿದ್ದರೇ ಹೆಂಡತಿಯ ಸುಖವಿಹುದು ।
ನಿನ್ನ ಕೃಪೆ ಇರಲು ಮನೆ ವೈಕುಂಠವಹುದೂ ।
ನಿನ್ನ ಕೃಪೆಯಿದ್ದರೇ ಸತ್ಪುತ್ರರೊದಗುವರು ।
ನಿನ್ನ ಕೃಪೆಯಿರಲು ಸಂಸಾರ ಸುಖವಹುದೂ ೨

ನಿನ್ನ ಕೃಪೆಯಿರುವ ಸಂಪದಗಳಲಿ ಸುಖವಿಹುದು ।
ನಿನ್ನ ಕೃಪೆಯಿರೆ ವಿಷಯ ಭೋಗ ಸುಖವಹುದೂ ।
ನಿನ್ನ ಕೃಪೆಯಿರೆ ಸರ್ವ ಕಾರ್ಯಗಳು ಸಿದ್ಧಿಪುದು ।
ನಿನ್ನ ಕೃಪೆಯಿರಲು ಸತ್ಕೀರ್ತಿ ದೊರಕುವುದೂ ೩

ನಿನ್ನ ಕೃಪೆಯೊಳಗಾಯುರಾರೋಗ್ಯ ಸಿದ್ಧಿಪುದು ।
ನಿನ್ನ ಕೃಪೆಯುರಲು ಸೌಭಾಗ್ಯ ಸುಖವಹುದೂ ।
ನಿನ್ನ ಕೃಪೆಯಿರಲು ಸದ್ಧರ್ಮಾರ್ಥ ಸಿದ್ಧಿಪುದು ।
ನಿನ್ನ ಕೃಪೆಯೊಳು ಕಾಮ್ಯದಿಂ ಮೋಕ್ಷವಹುದೂ ೪

ನಿನ್ನ ಕೃಪೆಯಾದರೇ ಭವರೋಗ ಹರವಹುದು ।
ನಿನ್ನ ಕೃಪೆಯೊಳು ಭವ ಭಯಗಳು ತೊಲಗುವದೂ ।
ನಿನ್ನ ಕೃಪೆಯೊಳು ಭವದ ಬಂಧ ಬಿಡುಗಡೆಯಹುದು ।
ನಿನ್ನ ಕೃಪೆಯೊಳು ಸದಾನಂದ ಸುಖವಹುದೂ ೫

## ೧೪೫

ನಿನ್ನವ ನಾನಲ್ಲವೋ । ಶ್ರೀಕೃಷ್ಣರಾಯ ।
ಎನ್ನ ಕೈ ಬಿಡಬೇಡವೋ ಪ

ಮುನ್ನಿನಾರಭ್ಯ ಮನ್ನಿಸಿ ಪೊರೆಯುವ- ।
ರಿನ್ನಾರ ಕಾಣೆನು ಪನ್ನಗಶಯನನೆ ಅ.ಪ

ನೊಂದೆನು ಬಹು ಜನ್ಮದಿ । ಶ್ರೀರಂಗನೆ ।
ಬಂದೆನು ನರಜನ್ಮದಿ ॥

ಹೊಂದಿದ ಭವಬಾಧೆಗೆಂದಿಗು ಕಡೆಯಿಲ್ಲ ।
ತಂದೆ ಅನಾಥರ ಬಂಧು ಕಾಪಾಡಯ್ಯ ೧

ಧ್ರುವರಾಯನ ಪಿತನು । ಮನ್ನಿಸದಿರೆ ।
ತವ ಪಾದವನೆ ಸೇರ್ದನು ॥
ಭವಬಂಧವನೆ ಕಿತ್ತು ತವ ಸಾನ್ನಿಧ್ಯವನಿತ್ತು ।
ಭುವನವಿಖ್ಯಾತನೆಂದೆನಿಸಿ ಕಾಯ್ದವ ನೀನೆ ೨

ತರಳನ ಕೊಲುವೆನೆಂದು । ಬಾಧಿಸುತಿರೆ ।
ನರಹರಿಯಾಗಿ ಬಂದು ॥
ದುರುಳನ ಭೇದಿಸಿ ಶರಣ ಪ್ರಹ್ಲಾದನ ।
ಸ್ಥಿರ ಸುಖದೊಳು ಕಾಯ್ದೆ ಕರುಣಿಗಳರಸನೆ ೩

ಅಂಬರೀಷನ ವ್ರತವ । ಕೆಡಿಸಲೆಂದು ।
ಡೊಂಬಿಯ ಮಾಡಿರುವ ॥
ಡಾಂಭಿಕ ಮುನಿಯನ್ನು ಬೆಂಬಟ್ಟಿ ಚಕ್ರದಿ ।
ಇಂಬಿಟ್ಟು ಭಕುತನ ಸಂಭ್ರಮದೊಳು ಕಾಯ್ದೆ ೪

ಕರಿರಾಜನಿಗೊಲಿದು । ನೆಗಳ ಬಾಯ ।
ತ್ವರಿತದಿಂದಲಿ ಸೀಳ್ದು ॥
ಭರದಿಂದ ಗರುಡನಲೇರಿಸಿ ಕರೆತಂದು ।
ಶರಣನ ಸಲಹಿದ ಪರಮ ಪುರುಷ ನೀನೆ ೫

ಏಕಾದಶಿಯ ವ್ರತವ । ಮಾಡಿದ ಪುಣ್ಯ– ।
ಶ್ಲೋಕನು ರುಕ್ಮಾಂಗದ ॥
ಬೇಕಾದ ಬವಣೆಗ । (ಳೇಕಾಕಿ) ಪಡೆಯಲು
ಜೋಕೆಯೊಳ್ ನಿಜದಿ । ಸಾಕಿದೆ ಕರುಣಾಳು ೬

ದ್ರುಪದರಾಯನ ಮಗಳ । ಸಭೆಯೊಳಗಂದು ।
ಅಪಮಾನಗೈದ ಖೂಳ ॥

ಕಪಟನಾಟಕ ನಿನ್ನ ಗುಪಿತದಿ ನೆನೆಯಲು
ಕೃಪೆಯೊಳವಳಿಗೊಲಿಖಿಲವಸ್ತ್ರವನಿತ್ತೆ ೭

ಹೊತ್ತು ತಪ್ಪಿಸುತ ಬಂದ । ಋಷಿಗಳಿಗೊಂದು ।
ತುತ್ತನ್ನವಿರದ (ಕಾಲ)
ಸ್ತೋತ್ರಕೊಲಿದು ಬಂದು ಯತಿಗಳ ಸಂತೈಸಿ ।
ಮತ್ತೆ ಪಾಂಡವರನ್ನು ಸತ್ಯಾತ್ಮರೆನಿಸಿದೆ ೮

ಭೂಸುರರಡಿಗೆ ಬೀಳೆ । ಕುಲಹೀನನ ।
ವಾಸದಿ ಬಾಯಬಿಟ್ಟೆ ॥
ಲೇಸಿನೊಳ್ ಕುಡುತೆ ಪಾಲ್(ಸೂಸಿ) ತೃಪ್ತಿಯ ಪಟ್ಟೆ ।
ದಾಸ ವಿದುರನಿಗೆ ಲೇಸ ಮುಕ್ತಿಯ ಕೊಟ್ಟೆ ೯

ಗಂಧವ ಸೆಳೆದುಕೊಂಡೆ । ಶ್ರೀ ವಕ್ರೆಯ ।
ಅಂದವ ಸರಿಮಾಡಿದೆ ॥
ಮಂದಾರ ಮಾಲೆಯ ತಂದ ಸುದಾಮನ ।
ವಂದ್ಯನೆಂದೆನಿಸಿದೆ ಇಂದಿರಾ ವರದನೆ ೧೦

ಬಡತನದೊಳಗೆ ಸೋತ । ಕುಚೇಲನು ।
ಪಿಡಿಯವಲಕ್ಕಿ ತಂದ ॥
ಕಡು ಕೃಪೆಯೊಳು ಉಣಬಡಿಸಿ ನೀನಾತನ ।
ದೃಢಭಕ್ತಿಗೊಲಿದಿತ್ತೆ ತಡೆಯದಿಷ್ಟಾರ್ಥವ ೧೧

ನಾನೇನು ಮಾಡಿದೆನು । ಅಪರಾಧವ ।
ನೀನೇನು ತೋರದೇನು ॥
ದೀನವತ್ಸಲನೆಂಬ ಮಾನ ನಿನಗಿಹುದಾಗಿ ।
ಏನು ಗತಿಯೆನಗಿನ್ನು ನೀನೊಲಿಯದಿಲ್ಲಿನ್ನು ೧೨

ಬಾಲ ನಾ ನಿನಗಲ್ಲವೊ । ನಿನಗೆ ಯೆನ್ನ ।
ಮೇಲೆ ಕರುಣವಿಲ್ಲವೊ ॥

ಕಾಲಿಗೆರಗಿ (ಶಿರವೊಲಿದು) ಬೇಡುವೆನಯ್ಯ ।
ಲೀಲೆಯಿಂದನುದಿನ ಸಲಹೊ ಸದಾನಂದ ೧೩

## ೧೪೬

ನೀನೆನಿಸಿದಂತಹುದು । ನಾ ನೆನದುದಾಗದಿರ–।
ಲೇನು ಕಾರಣ ಯೆನ್ನ ಪ್ರಾಣನಾಥ ಪ

ನಾ ನಿನ್ನೊಳಾದವನು । ನೀನೆನ್ನೊಳಿದ್ದವನು ।
ನೀನೆ ವಂಚಿಸಿದರೆನ । ಗೇನು ಗತಿ ಹರಿಯೇ ಅ.ಪ

ನಿನ್ನನೇ ನೆನವುತ್ತ । ನಿನ್ನನೇ ಪೊಗಳುತ್ತ ।
ನಿನ್ನ ಸೇವೆಯೊಳಿರುವ ದಾಸ ನಾನೂ ।
ಯೆನ್ನ ಮನದೊಳು ಚರಿಪ । ಪ್ರೇರಕನು ನೀನಾಗಿ ।
ನಾ ನೆನದುದಕೆ ವಿಘ್ನ । ನೀನೆಸಗಬಹುದೇ ೧

ನಿನ್ನಿಂದ ನಾನಾಗಿ । ಯೆನಗೆ ಗತಿ ನೀನಾಗಿ ।
ಯೆನ್ನ ತಾಯ್‌ತಂದೆ ಗುರುದೇವ ನೀನಾಗಿ ।
ಯೆನ್ನ ಸತಿ ಸುತರು ಸಂಪದವೆಲ್ಲ ನೀನಾಗಿ ।
ನೀನಚಿಂತ್ಯನು ಯೆನಗ । ದೇನು ಚಿಂತೆಗಳೂ ೨

ಇನ್ನು ಸಾಕಯ್ಯ । ನಿನ್ನಯ ಕಪಟ ನಾಟಕದೊ– ।
ಳೆನ್ನ ಬಳಲಿಸಲು ನಿನಗನ್ಯನೇನೋ ॥
ದೀನ ವತ್ಸಲನು ನೀನಾದರೆ ನನಗೊಲಿದೀಗ ।
ನಿನ್ನಂತೆ ಯೆನ್ನನು ಸದಾನಂದನೆನಿಸೋ ೩

## ೧೪೭

ನೀನೆ ಸಕಲ ಲೋಕನಾಥನು । ಶ್ರೀಪತಿ ಗಿರೀಶ ।
ನೀನೆ ಸರ್ವ ಸೂತ್ರಧಾರನು ಪ

ನೀನೆ ಸಕಲ ಲೋಕಕೊಡೆಯ ।
ನೀನೆ ಸಕಲ ಪ್ರಾಣಗೆರೆಯ ।
ನೀನೆ ಶಿಕ್ಷಾರಕ್ಷಾ ಕರ್ತು ನೀನೆ ಆದಿಶಕ್ತಿ ವಸ್ತು ಅ.ಪ

ಮೂರು ಪುರವ ನೀನೆ ನಿರ್ಮಿಸಿ । ಸಾಹಸ್ರರೂಪ ।
ಮೂರು ಗುಣಗಳಲ್ಲಿ ನಿಲ್ಲಿಸಿ॥
ಮೂರುಕಾಲ ಮೂರು ಮೂಲ । ಮೂರಕ್ಕೆರಡು ಕೂಡಿ ಸಾರ ।
ಮೂರು ಆರು ದೋಷದೂರ । ಮೂರು ಸುಖಕ್ಕೈಕ್ಯನೆನಿಸೊ ೧

ತರಳ ಧ್ರುವನ ಮನವ ಪರಿಕಿಸಿ । ಮೇಲ್ ಲೋಕವಿತ್ತೆ ।
ಕರುಣದಿಂದಲವನ ರಕ್ಷಿಸಿ ॥
ದುರುಳ ದೈತ್ಯನನ್ನು ಕೊಂದು । ಹರುಷದಿಂ ಪ್ರಹ್ಲಾದನಿಗೆ ।
ನಿರತ ಭಕ್ತಿ ಪಾಲಿಸಿದ । ದುರಿತಹರನೆ ಶರಣು ಶರಣು ೨

ಚಲವ ಪಿಡಿದು ಸತ್ಯ ಪೊರೆದನು । ಹರಿಶ್ಚಂದ್ರರಾಜ ।
ಲಲನೆ ಪುತ್ರರನ್ನೆ ತೊರೆದನು ॥
ಹರಿಯೆ ನೀನೆ ಗತಿಯೆಂದೆನಲು । ಒಲಿದೆ ಮೂರು ರೂಪವಾಗಿ ।
ಕರೆದು ಪತ್ನೀಸುತರನಿತ್ತು । ನಿಲದೆ ಮೋಕ್ಷದೊಳಗೆ ಪೊರೆದೆ ೩

ಭಾಗವತರು ಪಾಂಡುತನುಜರು । ಜೂಜಾಟವಾಡಿ ।
ಭೋಗ ಭಾಗ್ಯಗಳನು ತೊರೆದರು ॥
ರಾಗರಹಿತರಾಗಿ ಭಕ್ತಿ । ಯೋಗದಿಂದ ನಿನ್ನ ಭಜಿಸಿ ।
ಭೋಗದೀಶರಾಗಿ ಸುಖದ । ಸಾಗರದೊಳು ಮೆರೆದರಯ್ಯ ೪

ಇಂದು ಯೆನ್ನ ಕೈಯ ಬಿಡದಿರು । ಗೋವಿಂದರಾಯ ।
ನೊಂದೆನಯ್ಯ ಭವದ ಭಯದೊಳು ॥
ವಂದಿಸುವೆ ಅನಾಥನಾಗಿ । ಚಂದದಿಂದಲೆನ್ನ ಕೂಡಿ ।
ತಂದೆ ಶ್ರೀನಿವಾಸ ನಿನ್ನ । ಮಂದಿರದೊಳೆನ್ನ ಸಲಹೊ ೫

## ೧೪೮

ಪಾಲಿಸ್ಯೆ ಶ್ರೀ ಲೋಲನೆ ಎನ್ನ । ಗೋಪಾಲಕೃಷ್ಣನೆ ।
ಪಾಲಿಸ್ಯೆ ಶ್ರೀ ಲೋಲನೆ ಎನ್ನ ಪ

ಕಾಲ ಕಾಲ ಸುಶೀಲ ದೇವಕಿ ।
ಬಾಲ ಕೌಸ್ತುಭಲೋಲ ಭಕ್ತರ ।
ಪಾಲ, ತುಳಸೀ ಮಾಲ, ಮುನಿಸ ದ-
ಯಾಲ, ಶೋಭಿತ ರತ್ನಜಾಲ, ಭೂಷಿತ ಲೀಲ ಅ.ಪ

ನಂದಗೋಪಿಯ ಕಂದ ಸಚ್ಚಿದಾ- ।
ನಂದ ಶ್ರೀ ಗೋವಿಂದ ತ್ರಿಜಗ ।
ದ್ವಂದ್ವ ತವ ಪದ (ಸ್ಕಂದ) ಶರಣರ ।
ಬಂಧು, ಪೊರೆಯೊ ದಯಾಸಿಂಧು ನುತಿಪೆನಿಂದು ೧

ಕ್ಷೀರ ದಧಿಘೃತ ಚೋರ ಗೋಪೀ ।
ಜಾರ, ಕುಜನ ಕುಠಾರ, ಖಳ ಸಂ- ।
ಹಾರ, ಭಕ್ತವಿಚಾರ, ಲೋಕ ವಿ- ।
ಹಾರ, ಭವದೂರ, ಸುಖಸಾರ, ಯದುವೀರನೆ ೨

ಶ್ರೀಶ ತ್ರೈಜಗದೀಶ ಕವಿಜನ ।
ತೋಷ, ಭವ ಭಯ ಪಾಶ ಕಿಲ್ಬಿಷ ।
ನಾಶ, ಸಜ್ಜನ ಪೋಷ, ನಿಜ ಸ-।
ರ್ವೇಶ, ದೇವೇಶ ಸದಾನಂದ ಶ್ರೀನಿವಾಸ ೩

## ೧೪೯

ಬರಿದೆ ದೂರುವಿರೇತಕೆ । ಕೃಷ್ಣಯ್ಯನ ।
ಚರಿತೆಯ ಪೇಳಬೇಕೆ ಪ

ಅರಿತವರಾದರೆ । ಪರಮ ಪುರುಷನೊಳು ।
ಕೊರತೆಗಳೆಣಿಸದೆ । ಸ್ಥಿರಸುಖದೊಳು ಬಾಳಿ ಅ.ಪ

ದಧಿಘೃತ ಚೋರನೆಂದು । ಶ್ರೀ ರಂಗನೊಳ್ ।
ವಿಧಿಸುವಿರೇಕೆ ಕುಂದು ॥
ದಧಿಘೃತ ಸೋಕಿದ । (ಓದನ)ವುಣಲೊಲ್ಲ ।
ಚದುರ ಚೆನ್ನಿಗ ಮುದ್ದು । ಪದುಮದಳಾಕ್ಷನ ೧

ಹಾಲು ಬೆಣ್ಣೆಯ ಮೆದ್ದನು । ಯೆಂದೆನುವಿರಿ ।
ಬಾಲನೊಳ್ ಕೊರತೆಯನು ।
ಹಾಲು ಬೆಣ್ಣೆಯ ತಂದು । ಲೀಲೆಯೊಳಿಕ್ಕಲು ।
ಕಾಲಿನೊಳೊದೆದೆಲ್ಲ । ಶ್ರೀಲೋಲನುಣಲೊಲ್ಲ ೨

ಕರುಗಳ ಬಿಡುವನೆಂದು । ಬರಿದೆ ದೂರ ।
ಹೊರಿಸುವಿರೇತಕಿಂದು ॥
ತರಳನೊಂದಿಲಿಯ । ಮರಿಯ ಕಂಡಂಜುವ ।
ಹರಿಣಾಕ್ಷಿಯರಿರೇನು । ಮರುಳರಂತೊರೆವಿರೆ ೩

ಉಚ್ಚೆ ಬಂದರೆ ಪೋರನು । ನಮ್ಮನೆಯೊಳು ।
ಕಚ್ಚೆ ಬಿಟ್ಟೋಡುವನು ॥
ಹೆಚ್ಚು ಮಾತುಗಳೇನು । ಅಚ್ಯುತನೊಳು ನೀವು ।
ಮೆಚ್ಚಿನ ಮಾತಿದು । ಸಚ್ಚರಿತವಿದೆಂದು ೪

ಮುಗುದೆಯರಿರ ನೀವ್ ಬಂದು । ಪೇಳಿದ ಮಾತು ।
ಸೊಗಸಾಗಿ ಕೇಳ್ದೆ ನಿಂದು ॥

ಜಗದೊಡೆಯನು ನಿಮ್ಮೊ । ಳಗಡುತನವ ಮಾಡೆ ।
ಬಿಗಿವೆ ಸದಾನಂದ । ವಾಗಲಿ ನಿಮಗೆಲ್ಲ ೫

## ೧೫೦

ಬಿಡಬೇಡ ಕೈಯ । ನಾರಾಯಣ ।
ಬಿಡಬೇಡ ಕೈಯ ಪ

ಬಿಡಬೇಡ ಕೈಯ ಎನ್ನೊಡೆಯ ನಾರಾಯಣ ।
ಕಡಲಶಯನ ನಿನ್ನಡಿಗೆರಗಿ ಬೇಡುವೆ ಅ.ಪ

ಅನಾಥ(ನು) ನಾನು । ದೇವರ ದೇವ ।
ಎನಗೆ ಗತಿ ನೀನು ॥
ಮಾನವ ಜನ್ಮದೊಳಾನುದಿಸಿರ್ದರು ।
ಏನೊಂದನರಿಯದ ಮೂಢನಾಗಿರುವನ ೧

ವ್ರತ(ದ) ಭಂಗವಾಯ್ತು । ಜಪವಗೈವ ।
ಮತಿಯು ಬರಡಾಯ್ತು ॥
ಶ್ರುತಿಶಾಸ್ತ್ರ ನೋಡದೆ ಕೃತಕೃತ್ಯವರಿಯದೆ ।
ಮತಿಹೀನನಾದೆನು ಪತಿತ ಪಾವನ ಕಾಯೊ ೨

ದುರಿತರಾಶಿಗಳು । ಎಷ್ಟಿಹುದೊ ನಾ – ।
ನರಿಯೆ ಮರೆವೆನ್ನೊಳು ॥
ಶರಣವತ್ಸಲನೆಂಬೀ ಬಿರುದುಳ್ಳ ದೇವನೆ ।
ಮರೆಯಹೊಕ್ಕೆನು ಕಾಯೊ ಕರುಣಿಗಳರಸನೆ ೩

ಭಕುತ ಸಂಸಾರಿ । ಮೈದೋರೈಯ ।
ಪ್ರಕಟದಿ ನೀ ಸಾರಿ ॥
ಸಕಲಾತ್ಮಕನೆ ಜೀವ ಮುಕುತನೆನ್ನಿಸಿ ನಿಜ ।
ಸುಖದ ಸಂಪದವಿಯೊಳು ಮಕರಕುಂಡಲ ಧಾರಿ ೪

ಶ್ರೀವಾಸುದೇವ । ನೀನೆನಗೀಯೊ ।
ತವಕದಿ ಪದ ಸೇವಾ ॥
ಭಾವಭಕ್ತಿಯ ಸುಖವೀವ ಬಾಂಧವನೆನ್ನ ।
ಕಾವ ಕರ್ತನೆ ಕುಲದೇವ ಸದಾನಂದ ೫

## ೧೫೧

ಬಿಡಬೇಡಿ ಶ್ರೀ ಹರಿಯ । ನಾವೆಲ್ಲರು ।
ಪಿಡಿದು ಕೃಷ್ಣನ ಚರಿತ್ರೆಯ ಪ

ತಡೆಯದೆ ನಂದನ । ಮಡದಿ ಗೋಪಮ್ಮನ ।
ಯೆಡೆಗ್ಹೊದೆಲ್ಲರು ಪೇಳುವ ಅ.ಪ

ಅಲ್ಲಿ ಓಡುವನಿದಕೋ । ಗೋಪಾಲ ತಾ-।
ನಿಲ್ಲಿರುವನೊ ನೋಡಿಕೋ ॥
ಸೊಲ್ಲನಾಡದೆ ನಾವು । ಮೆಲ್ಲನೆ ಮೌನದಿ ।
ಬಲ್ಲಿದವನ ನೋಡುವ ೧

ಗಡಬಡಗುಟ್ಟುತಿದೆ । ನಮ್ಮೊಳಗೇನೊ ।
ವೊಡೆದಂತೆ ಶಬ್ದವದೆ ॥
ಹುಡುಗ ರಂಗನು ಹಾಲ । ಕುಡಿದು ಭಾಂಡವ ಮೆಟ್ಟಿ ।
ಪುಡಿಗೈವನೇನೊ ಕಾಣೆ ೨

ದುಶ್ಚರಿತೆಯನುಳಿದು । ಸಾಧಿಸುತೀಗ ।
ಸಚ್ಚರಿತನ ಪಿಡಿದು ॥
ಬೆಚ್ಚದೆ ನಾವೆಲ್ಲ । ರಿಚ್ಚೆ ಬಂದಂದದಿ ।
ನಿಶ್ಚಿಂತೆಯೊಳಗಾಡುವ ೩

ಕಿಟಕಿಯ ಬೆಳಕಿನೊಳು । ಕೋಣೆಯೊಳಿರೆ ।
ಕಟಕಿಯೋರ್ವಳು ಪಿಡಿದು ॥

ಹಟವೇನೊ ಯೆಷ್ಮೊಳು । ಕುಟಿಲಗಾರನೆ ನಿನ್ನ ।
ನಟನೆ ನೀಡುವೆನೆಂದಳು ೪

ಬಾಲೆಯರೊಂದುಗೂಡಿ । ಗೋವಿಂದನ ।
ಲೀಲೆಗಳನ್ನೆ ಪಾಡಿ ॥
ಆಲಸ್ಯವಿರದೆ ಶ್ರೀ । ಲೋಲನನೊಯ್ದು ಸು–।
ಶೀಲೆ ಗೋಪಿಯೊಳೆಂದರು ೫

ಹುಡುಗನ ತಂದಿಹೆವು । ಗೋಪಮ್ಮ ಕೇಳೆ ।
ಪಿಡಿದಿಕೊ ನಿಂದಿಹೆವು ॥
ತಡೆಯದೆ ನೀ ಮಾಳ್ಪ । ಬೆಡಗೇನುಂಟದನೊಮ್ಮೆ ।
ನಡೆಸೆಂದರಬಲೆಯರು ೬

ಇಂದುಮುಖಿಯರಿತೆಂದು । ಕಂಕುಳೊಳು ಮು–।
ಕುಂದನಿಲ್ಲದಿರಲಂದು ॥
ಮುಂದೆ ತೊಟ್ಟಿಲೊಳು ಗೋ । ವಿಂದನ ನೋಡಿ ಸದಾ – ।
ನಂದವಾಗಿರ್ದರು ೭

## ೧೫೨

ಬೇಡುವೆನು ನಾ ರೂಢಿಗೊಲ್ಲಭನೇ ।
ವೈಕುಂಠ ಪದವಿಯ ।
ನೀಡುತಲಿ ಕೃಪೆ ಮಾಡೊ ಸಿರಿವರನೆ ಪ

ಗಾಢಭವದೊಳು ಕೂಡಿತನುವೀ ।
ಡಾಡಿ ದಣಿದೆಯಿನ್ನಾಡಲೇನದ ।
ಬೇಡಯೆನಗೀ ಗೂಢ ದುಃಖದ ।
ಹೇಡಿ ಜನ್ಮದೊಳಿಡದೆ ರಕ್ಷಿಸೊ ಅ.ಪ

ಸೃಷ್ಟಿಸಿದೆ ನೀ ನನ್ನ ಜೀವವನೂ । ಅಲ್ಲಿಂದ ತೊಳಲಿದೆ ।
ಅಷ್ಟ ಚಾತುರ್ಲಕ್ಷ ಜನ್ಮವನೂ ।

ಭ್ರಷ್ಟನಾದೆನೀ ಕಷ್ಟ ಭವದೊಳ- ।
ಗೆಷ್ಟು ದಿನಯೆನಗಿಟ್ಟಿರುವೆ ನೀ ।
ಶ್ರೇಷ್ಠ ಶ್ರೀ ಗುರು ನಿನ್ನ ಕಾಂಬೆನೆ ।
ನ್ನಿಷ್ಟ ಪಾಲಿಸೋ ಲಕ್ಷ್ಮಿಯೊಲ್ಲಭ ೧

ನಾಗಶಯನ ಯೆನ್ನಾಗಮನವ ಬಲ್ಲೆ । ಸರ್ವಾತ್ಮ ಶಾಸ್ತ್ರ ನಿ-
ನ್ನಾಗಮಗಳೆಂತೆಂಬುದಾನೊಲ್ಲೇ ।
ನೀಗಿತಿರನು ಶ್ರೀನಿವಾಸ ಕೃಪಾ ।
ಸಾಗರದೊಳಾಲಾಡಿ ಸ್ಥಿರ ಪದವೀಗ ।
ಪಾಲಿಸೆಂದೆನ್ನ ಮನದೊಳು ।
ಬಿಗಿದು ಪಿಡಿದೆನು ನಿನ್ನ ಪಾದವ ೨

ಪಾರಗಾಣಿಸೊ ಭವ ಶರಧಿಯಿಂದಾ ।
ತವ ಚರಣಕೆರಗೀ ಕರಮುಗಿದು ಬೇಡುವೆನು ।
ಗೋವಿಂದಾ ಶರಣ ವತ್ಸಲ ನೀನೆಯೆನ್ನಯ ।
ದುರಿತ ಬಂಧವ ಬಿಡಿಸಿ ನಿರ್ಭಯ ।
ಪರಮಸುಖ ಸಂಪದದಿ ಪಾಲಿಸೊ ।
ಕರುಣಾಸಾಗರ ಗುರು ಸದಾನಂದ ೩

## ೧೫೩

ಭಗವಂತನೇ ನಿನ್ನ ಮಗನು ನಾ ಬೇಡುವೆನು ।
ಧಗಧಗಿಪ ಬಿಸಿಲೊಳಗೆ ಜಗವು ಸುಡುತಿಹುದು ಪ

ನಿಗಮಗೋಚರ ನಿನ್ನ ಉಗುರೆಡೆಯೊಳುದಿಸಿರ್ದ ।
ಮಗಳಾದ ಭಾಗೀರಥಿಯ ಕಳುಹಿ ಸಲಹೊ ಅ.ಪ

ಆಷಾಢ ಮಾಸದೊಳು ಬೇಸಿಗೆಯ ಬಿಸಿಲುಂಟೆ ।
ಕೇಶವನೆ ನೀ ನೋಡು ದಾಸ ಜನರ ॥
ರಾಶಿ ಬೆಳೆಗಳು ಸುಟ್ಟು ಘಾಸಿಯಾಯಿತು ಎಮ್ಮ ।
ಪೋಷಣೆಗೆ ಗತಿಯೇನು ಶೇಷಶಯನ ೧

ನೀನೆ ಸೃಷ್ಟಿಸಿದವನು ನೀನೆ ಪಾಲಿಸುವವನು ।
ನೀನೆ ಮುನಿದಡೆ ಕಾಯ್ವರಾರು ದೇವ ॥
ಏನೆಂದು ತಿಳಿಯೆ ನಾ ನಿನ್ನ ಮಾಯಾ ನಟನೆ ।
ದೀನ ವತ್ಸಲನೆಂದು ನನ್ನೊಂದರಿಕೆ ೨

ಎರಡು ಸೊಲ್ಲಲಿ ಇಂದುವಾರದೊಳಗರಿಕೆಯನು ।
ಹರಿಯೆ ತವಚರಣಕರ್ಪಿಸಿದೆ ನಾನು ॥
ಮೂರನೆಯ ಸೊಲ್ಲೊಳಗೆ ಕರುಣಾಮೃತದ ಮಳೆಯ ।
ಧರಧರನೆ ಸುರಿಸಿದೆ ಸದಾನಂದಗೈದೆ ೩

## ೧೫೪

ಮಾನವನು ಕಾಪಾಡೊ ಶ್ರೀ ಹರಿಯೇ ।
ಮಾನವನು ಕಾಪಾಡೊ ಪ

ಋಣ ಪಾಶದೊಳು ಅಪ –।
ಮಾನ ಗೈಯ್ಯದೆ ಕಾಯೊ ಸದ್ಗುರುವೇ ।
ಶ್ರೀನಿವಾಸನೆ ನಾನು ನಿನ್ನಾ– ।
ಧೀನನಾದ ಅನಾಥನೆನ್ನ ನಿ– ।
ದಾನ ಮಾನಪಮಾನ ನಿನ್ನದು ।
ನೀನೆನಗೆ ಗತಿ ದೀನ ವತ್ಸಲ ಅ.ಪ

ಅಂದಿನಿಂದೀವರೆಗು ಸುಖವಿಲ್ಲಾ । ನಾ ಬಂದ ಭವಣೆಗ ।
ಳಂದವನು ವರ್ಣಿಸುವಡಳವಲ್ಲ ।
ಹಿಂದಣೆಸಗಿದ ದುಷ್ಕೃತದ ಫಲ ।
ದಿಂದಲೇ ಭವ ಬಂಧದೊಳು ನಾ– ।
ನೊಂದೆ ಕೈ ಪಿಡಿದಿಂದು ಆಪದ್ ।
ಬಂಧು ಕರುಣಾ ಸಿಂಧು ರಕ್ಷಿಸೋ ೧

ಹುಲಿ ಕರಡಿ ಶಾರ್ದೂಲದಂತೆಲ್ಲಾ । ಮಾನವರು ಯೆನಗೇ ।
ಹಲವು ವಿಧದೊಳು ಪೀಡಿಸುವರಲ್ಲಾ ।
ಕೊಲುವೆನೆನ್ನುತ ಭಾಷೆ ಹಾಕುತ ।
ಬಲು ತರದ ಕಷ್ಟಗಳ ಕೊಡುತಿಹ ।
ಸುಲಿಗೆದಾರರ ಬಲೆಗೆ ಬಿದ್ದಿಹೆ ।
ಜಲಜನಾಭನೆ ಸಲಹೊ ಬೇಗನೆ ೨

ಸೋತೆನೀ ಭವ ಯಾತನೆಗಳಿಂದಾ । ಅನಾಥನೆನ್ನನು ।
ಪ್ರೀತಿಯೊಳಗಾದರಿಸೊ ಗೋವಿಂದಾ ।
ಘಾತಕರ ಕೈಯೊಳಗೆ ಸಿಲುಕಿದ ।
ರೀತಿಯೊಳು ನಿರ್ಭೀತಿಯಿಂದಲಿ ।
ಮಾತೆಯಂದದಿ ಯೆನ್ನ ಸಲಹುವ ।
ಧಾತನೇ ಜಗನ್ನಾಥ ಪಾಲಿಸೋ ೩

ಸಾಕು ಸಾಕಾಯ್ತಯ್ಯ ಸಂಸಾರ । ದಾರಿದ್ರ ದುಃಖದಿ ।
ಮೂಕನಾದೆನು ಸೋಕಿ ಗ್ರಹಚಾರ ।
ಶ್ರೀ ಕಮಲೆಯೊಲ್ಲಭನೆ ನಿನಗಾ– ।
ನೇಕ ವಿಧದಪರಾಧಿಯಾದರು ।
ನೀ ಕೃಪಾನಿಧಿ ಕ್ಷಮಿಸಿ ತಪ್ಪನು ।
ಲೋಕನಾಥನೇ ಸಾಕು ಕರುಣದಿ ೪

ಪುಟ್ಟಿದೀವರೆ ಪಟ್ಟ ಭವಣೆಗಳಾ । ಬಣ್ಣಿಸುವೆನೆಂದರೆ ।
ಅಷ್ಟ ಕುಲ ನಾಗೇಶಗಳವಲ್ಲಾ ।
ಸೃಷ್ಟಿಗೊಡೆಯನೆ ನೀನೆ ದಿವ್ಯಾ ।
ದೃಷ್ಟಿಯಿಂದಲಿ ನೋಡುತೆನ್ನಯ ।
ಕಷ್ಟ ಪರಿಹರಿಸ್ಯೆ ಸದಾನಂದ ।
ಭೀಷ್ಟ ವೀಯ್ಯೆ ಕೃಷ್ಣರಾಯನೆ ೫

## ೧೫೫

ಯಾವ ದಾರಿಯೆನಗೇ ಮುರಾರಿಯಿ–
ನ್ನಾವ ಗತಿಯು ತನಗೇ । ದೇವರ ದೇವನೆ
ನೀ ವಂಚಿಸಿದರೆ । ಕಾವರೊಬ್ಬರನು ಕಾಣೆ ನಾ ದಿಟವಿದು ಪ

ದೇಶದೇಶ ತೊಳಲೀ । ನಾ ಬಲು ಘಾಸಿಯಾದೆ ಬಳಲೀ ।
ಕೇಶವ ತವ ಕೃಪೆ ದಾಸನೊಳಾಗದೆ ಲೇಸೆನಗಿಲ್ಲ ।
ವಾಸುಕಿಶಯನನೆ ೧

ಅಕ್ಷಿ ತೆರೆದು ನೋಡೋ ಮಾಯೆಯ ।
ಶಿಕ್ಷೆ ಸಾಕು ಮಾಡೋ । ಕುಕ್ಷಿಗೊಡೆಯ ಕಮಲಾಕ್ಷನೆ ತವಪದ।
ಮೋಕ್ಷವಿತ್ತೆನ್ನನು । ರಕ್ಷಿಸದಿರ್ದಡೆ ೨

ಮಂದರಾದ್ರಿಧರನೇ । ತವಾಂಘ್ರಿಗೆ ವೊಂದಿಪೆ ಶ್ರೀವರನೇ ।
ಬಂದು ಮಾನಸದಿ ನಿಂದು ಮೈ ದೋರುತ ।
ಕಂದನ ಸಲಹೆನ್ನ । ತಂದೆ ಸದಾನಂದ ೩

## ೧೫೬

ರಾಮಕೃಷ್ಣ ನಮೋ ನಮೋ ಹರಿಯೆ । ಸುಪ್ರೇಮದಿಂ ತವ ।
ನಾಮ ನಿಜ ಸುಖ ಪಾಲಿಸೈ ದೊರೆಯೆ ಪ

ಶ್ಯಾಮಸುಂದರ ಪುಣ್ಯ ಜನ ನಿಜ ।
ಧಾಮ ಭುವನ ಸ್ತೋಮ ಮಂಗಲ–॥
ನಾಮ ಭಕ್ತಾಭೀಷ್ಟ ಸುರಕುಲ–।
ಕಾಮಧೇನು ರಮಾವರನೆ ಹರಿ ಅ.ಪ

ಶ್ರೀವರನೆ ಶಾಶ್ವತನೆ ಭವಹರನೆ । ದೇವೇಶ ಮುನಿಜನ ।
ಭಾವ ಮಂದಿರ ರಾವಣಾಂತಕನೆ ॥

ಸೇವಕರ ಕುಲದೇವ ಸನ್ನುತ । ಕೇವಲಾನಂದಾತ್ಮ ಚಿನ್ಮಯ ।
ಭೂವಧೂಹಿತ ಕಾವ ವಿಭು ರಾಜೀವ ಸುತೆ ಶ್ರೀಲೋಲ ರಾಘವ ೧

ಸಿಂಧುಶಯನನೆ ಮಂದರಧರನೆ । ಗೋವಿಂದ ತ್ರಿಭುವನ ।
ವಂದ್ಯ ಸುಜನರ ಬಂಧುವಾದವನೆ ॥
ನಂದಗೋಪಿಯ ಕಂದ ನಿತ್ಯಾ । ನಂದ ಪಾವನ ದ್ವಂದ್ವಚರಣವ ।
ಪೊಂದಿ ಜಯ ಜಯವೆಂದು ನುತಿಸುವೆ । ಇಂದಿರೇಶ
ಮುಕುಂದ ರಕ್ಷಿಸು ೨

ಮತ್ಸ್ಯ ಕೂರ್ಮ ವರಾಹ ನರಸಿಂಹ । ವಾಮನ ತ್ರಿವಿಕ್ರಮ ।
ಕ್ಷತ್ರಿಹರ ಭಾರ್ಗವ ಪರಬ್ರಹ್ಮ ॥
ಭಕ್ತವತ್ಸಲ ರಾಮ ದೇವಕಿ । ಪುತ್ರ ಸನ್ನುತಿಪಾತ್ರ ಕವಿಜನ ।
ಸ್ತೋತ್ರ ಬುದ್ಧಾವತಾರಿ ಕಲ್ಕಿಯೆ । ನಿತ್ಯ ಸದಾನಂದಾತ್ಮ ಶ್ರೀಗುರು ೩

## ೧೫೭

ಲಕ್ಷುಮಿ ನಾರಾಯಣ । ಭಕ್ತಪಾರಾಯಣ ॥
ಲಕ್ಷುಮಿ ನಾರಾಯಣ ಪ

ಅಕ್ಷಯ ನಿಜ ಸುಖದಿಚ್ಚೆಯ ಪೂರೈಸುವ ।
ಮೋಕ್ಷದಾಯಕ ಗುರು । ಸಚ್ಚಿದಾನಂದಾ ನಮೊ ೧

ಭವಭಯ ವರ್ಜಿತ । ಭವನಜನಾರ್ಜಿತ ।
ಕವಿಜನ ಪೂಜಿತ । ಶಿವಸಖನ ಜಪಿತ ೨

ವಾಸುಕಿ ಶಯನನೆ । ಭೂಸುರ ಪ್ರೀಯನೆ ।
ಲೇಸು ಸುಬೋಧಾಯನೆ । ದಾಸರ ದಾಸ ನಮೋ ೩

ಸತ್ವ ಚಿತ್ತಾನಂದ । ನಿತ್ಯ ಮೂರ್ಜಗ ದ್ವಂದ್ಯ ।
ಮುಕ್ತಿದಾಯಕ ಪರ । ವಸ್ತು ಸದಾನಂದ ೪

## ೧೫೮

ಶ್ರೀ ಲಕ್ಷ್ಮೀನಾರಾಯಣ । ಜಯ ಜಯ ನಮೋ ನಮೋ ।
ಶ್ರೀ ಲಕ್ಷ್ಮೀನಾರಾಯಣ ಪ

ಶ್ರೀ ಲತಾಂಗಿಯ ಲೋಲ ತ್ರಿಜಗ–।
ತ್ಪಾಲ ಮುನಿಸದಯಾಲ ತುಲಸೀ ।
ಮಾಲ ಸತ್ಯ ಸುಶೀಲ ಕಾಲ ।
ಕಾಲ ಗಾನವಿಲೋಲ ಜಯ ಜಯ ಅ.ಪ

ಮತ್ಸ್ಯಾವತಾರ ತಾಳ್ದೆ । ಜಲಧಿಯೊಳಗಾಡುತ ।
ಕುತ್ತಿ ತಮನನು ಗೆಲಿದೆ ॥
ಇತ್ತ ವೇದವ ತಂದು ದ್ರುಹಿಣಗೆ ।
ಸತ್ಯವ್ರತನನು ಎತ್ತಿ ಸಲಹಿದೆ ।
ಕೃತ್ತಿವಾಸ ವಿರಿಂಚಿ ಮುಖ್ಯರ ।
ಸ್ತೋತ್ರ ಪಡೆದ ಮಹಾತ್ಮ ಜಯ ಜಯ ೧

ಸುರರಸುರರ ನೆರಹಿ । ಮಂದರವ ಧರಿಸಿದೆ ।
ಕ್ಷೀರ ಶರಧಿಯ ಮಥಿಸಿದೆ ॥
ಗಿರಿಯು ನೀರೊಳ್ ಮುಳುಗಲಾಕ್ಷಣ ।
ಧರಿಸಿ ಕೂರ್ಮಾಕೃತಿಯೊಳೆತ್ತಿದೆ ।
ದುರುಳರಿಗೆ ಸುರೆ ಕುಡಿಸಿ, ದಿವಿಜರಿ ।
ಗೆರೆದೆಯಮೃತವ ಪೊರೆದೆ ಕರುಣದಿ ೨

ನಾಸಿಕೋದ್ಭವನಾದೆ । ಲೇಸಿನೊಳ್ ವಿತಳದ ।
ಹಾಸಿನೊಳ್ ಪವಡಿಸಿದೆ ॥
ಗಾಸಿಸುತ ಹೇಮಾಕ್ಷ ದೈತ್ಯನ ।
ಭೂಸತಿಯ ಸುಸ್ಥಿರವಗೊಳಿಸಿದೆ ।
ವಾಸವಾದ್ಯರ ಪೂಜೆಗೊಳ್ಳುವೆ ।
ಶೇಷಗಿರಿಯ ವರಾಹರೂಪನೆ ೩

ಹರಿನಾರಾಯಣನೆಂದೆಂಬ । ಪ್ರಹ್ಲಾದನನು ಪಿತ ।
ತರಿದು ಸಂಹರಿಪೆನೆಂಬ ॥
ಭರದೊಳಿರಲೊಡೆದ್ವಜ್ರ ಕಂಭದಿ ।
ದುರುಳ ಹಿರಣ್ಯನ ಕೆಡಹುತುದರದ ।
ಕರುಳ ದಂಡೆಯ ಕೈಗೊಳುತ ನಿಜ ।
ಶರಣನು ಪೊರೆದಾ ನೃಸಿಂಹನೆ ೪

ಅದಿತಿಯುದರದೊಳುದಿಸಿ । ವಾಮನನೆನಿಸಿ ।
ಬುಧಜನರೊಡನೆ ಗಮಿಸಿ ॥
ಚದುರತನದಿಂ ತ್ರಿಪದ ಭೂಮಿಯ ।
ಮುದದಿ ದಾನವ ಬೇಡಿ ವಿತಳದಿ ।
ಸದನಗೈದಾ ಬ್ಬಲಿಯ ಬಾಗಿಲೊ ।
ಳೊದಗಿರುವ ತ್ರಿವಿಕ್ರಮನೆ ಜಯ ಜಯ ೫

ಜಮದಗ್ನಿ ಸುತನೆಂದು । ತಂದೆಯ ನೆವದೊಳು ।
ಕುಮತಿ ಕ್ಷತ್ರಿಯರ ಕೊಂದು ॥
ನಮಿಸಿ ಪಿತನನು ಕಾಯ್ದು, ರಘುಜನ ।
ಸಮರದೊಳು ಸಂಭವಿಸುತ ಶ್ರೀ ।
ಮನುಮುನಿಗಳ ಯೋಗಸಿದ್ಧಿಯ ।
ಸಮಗೊಳಿಸಿ ಪೊರೆದಮಲ ಭಾರ್ಗವ ೬

ದಶರಥ ಸುತನೆನಿಸಿ । ಕೌಸಲ್ಯೆಯ ।
ಬಸಿರೊಳಗವತರಿಸಿ ॥
ಕುಶಿಕಸುತನಧ್ವರವ ಪಾಲಿಸಿ ।
ಶಶಿವದನೆ ಸೀತೆಯನು ವರಿಸುತ ।
ನಿಶಿಚರೇಶಾದ್ಯರನು ಮಥಿಸಿದ ।
ಕುಶಲವರ ಪಿತ ರಾಮಚಂದ್ರನೆ ೭

ಅವನಿಭಾರವನಿಳುಹುವ । ನೆವದೊಳು ವಸು ।
ದೇವನರಸಿ ಸಂಭವ ॥

ಅವಿತು ಬಾಲ್ಯದಿ ಮಾವ ಕಂಸನ ।
ಬವರದೊಳು ಗೆಲಿದೊಲಿಸು ಭಕ್ತರ ।
ನಿವಹವನು ನೆರೆ ಕಾಯ್ದ, ಭೀಷ್ಮಕ ।
ಕುವರಿಯರಸ ಗೋಪಾಲಕೃಷ್ಣನೆ ೮

ಪತಿವ್ರತೆಯರ ವ್ರತವ । ಕೆಡಿಸುತ ಶತ ।
ಧೃತಿಯ ಕೂಡುತೆ ಅಮೃತವ ॥
ಅತಿ ಚಮತ್ಕೃತಿಯಿಂದ ಕುಡಿದು ತ್ರಿ –।
ನೇತ್ರಗೆಣೆಯಾಗುತ್ತ ತ್ರಿಪುರರ ।
ಹತವ ಗೈದಾ ಕ್ರತುಮುಖರ ಪೊರೆ ।
ದತಿಕುಶಲ ಬುದ್ಧಾವತಾರನೆ ೯

ದುಷ್ಟ ಮ್ಲೇಂಛರು ಧರೆಯೊಳು । ಶಿಷ್ಟರನೆದೆ ।
ಮೆಟ್ಟಿ ನಡೆಯುತಿರಲು ॥
ಶ್ರೇಷ್ಠ ಭೂಸುರ ವಿಷ್ಣುಕೀರ್ತಿಯ ।
ಪಟ್ಟದರಸಿಗೆ ಪುಟ್ಟುತಧಮರ ।
ಕುಟ್ಟಿ ಭಕುತರಭೀಷ್ಟ ಸಲಿಸುತ – ।
ಲಟ್ಟಹಾಸದಿ ಮೆರೆವ ಕಲ್ಕಿಯೆ ೧೦

ಪತಿತಪಾವನ ಮಾಧವ । ನಾ ನಿನ್ನಯ ।
ಸುತನು ಅನಾಥ ದೇವ ॥
ಸತತ ನೀ ಮೈದೋರುತೆನ್ನಯ ।
ಧೃತಿಮತಿಗೆ ಕಲ್ಯಾಣವಾಂತಾ ।
ಶ್ರಿತ ಸದಾನಂದ ವಾಸ ನೀನೇ ।
ಗತಿ ಜಗದ್ಗುರು ಸಚ್ಚಿದಾನಂದ ೧೧

## ೧೫೯

ಶ್ರೀ ವರ ಜಯ ಜಯ ಜಯತು ನಮೋ ॥
ಜಯತು ನಮೋ ಜಯ ಜಯತು ನಮೋ ಪ

ಭಾವಜನಯ್ಯನೆ ಕವಿಜನ ಪೂಜಿತ ॥
ದೇವರ ದೇವನೆ ಕಾಯೊ ಕರುಣಾನಿಧಿ ಅ.ಪ

ಭಾಗೀರಥಿಪಿತ ನಾಗಶಯನ ಹರಿಯೇ ॥
ನಿಗಮಾಗಮ ನುತ ಬಗೆ ಬಗೆಯಲಿ ನಿನ್ನ
ಪೊಗಳಲೆನ್ನಳವೆ ಅಗಣಿತ ಮಹಿಮನೆ ೧

ಗರುಡ ಗಮನ ಗಿರಿಜಾವರ ಪ್ರಿಯನೇ ॥
ಪರಮ ಪುರುಷ ಪರಮಾತ್ಮ ನಿನ್ನಯ ಪಾದ ।
ಸ್ಮರಣೆ ಮನ್ಮನ ಕಾಯ ಕರ್ಮದೊಳಿರಿಸೈ ೨

ವಾಸುದೇವ ತವ ದಾಸರ ಸಂಗದೊಳು ॥
ಲೇಸಿನೊಳ್ ನಿಜ ಸುಖವಾಸದೊಳೆನ್ನ ಪೊರೆ ।
ದಾಸರ ದಾಸನೆಂದೆನಿಸೊ ಸದಾನಂದ ೩

## ೧೬೦

ಹರಿ ನಾರಾಯಣ ಕೃಷ್ಣನೆನ್ನೀ । ಘೋರ ।
ಭವ ಶರಧಿಯ ದಾಟಿ । ಸ್ಥಿರ ಭಾಗ್ಯವುಣ್ಣೀ ಪ

ಸಕಲ ಭಾಗ್ಯಗಳು ಹೊಂದುವದೂ । ಸಾರ ।
ಸುಖದ ಸಂಪದಗಳು ತಾನೆ ಸೇರುವದೂ ।
ಶಕುತಿ ಹೆಚ್ಚೆಚ್ಚು ಆಗುವದೂ । ನಾಲ್ಕು ।
ಮುಖದೊಳಗಾನಂದವಾಗಿ ತೋರುವದೂ ೧

ದುರಿತ ರಾಶಿಗಳು ಸುಡುವದೂ । ಘೋರ ।
ನರಕದ ವಿಷಗಳು ತಾನೆ ಓಡುವದೂ ।
ಕರಕರೆಯೆಲ್ಲ ಜಾರುವದೂ ।
ಗುರು ಪದ ಭಕ್ತಿ ತನ್ನೊಳು ತಾನೆ ಪುಟ್ಟುವದೂ ೨

ದುಃಖ ತನ್ನಂತೆ ಪೋಗುವದೂ ।
ಮಿಕ್ಕ ಭವ ರೋಗ ಗುಣವಾಗಿ ಸುಖವು ಹೊಂದುವದೂ ।
ಭಕುತಿಯೊಳ್ಮುಕುತಿಯಾಗುವದೂ ।
ಲೋಕಾತ್ಮಕ ಶ್ರೀನಿವಾಸ ಸದಾನಂದವಹುದೂ ೩

## ೧೬೧

ತಾಯೆ ಲಕ್ಷ್ಮಿ ಕಾಯೆ ಯೆನ್ನನು । ಸೌಭಾಗ್ಯ ಜನನಿ ।
ತಾಯೆ ಲಕ್ಷ್ಮಿ ಕಾಯೆ ಯೆನ್ನನು ಪ

ತಾಯೆ ಯೆನ್ನ ಕಾಯೆ ಭವದಿ । ನೋಯದಂತೆ ಮಾಯೆ ರುಣದಿ ।
ಆಯದಿಂದಲೆನ್ನ ಪಿಡಿದು । ತೋಯಜಾಕ್ಷಿ ನೀನೆ ಸುಖದಿ ಅ.ಪ।

ನೀನೆ ದಾತೆ ಸರ್ವಲೋಕಕೆ । ಮಹಾಲಕ್ಷ್ಮಿ ದೇವಿ ।
ನೀನೆ ಸೋತೆಯಾದಿ ಪುರುಷಗೆ ॥
ನೀನೆ ಖ್ಯಾತೆ ನೀ ನಿರ್ಭೀತೆ । ನೀನೆಯೆನ್ನ ಪಡೆದ ಮಾತೆ ।
ನೀನೆ ನಿಜ ಸುಖಪ್ರದಾತೆ । ನೀನೆ ಆದಿವಿಷ್ಣು ಪ್ರೀತೆ ೧

ಸೋತೆನವ್ವ ಭವದ ತಾಪದಿ । ಜಗನ್ಮಾತೆ ನೀ ನಿ–।
ರ್ಭೀತಿಯಿಂದುದ್ಧರಿಸೆ ಸೌಖ್ಯದಿ ॥
ದಾತೆ ನೀನೆ ಹೊರತುಯೆನ್ನ । ಪ್ರೀತಿಯಿಂದ ಕಾಯ್ವರಾರು ।
ಜಾತನೆಂದ ಮಾತ ಜಗ । ನ್ನಾಥವನಿತೆ ಲಾಲಿಸವ್ವ ೨

ವಂದಿಸುವೆ ನಿನ್ನ ಪಾದಕೆ । ಇಂದೀವರಾಕ್ಷಿ ।
ಸಿಂಧುಶಯನನಂಘ್ರಿ ಧ್ಯಾನಕೆ ॥
ಬಂದು ಎನ್ನ ಗೃಹದಿ ನೀನೆ । ನಿಂದಿಷ್ಟಾರ್ಥವಿತ್ತು ಸದಾ–।
ನಂದದಿಂದ ಪಾಲಿಸೆನ್ನ । ನಿಂದು ಶ್ರೀನಿವಾಸ ಪ್ರೀತೆ ೩

## ೧೬೨

ನಲಿ ನಲಿದು ಮಹಾಲಕ್ಷುಮಿ ಬಾರಮ್ಮ ಬಾ ।
ನಲಿ ನಲಿದು ಒಲಿದು ಮೊಗವ ತೋರೆ ಬಾ ಪ

ನಲಿದು ನಲಿದು ಯೆಮಗೊಲಿದು ಮೊಗವ ತೋರೆ ।
ಜಲಜಾಕ್ಷ ನಾರಾಯಣ ಪ್ರೀಯೆ ೧

ಲೋಕಾಧಿಕಾರಿಣಿ । ಶೋಕನಿವಾರಿಣಿ ।
ಸಾಕವ್ವ ನೀ ಬಂದು ಬೇಗನೇ ೨

ಮಾತೆ ಸಜ್ಜನ ಜನ । ಧಾತೆ ಸದಾನಂದ ।
ಪ್ರೀತೆ ನೀನೆಮಗೊಲಿದು ಬಾ । ಬೇಗನೆ ೩

## ಈ. ಹನುಮಂತ ದೇವರು

## ೧೬೩

ಧನ್ಯನಾದೆನು ಮುಖ್ಯ ಪ್ರಾಣಾ । ನೀ ಪ್ರ–
ಸನ್ನನಾದೆಯೆನಗೆ ಇನ್ನೇನನುಮಾನಾ ಪ

ಮಾನ್ಯನಾದೆನು ಜಗತ್ರಾಣಾ । ನಾ ।
ನಿನ್ನವನೆನಿಸಿದೆ ಗುರುವೆ ಮತ್ರಾಣಾ ಅ.ಪ

ಭವ ಭಯಂಗಳು ಹರವಾಯ್ತು । ಮನ ।
ದೊಳು ತವಕಿಸುವ ಚಂಚಲವೆಲ್ಲ ಹೋಯ್ತು ।
ಶಿವನನುಗ್ರಹವೆನಗಾಯ್ತು ।
ತ್ರೈಭುವನಕಾಧಾರ ಸದ್ಗುರು ಕೃಪೆಯಾಯ್ತು ೧

ವಾಸುದೇವನು ಯೆನಗೊಲಿದಾ । ಯೆನ್ನೋಳ್ ।
ಲೇಸಾದ ಕುಲ ಕಲ್ಪತರು ಫಲ ತಾನಾದೆ ।
ದೋಷರಾಶಿಗಳನ್ನು ಜರದಾ । ಯೆನ್ನ ।
ಸಾಸೀರ ಪಿತೃಗಳಾ ತಾನುದ್ಧರಿಸಿದಾ ೨

ಹಿಂದೆನಗಿತ್ತಾಜ್ಞೆಗಾಗೀ । ಕರುಣ ।
ಸಿಂಧು ಶ್ರೀಕೃಷ್ಣನೆನ್ನಿಜದೊಳ್ ಲೇಸಾಗಿ ।
ನಿಂದು ಸದಾನಂದನಾಗೀ ।
ಎನ್ನ ಬಂಧು ಬೆಳಗುವ ಸಚ್ಚಿದಾನಂದನಾಗೀ ೩

## ೧೬೪

ನಲಿದು ಬಾರೋ ಹನುಮಂತ । ಎನ–।
ಗೊಲಿದು ನಿರತ ನೆಲಸಿರು ಗುಣವಂತ ಪ

ನಲಿನಲಿದು ಎನಗೊಲಿದು ಶ್ರೀರಾಮನ ।
ಚೆಲುವ ಮೂರ್ತಿಯ ತೋರೋ ಶ್ರೀಕೃಷ್ಣನ ಅ.ಪ

ಗತಿಯೆನಗಿಲ್ಲ ನೀ ಹೊರತು । ಲಕ್ಷ್ಮೀ–।
ಪತಿಯ ದಾಸತ್ವವ ಪಾಲಿಸೀಹೊತ್ತು ॥
ಧೃತಿಯೊಳ್ ಮಹೀಶನ ಕುರಿತು । ಸ –।
ನ್ಮತಿ ನಿಜ ಬೋಧವನ್ನುಣಿಸೀಹೊತ್ತು ೧

ಗುರುರಾಯನೆ ಜಗಕೆಲ್ಲ । ಸ್ಥಿರ ।
ಚರ ಕಧಾರ ನೀ ಹೊರತನ್ಯರಿಲ್ಲ ॥
ಸ್ಮರಿಪೆ ನಿರತ ತವ ಸೊಲ್ಲ । ಶ್ರೀ –।
ಹರಿಪಾದವೆನಗೆ ಗೋಚರಿಸಬೇಕಲ್ಲ ೨

ಅಜಸುರ ನರಮುನಿವಂದ್ಯ । ತವ ।
ಭಜಕನಾಗಿ ಬೇಡುವೆನು ನಾನೊಂದ ॥

ತ್ರಿಜಗವೆಲ್ಲ ಸದಾನಂದ । ನಾ ।
ನಿಜ ಸುಖದೊಳಗಿಹೆ ಸಚ್ಚಿದಾನಂದ ೩

## ೧೬೫

ಬಾರೆನ್ನ ಪ್ರಾಣ ಶ್ರೀ ಗುರು ಮುಖ್ಯಪ್ರಾಣ ।
ತೋರೋ ಸದಾನಂದಮಯ ಜಗತ್ಪ್ರಾಣ ಪ

ಜಗಗಳಾಧಾರನೆ ನಿಗಮ ಬೋಧಿತನೆ ।
ತ್ರಿಗುಣ ವ್ಯಾಪಾರ ಶ್ರೀ ರಘುಪತಿ ಪ್ರಿಯನೆ ೧

ಆತ್ಮನು ನೀನಂತರಾತ್ಮನು ನೀನೆ ॥
ಮುಕ್ತಿದಾಯಕ ಪರಮಾತ್ಮನು ನೀನೆ ೨

ಪ್ರಾಣ ಅಪಾನ (ವ್ಯಾನನು) ನೀನೆ ॥
(ಉದಾನ) ಸಮಾನ ಸದಾನಂದ ನೀನೆ ೩

## ಉ. ಲೋಕನೀತಿ

## ೧೬೬

ಎಂದಿಗಂತ್ಯಗಳಹುದೊ ದಂದುಗದ ಭವಕೆ ।
ಸಿಂಧುಶಯನನೆ ಗೋವಿಂದ ನಿಜಕೆ
ಮುಂದೆ ಕಾಣುವುದಿಲ್ಲ, ಹಿಂದೆ ಕಲಿಮಲವೆಲ್ಲ ।
ಅಂದಿನಿಂದೀವರೆಗು ಸುಖವೆ ಯಿಲ್ಲ ॥
ಬಂದ ಬಂದಘಪಾತಕಂಗಳಿಗೆ ಕಡೆಯಿಲ್ಲ ।
ತಿಂದು ಮುಗಿಯುವುದಿಲ್ಲ ಋಣ ಬಾಧೆಯಲ್ಲ ೧

ನಡೆಯಲಾರೆನು ಮುಂದೆ, ಎಡವಿ ಬೀಳೆನು ಹಿಂದೆ ।
ದೃಢಚಿತ್ತನಾಗುತೀವರೆಗು ಬಂದೆ ॥

ಕಡುತರದ ಭವಭಯವು ಅಡಿಗಡಿಗೆ ಹೆಚ್ಚುವುದು ।
ಎಡೆಬಿಡದ ಚಿಂತೆಗಳು ಕಡೆಗಾಣದಿಹುದು ೨

ಎನ್ನದೆಂಬುವುದೆಲ್ಲ ಗನ್ನಗಾತಕವಾಯ್ತು ।
ಬನ್ನ ಬಡಿಸುವ ಮಾಯೆ ಬೆನ್ನ ಬಿಡದು ॥
ಕುನ್ನಿಯಂದದಿ ಜನ್ಮವೆನ್ನಹುದು ಬರಿದಾಯ್ತು ।
ಅನ್ನಕಂಟಕ ಭೂಮಿ ಭಾರವಾಯ್ತು ೩

ತಂದೆ ತಾಯಿಗಳೆಂದು, ಬಂಧುಬಾಂಧವರೆಂದು ।
ಹೊಂದಿರುವ ಸೌಭಾಗ್ಯವಂದಿಗಿಂದು ॥
ಕುಂದೆ ಹೆಚ್ಚುಗಳಾಯ್ತು ತಿಂದು ಮಲವಾದಂತೆ ।
ಬಂದಿಕಾರನವೋಲ್ ನಾನೆಂಬ ಚಿಂತೆ ೪

ಏನು ಮಾಡಿದಡೇನು ನ್ಯೂನ ಪೋಗಲೆ ಇಲ್ಲ ।
ದೀನವೃತ್ತಿಯೊಳು ದಿನ ಕಳೆದುದೆಲ್ಲ ॥
ಶ್ರೀನಿವಾಸನೆ ನಿಜದಿ ನಾನೆಂಬ ಲೀಲೆಯೆಂ–।
ದೇನನುಸುರುವುದಿನ್ನು ತಾನಾದುದನ್ನು ೫

## ೧೬೭

ಎಚ್ಚೆತ್ತು ನಡೆಯಿರಿ ದಿನದಿ । ನಮ್ಮ ।
ಅಚ್ಯುತನ ಧ್ಯಾನದೊಳಿರಿ ಅನುದಿನದಿ ಪ

ಎಚ್ಚೆತ್ತು ನಡೆಯಿರಿ ಮುಚ್ಚು ಮರೆಯದೆ ನಿಮ ।
ಗುಚ್ಚರಿಸುವೆ ಕಲಿಯ ತುಚ್ಛ ದುರ್ಗುಣಗಳ ಅ.ಪ

ಧರ್ಮಮಾರ್ಗಕೆ ವಿಘ್ನವಹುದು । ದು– ।
ಷ್ಕರ್ಮ ಮಾರ್ಗಕೆ ನಿರ್ವಿಘ್ನವಾಗಿಹುದು ॥
ಮರ್ಮವನರಿವರೆ ಬಿಡದು । ನಿತ್ಯ ।
ಕರ್ಮಕೆ ಕ್ಷುಧೆಯು ತಾ ಬಾಧಿಸುತಿಹುದು ೧

ಕುಲದಾಚಾರದೊಳು ಮನಸಿಲ್ಲ । ಅನ್ಯ ।
ಕುಲದಾಚರಣೆಗೆ ಮನಸಿಡುವರೀಗೆಲ್ಲ ॥

ಜಲುಮಸಾರ್ಥಕದರಿಕೆ ಇಲ್ಲ । ಮನ ।
ವೊಲಿದಂತೆ ನಡೆದು ನಿಜ ಸುಖದಾಸೆಯಿಲ್ಲ ೨

ಗುರುಕೃಪೆ ಪಡೆಯುವರಿಲ್ಲ । ಗುರು ।
ಹಿರಿಯರೊಳ್ ಭಯಭಕ್ತಿ ಕಾಲದೊಳಿಲ್ಲ ॥
ಒರೆವ ಶಾಸ್ತ್ರದ ಗೋಷ್ಠಿಯಿಲ್ಲ । ಸಾರ ।
ವರಿತ ಮಹಾತ್ಮರ ಸಂಸರ್ಗವಿಲ್ಲ ೩

ಭೂತಂಗಳನು ಪೂಜಿಸುವುದು । ನವ ।
ನೂತನದಡುಗೆ ಪ್ರೇತಗಳಿಗುಣಿಸುವುದು ॥
ಆತುರ ಪರರನ್ನದೊಳಿಹುದು । ಸತ್ಯ ।
ನೀತಿ ಪೇಳ್ವರಿಗೆ ಘಾತಕವೆಣಿಸುವುದು ೪

ಪಿತೃ ಮಾತೃ ಭಕ್ತಿಗಳಿಲ್ಲ । ತನ್ನ ।
ಮತಿಗೆಟ್ಟು ಅನ್ಯರ ದೂಷಿಪರಲ್ಲ ॥
ಅತಿಥಿ ಪೂಜೆಗಳೆಂಬುದಿಲ್ಲ । ಪರ ।
ಗತಿಯ ಸಾಧನೆಗಳೀ ಕಾಲದೊಳಿಲ್ಲ ೫

ಹರಿಹರರೆನ್ನುವ ಭೇದ । ಸಾರ ।
ವರಿಯದೆ ಮಾಳ್ವರು ತಮ್ಮೊಳು ವಾದ ॥
ಗುರುವಿದ್ದರೆಲ್ಲ ನಿರ್ವಾದ । ಇದ ।
ನರಿಯದವನೆ ಪಿತೃಗಳಿಗೆ ವಿರೋಧ ೬

ಗುರು ಬ್ರಹ್ಮ ವಿಷ್ಣು ಮಹೇಶ । ಜೀವ ।
ರೆರಕವಾದವನೆ ಗುರು ಸರ್ವೇಶ ॥
ಗುರುವಲ್ಲದೆ ಪೋಗದು ದೋಷ । ಜಗ ।
ದ್ಗುರುವನ್ನು ಸೇರಿದಡವನೆ ನಿರ್ದೋಷ ೭

ಶಾಸ್ತ್ರ ಪುರಾಣವೆ ಸ್ವಾರ್ಥ । ಅದ ।
ರರ್ಥವರಿಯದಿಹ ನರನೆ ನಿರರ್ಥ ॥

ತತ್ತ್ವವನರಿತು ಯಥಾರ್ಥ । ನಿಜ ।
ಕೃತ್ಯದಿ ನಡೆಯಲವಗಹುದು ಇಷ್ಟಾರ್ಥ ೮

ಭಗವಂತನೆಂಬರ್ಥವನ್ನು । ಪೇಳ್ವ ।
ನಿಗಮ ಬೋಧೆಯ ಕೇಳಿ ತಿಳಿದು ನಡೆದವನು ॥
ಜಗಕೆಲ್ಲ ತಾನೆ ತಾನಹನು । ನಮ್ಮ ।
ಶ್ರೀ ಗುರುದೇವ ಸದಾನಂದಮಯನು ೯

## ೧೬೮

ಕಣ್ಣ ತೆರೆದು ನೋಡಬಾರದೇ । ದೇಹ ।
ಮಣ್ಣುಪಾಲಾದ ಮೇಲ್ ನಿನ್ನಿಚ್ಛೆಯಿಹುದೇ ಪ

ಪಡದವರ್‍ಯಾರೆಂದು ನೋಡು । ನಿನ್ನ ।
ಬುಡವ ಶೋಧಿಸಿ ತತ್ವ ಸಾಧನೆ ಮಾಡೋ ।
ಜಡಬುದ್ಧಿಗಳನೆಲ್ಲ ದೂಡೊ । ಮುಂದೆ
ದೃಢಚಿತ್ತದೊಳು ಮಾಯಾ ಬಲೆಯ ಹೋಗಾಡೊ ೧

ಋಣ ರೂಪವೆಲ್ಲ ಸಂಸಾರ । ತನ್ನ ।
ಋಣ ತೀರಿದರೆ ಇದರೊಳಗಿಲ್ಲ ಸಾರಾ ।
ಪ್ರಣವ ರೂಪನೆ ತಂತ್ರಧಾರಾಯೆಂಬ
ನೆಲೆಯನರಿತು ಸೇರೋ ಮಾಧವನೂರಾ ೨

ಜಡಜಾಕ್ಷನಂಘ್ರಿಗೆ ಮಣಿದೂ । ಗೂಢ ।
ನೋಡದಾತ್ಮ ಫಲವ ಸಮರ್ಪಣೆ ಗೈದೂ ।
ಕಡೆಯದಿಷ್ಟಾರ್ಥವ ಪಡದೂ । ಜಗ
ದೊಡೆಯ ಶ್ರೀ ಗುರು ಸದಾನಂದದಿಂದಿಹುದೂ ೩

## ೧೬೯

ತನ್ನ ಅವಗುಣಗಳನು ಅರಿತುಕೊಳ್ಳದೆ ವ್ಯರ್ಥ ।
ಅನ್ಯರವಗುಣವ ಪೇಳುವನು ಬಲ್ಲವನೊ ಪ

ಹೊನ್ನು ಮಣ್ಣು ಹೆಣ್ಣಿನಾಸೆ ಸರ್ವರಿಗಿರಲು ।
ಭಿನ್ನವಿಲ್ಲದ ನರನೇನ ಪೇಳುವನು ಅ.ಪ

ತನ್ನ ಪೋಷಣೆಗಾಗಿ ಹೀನರನಾಶ್ರಯಿಸಿ ।
ಹೀನ ವೃತ್ತಿಯೊಳುದರ ತುಂಬಿಸುತಲಿ ॥
ತಾನೆ ಶ್ರೇಷ್ಠನು ಯೆಂದು ಅನ್ಯರನು ಹೀನೈಸೆ ।
ಅನ್ಯರಿಂದಲು ಹೀನ ತಾನಾಗದಿಹನೆ ೧

ಪರರಿಗಪಮಾನ ಗೈದರೆ ಪರವ ಹತಗೈವ ।
ದುರಿತವನು ತಾನೆ ಸಂಗ್ರಹಿಸಿಕೊಂಡ ॥
ನಿರತ ತಾನೆ ಪೂಜ್ಯನೆಂದು ತನ್ನನೆ ಕೊಂದ ।
ದುರಿತವನು ತಾನೆ ಹೊರುವವನೆಂಥ ಮರುಳ ೨

ಅರಿಯದ ಜ್ಞಾನಿಗಳ ಪಾಪವೆಷ್ಟಿರಬಹುದು ।
ಬರಿದೆ ಮತ್ಸರದೊಳವರನು ನಿಂದಿಸಿ ॥
ಪರರು ಗೈದಿಹ ದುರಿತರಾಶಿಗಳ ಹೊರುವಾತ ।
ಧರೆಯೊಳವನಿಂದಧಿಕ ಪಾಪಿ ಯಾರಿಹರು ೩

ಪರರ್ಗೆ ಹಿತವನು ಮಾಡಿ ಪರರ ಸನ್ಮಾನಿಸುತ ।
ಪರರಿಂಗೆ ಸುಕ್ಷೇಮವನು ಬಯಸುತ ॥
ಇರುವನಾವನೊ ಅವಗೆ ಪರರ ಪುಣ್ಯದ ಫಲವು ।
ದೊರಕುವದು ಎಂದರಿತು ನಡೆವನೆ ಪುಣ್ಯಾತ್ಮ ೪

ಪರಪೀಡೆ ದುಷ್ಕರ್ಮ, ಪರಹಿತವೆ ಸತ್ಕರ್ಮ ।
ಪರರ ಪೀಡಿಸುವ ದುರುಳರನೆ ಕೊಂದು ॥

ಧರೆಯ ಭಾರವನಿಳುಹಿ, ಶರಣರನು ಬೆಂಬಿಡದೆ ।
ಪೊರೆಯುವ ಸದಾನಂದ ಸುಖದಿ ಪರಮಾತ್ಮ ೫

## ೧೭೦

ನರ ಜಲ್ಮವನ್ನು ಸಾರ್ಥಕ ಮಾಡಿಕೊಳ್ಳೀ ।
ಬರಿದೆ ಆಯುಷ್ಯ ಸಲುವದು ನೋಡಿಕೊಳ್ಳೀ ಪ

ಸ್ಥಿರವಲ್ಲ ಈ ದೇಹ ನೀರ ಮೇಲಣ ಗುಳ್ಳೆ ।
ಮರಣವಿರ್ಪುದು ಒಂದು ದಿನವಾದರೂ ।
ಅರಿತು ಅರಿಯದೆ ಗೈದ ದುರಿತ ಹರಚಿತವಾದ ।
ಹರಿ ಸ್ಮರಣೆಯನ್ನು ಮರೆಯದೆ ಜಪಿಸಿ ಕೊಳ್ಳೀ ಅ.ಪ

ಅಸ್ಥಿರದ ಸಂಸಾರ ವಿಷಯಾದಿ ಭೋಗ ಸುಖ ।
ಮೃತ್ಯು ಬಂದೆಳವಾಗ ವ್ಯರ್ಥವಹುದೂ ।
ಚಿತ್ತ ಶುದ್ಧದೊಳು ಪರಮಾತ್ಮನನು ಭಜಿಸಿರ್ದ ।
ಭಕ್ತರನು ಕರುಣದಿಂದೆತ್ತಿ ಸಲಹುವನೂ ೧

ಹಿಂದೆ ಪೋದವರೊಡನೆ ಹೊಂದಿ ಪೋದವರುಂಟೆ ।
ಬಂಧು ಬಾಂಧವರ್ಯ್ಯಾರಿಗ್ಯಾರಿಗಯ್ಯಾ ।
ಹೊಂದಿರ್ದ ಭವ ಪಾಶ ಬಂದ ಬಿಡಿಸುತ ಕಾಯ್ವ ।
ಬಂಧು ಶ್ರೀ ಪರಮಾತ್ಮನನ್ನು ನೆನನೆನದೂ ೨

ಭಕ್ತ ಸಂಸಾರಿಯೆಂದೆನಿಸುವ ಬಿರುದನೂ ಧರಿಸಿ ।
ಮಾತೆಯಾಗುವ ಜಗವ ಕಾಯ್ವ ಧಾತಾ ।
ಸೋತು ತನ್ನವರ ನಿಜ ಸುಖ ಸದಾನಂದದೊಳು ।
ಪ್ರೀತಿಯೊಳು ಕಾಯ್ವ ಜಗದ್ಗುರು ಕೃಪೆಯ ಪಡೆದೂ ೩

## ೧೭೧

ನಾರಾಯಣ ನಾರಾಯಣನೆನ್ನದೆ ।
ನೀರೊಳು ಮುಳುಗಿದಡೇನು ಫಲ ಪ

ಸಾರವರಿತು ಭಕ್ತಿಯನಿಡದಾ ಶ್ರುತಿ ।
(ಸಾರವ)ನೋದಿದಡೇನು ಫಲ ಅ.ಪ

ಬ್ರಾಹ್ಮಣನೆನ್ನುತ ಬ್ರಹ್ಮವನರಿಯದೆ ।
ಕರ್ಮವ ಮಾಡಿದಡೇನು ಫಲ ॥
ನಿರ್ಮಲ ಚಿತ್ತದಿ ಮರ್ಮವನರಿಯದೆ ।
ಧರ್ಮದಾನದಿಂದೇನು ಫಲ ೧

ಪರರನು ಪೀಡಿಸಿ ಪರರನು (ವಂಚಿಸಿ) ।
ದೊರೆ ತಾನೆಂದರದೇನು ಫಲ ॥
ಗುರುಹಿರಿಯರ ಪೂಜಿಸದೆ ಡಂಬಕೆ ।
ಹರಿ ಹರಿಯೆಂದರದೇನು ಫಲ ೨

ಪತಿಯನು ವಂಚಿಸಿ ಪರರನು ಕೂಡುತ ।
ಪತಿವ್ರತೆಯೆಂದರದೇನು ಫಲ ॥
ಧೃತಿಯ ನಿರುತ ಪ್ರಪಂಚದೊಳಿರಿಸುತ ।
ಸ್ತುತಿ ಪೂಜೆಗಳಿಂದೇನು ಫಲ ೩

ಸತತ ದುಷ್ಕೃತ್ಯದ ನಡತೆಯೊಳಿದ್ದವ ।
ತೀರ್ಥಯಾತ್ರೆ ಮಾಡಲೇನು ಫಲ ॥
ಸತಿಯ ಬಿಟ್ಟು ಪರಸತಿಗಪೇಕ್ಷಿಸಿ ।
ವ್ರತಗಳ ಮಾಡಲದೇನು ಫಲ ೪

ಮನುಜನಾಗಿ ಸುಜ್ಞಾನವನರಿಯದೆ ।
ತನುವನು ಪೊರೆದರದೇನು ಫಲ ॥
ಶ್ರೀನಿವಾಸನ ಪಾದವ ಸ್ಮರಿಸದೆ
ದಿನವನು ಕಳೆದರದೇನು ಫಲ ೫

## ೧೭೨

ನಾರಾಯಣನೆಂಬ ನಾಮವನನುದಿನ ।
ನೀ ಮನದೊಳು ಜಪಿಸೆಲೊ ಮನುಜ ಪ

ಘೋರ ಭವಾಂಬುಧಿ ಪಾರಾಗುತ ಸುಖ ।
ಸಾರದ ಪದವಿಯ ಸೇರಿರುತಿರುವರೆ ಅ.ಪ

ಪಂಚೀಕರಣದ ಮಿಂಚುವ ಪ್ರಭೆಗಳ ।
ವಂಚನೆ ವಿಷದಿ ಮನಸಿಲುಕಿ ॥
ಸಂಚಿತ ಕೃತ್ಯದಿ ವಿರಿಂಚಿಯಾಜ್ಞೆಗೆ
ಸಂಚರಿಸದೆ ನಿಶ್ಚಿಂತೆಯೊಳಿರುವರೆ ೧

ಸತಿಸುತ ಧನಗೃಹ ಪಶುಬಾಂಧವರೆನ-।
ಗತಿಹಿತರೆಂದೆಣಿಸದೆ ಮನದಿ ॥
ಮತಿಹೀನರ ಸಂಗದೊಳಿರಲನುದಿನ ।
ಪೃಥಿವಿಯ ಭೋಗವಸ್ಥಿರವೆನುತ ೨

ಬಲ್ಲವರೊಳು ತಾನೆಲ್ಲ ಕಾಲದೊಳು ।
ಉಲ್ಲಾಸದೊಳಿರುತೆಲ್ಲ ನಿಜ ॥
ಸೊಲ್ಲಿನ ಸಾರವ ಚೆಲ್ಲದೆ ಮನದೊಳು ।
ನಿಲ್ಲಿಸಿ ಭಾವಿಸಲಲ್ಲಿರುತಿಹನು ೩

ಇಂದುಣ್ಣುವ ಸುಖ ದುಃಖಂಗಳು ತಾ ।
ಹಿಂದೆಸಗಿದ ಕೃತಬಂಧಗಳು ॥
ಎಂದು ನಿಧಾನಿಸುತಿಂದು ಸದ್ಧರ್ಮದ ।
ಹೊಂದುತೆಲ್ಲ ಗೋವಿಂದನಿಚ್ಛೆಯೊಳು ೪

ಹೊರಗು ಒಳಗು ಸರ್ವಾತ್ಮನ ಲೀಲೆಯ ।
ಪರಿಕಿಸುತಾನಂದಾಬ್ಧಿಯೊಳು ॥
ಸರಸವಾಡಿ ಗುರು ಶ್ರೀನಿವಾಸನ ಪದ ।
ನಿರತಾನಂದದೊಳಿರು ನೀ ನಿಜದೊಳು ೫

## ೧೭೩

ನಿಜವರಿತಿರುವುದೆ ಭಾಗ್ಯಾ । ಹರಿ ।
ಭಜನೆಯೊಳಿರುವದೆ ಜನ್ಮಕೆ ಯೋಗ್ಯ ಪ

ಕುಜನರ ಸಂಗವ ತ್ಯಜಿಸಲು ಬೇಕು ।
ಸುಜನರ ಸಂಗದೊಳಿರಬೇಕು ।
ತ್ರಿಜಗಕ್ಕೊಡೆಯನುಯೆಂದೀ ಗುರು ಪದ ।
ಭಜನೆಯಿಂದ ಪೂಜಿಸುತಾನಂದದಿ ೧

ಶಾಸ್ತ್ರ ಪುರಾಣವನೋದಿರಬೇಕು ।
ತತ್ವಾರ್ಥವ ತಿಳಿದಿರಬೇಕು ।
ಚಿತ್ತದಿ ನಿರ್ಮಲ ಭಕ್ತಿಯೊಳನುದಿನ ।
ಸ್ತೋತ್ರಗೈದು ಹರಿ ಕೀರ್ತನೆಯಿಂದಲಿ ೨

ಸಾಧು ಸೇವೆಯೊಳಗಿರಬೇಕೂ ।
ಕಾಮ ಕ್ರೋಧ ಲೋಭಗಳ ಬಿಡಬೇಕೂ ।
ಭೇದವಾದ ಮೋಹ ಮದ ಮತ್ಸರಗಳ ।
ಹಾದಿ ಬಿಟ್ಟು ಗುರು ಬೋಧೆಯ ಮನನದಿ ೩

ಅತಿಥಿಗಳನು ಪೂಜಿಸುತಿರ ಬೇಕೂ ।
ಸಂತರೊಡನೆ ಬೆರೆತಿರಬೇಕೂ ।
ಮಾತೆ ಪಿತನು ಸತಿ ಸುತರು ಹಿತರು ಗುರು ।
ನಾಥನೆ ಪತಿತ ಪಾವನನೆಂದೆಣಿಸುತ ೪

ಭಗವಂತನ ಧ್ಯಾನದೊಳಿರಬೇಕು ।
ಜಗದಾತ್ಮನ ಪೂಜಿಸಬೇಕು ।
ಭಾಗವತಾಮೃತ ಸೇವಿಸುತನುದಿನ ।
ಯೋಗಾಧೀಶ ಸದಾನಂದನಾಗಲು ೫

## ೧೭೪

ಪಾಪದ ಭಯ ಯಾರಿಗಿಹುದು ಈ ಕಾಲ ।
ಶಾಪದಿಂದಡಗಿತ್ತೈ ಧರ್ಮ ಪರಿವಾರ ಪ

ಲೇಪವಿದು ಕೃತ ತ್ರೇತ ದ್ವಾಪರವ ದಾಟುತ್ತ । ಪ್ರ ।
ತಾಪದಾ ಕಲಿಯುಗದಿ ವ್ಯಾಪಿಸಿತು ಧರೆಯ ॥
ರೂಪದೋರದೆ ನರಕ ಕೂಪದೊಳು ಕೆಡಹುತ್ತ ।
ತಾಪಪಡಿಸುವ ಪರಿಯ ಶ್ರೀಪತಿಯೆ ಬಲ್ಲ ಅ.ಪ

ಕಷ್ಟ ದುಃಖಕೆ ಮೂಲ ಪಾಪವೇ ಕಾರಣವು ।
ಇಷ್ಟ ಸುಖ ಪಡೆಯುವರ ಪುಣ್ಯ ಫಲವು ॥
ಇಷ್ಟ ಪಡೆಯುವ ಪುಣ್ಯ, ಕಷ್ಟ ಪಡೆಯುವ ಪಾಪ ।
ಇಷ್ಟಿದರನರಿಯದವ ನರನೊ ಪಾಮರನೊ ೧

ಸ್ಥಿರಚರ ಪ್ರಾಣಿಯೊಳು ಪರಿಕಿಸಲು ಮೇಲಾದ ।
ನರಜನ್ಮದೊಳು ಬಂದು ಸುಖದುಃಖದ ॥
ಕಾರಣವ ಬಲ್ಲ ಗುರುಹಿರಿಯರಿಂದರಿತು ಸುವಿ ।
ಚಾರದಿಂ ನಡೆಯುವವನವ ನರೋತ್ತಮನು ೨

ಪುಣ್ಯಾತ್ಮನಾದವನು ಇಹಸುಖಂಗಳ ಪಡೆವ ।
ಪುಣ್ಯಾತ್ಮನಾದವನು ಸ್ವರ್ಗಸುಖ ಪಡೆವ ॥
ಪುಣ್ಯಾತ್ಮನಾಗಿ ಶ್ರೀಹರಿ ಭಕ್ತನಾಗಿರುವ ।
ಪುಣ್ಯಫಲದೊಳು ಸದಾನಂದ ಸುಖ ಪಡೆವ ೩

## ೧೭೫

ಪುಣ್ಯ ಮಾಡುವರೆ ಚೈತನ್ಯವಿಲ್ಲೆನ್ನುವೆಯ ।
ಕಣ್ಣ ಮುಂದಿರುವ ವಿಷಯಾದಿ ಸುಖಕೆ ಪ

ಚರವಾದ ವಿಷಯಾದಿ ಸ್ವಪ್ನಸುಖದಾಸೆಯೊಳು ।
ಪರಿಪರಿಯ ಸಾಧನೆಯೊಳರ್ಥ ಗಳಿಸಿ ॥

ದೊರೆತನದೊಳಿಹೆ ಯಮನ ಚರರು ಸೆಳೆದೊಯ್ವಾಗ ।
ಮೊರೆವೆ ನರಕುರಿಯೆ ಅದನರಿತಿಹೆಯ ಮನವೆ ೧

ಬಣ್ಣಗುಂದಿದರು ದಿವರಾತ್ರಿ ಸಾಧಿಸುವೆ ।
ಎಣ್ಣುತೆಣ್ಣುತಲಿ ನಿನ್ನಾಯುಷ್ಯ ಕಳೆವೆ ॥
ಇನ್ನೀಗಲಾದಂತೆ ಪುಣ್ಯ ಸಂಗ್ರಹಿಸಿದರೆ ।
ಸನ್ನುತದ ನಿಜಸುಖದೊಳಿರಬಹುದು ಮನವೆ ೨

ಚರಸುಖದ ಸಂಗ್ರಹಕೆ ಇರುವ ಆಯುಷ್ಯದ ।
ಪರಿಸಮಾಪ್ತಿಯ ತನಕ ಸಾಧಿಸುತಿಹೆ ॥
ಸ್ಥಿರಸುಖಕೆ ಆದಷ್ಟು ಪುಣ್ಯ ಸಂಗ್ರಹಿಸದಿರೆ ।
ನರಕದೊಳ್ ಬಾಯ್‌ಕಳೆದರೊದಗುವುದೆ ಸುಖವು ೩

ನರಜನ್ಮದೊಳು ಬಂದು ಅರಿವನರಿಯದೆ ವ್ಯರ್ಥ ।
ಚರ ಭೋಗ ಸುಖವ ಸುಸ್ಥಿರವೆನ್ನುತ ।
ಇರುವ ಜನ್ಮವ ಕಳೆದು ಭವದ ಬಲೆಯೊಳು ಸಿಲುಕಿ ।
ತಿರುತಿರುಗಿ ಬಳಲುತಿರೆ ಸುಖವಾಗಬಹುದೊ ೪

ಧರೆಗೆ ಭಾರದ ದುಷ್ಟರನು ಸಂಹರಿಸಿ ।
ಶರಣರನ್ನುದ್ಧರಿಸಿ ಸದ್ಧರ್ಮವ ॥
ಸ್ಥಿರಗೊಳಿಸಿ ಪರಮಾತ್ಮ ಮೆರೆವ ಕಲಿಯುಗದಿ ಸ-।
ದ್ಗುರುವಾಗುತಿಹನಲ್ಲೊ ಅರಿತುಕೊ ಮನವೆ ೫

ಏನರಿಯದವನಂತೆ ಮೌನದಿಂದಿರಬಹುದು ।
ತಾನೊರ್ವನೆಲ್ಲೊ ಸಂಚರಿಸುತಿರಬಹುದು ॥
ಧ್ಯಾನಿಸುವ ಪುಣ್ಯಾತ್ಮರಿಗೆ ಗೋಚರಿಸಬಹುದು ।
ತಾನಾಗಿ ಶರಣರೊಳು ಕರುಣವಿಡಬಹುದು ೬

ಗುರುವರನ ಚರಣಕ್ಕೆ ಸಾಷ್ಟಾಂಗವೆರಗುತ್ತ ।
ನಿರತ ಸೇವೆಯೊಳವನ ಮನಮೆಚ್ಚಿಸಿ ॥
ಪರತತ್ತ್ವವರಿತು ಶ್ರೀಹರಿ ಸದಾನಂದ ಸುಖ ।
ಶರಧಿಯೊಳಗೋಲಾಡುತಿರು ನಿರುತ ಮನವೆ ೭

## ೧೭೬

ಶಾಂತನಾಗದೆ ಭವದ ಬಂಧ ಬಿಡದಣ್ಣಾ ।
ಶಾಂತನಾಗದೆ ಭವದ ಚಿಂತೆ ಬಿಡದಣ್ಣಾ ಪ

ಶಾಂತನಾಗದೆ ಭವದ ದುಃಖಗಳು ಬೆಂಬಿಡದು ।
ಶಾಂತನಾಗದೆ ಭವದ ಭಯವು ಬಿಡದೂ ।
ಶಾಂತನಾಗದವಂಗೆ ಭವ ಭವರೋಗ ಬಿಟ್ಟಿರದು
ಶಾಂತನಾಗದೆ ಭವ ಭವಂಗಳೆಡೆ ಬಿಡದೂ ೧

ಶಾಂತನಾಗದವಂಗೆ ಅಜ್ಞಾನ ಬೆಂಬಿಡದು ।
ಶಾಂತನಾಗದೆ ಪಾಪಗಳು ಪೋಗದೂ ।
ಶಾಂತಿಯಿಲ್ಲದ ನರನ ಜನ್ಮವೆರ್ಥಾಗುವುದು ।
ಶಾಂತಿಯಿರದವಗೆ ದುರ್ಗತಿಗಳೊದಗುವದೂ ೨

ಶಾಂತಿಯಿಲ್ಲದ ಮನವು ಚಂಚಲದೊಳಡಗಿಹುದು ।
ಶಾಂತಿಯಿಲ್ಲದಿರೆ ಷಡ್ವೈರಿಗಳು ಬಿಡದೂ ।
ಶಾಂತನಾದರೆ ಸದಾನಂದ ಸುಖವಹುದೂ ೩

## ೧೭೭

ಸ್ನಾನ ಮಾಡಿ ಬೇಗ ಬಾರೆಲೋ । ಪಂಚಾತ್ಮ ಜಲದಿ
ಸ್ನಾನ ಮಾಡಿ ಬೇಗ ಬಾರೆಲೋ ।
ಸ್ನಾನ ಮಾಡು ಹೀನ ಭವದ ।

ನ್ಯೂನವಾದ ಮಲಿನ ತೊಳದು ।
ಶ್ರೀನಿವಾಸನನ್ನು ಸೇರಿ । ನೀನು ಮುಕ್ತನಾಗಿರುವರೆ ಅ.ಪ

ಮಾತೃ ಸ್ಥಾನವನ್ನು ಕಾಣೆಲಾ । ಅಲ್ಲಿ ।
ಮಾತಾ ಪಿತೃಗಳೆಲ್ಲರಿಹರು ನೋಡೆಲಾ ।
ಮಾತ್ರೈ ಮಾತಾ ಪಿತೃಗಳುವಿ
ಧಾತ್ರ ವಶದಿ ಸಿಲುಕಿರುವರು ।
ಸ್ವಾರ್ಥವಾಗಲೆಂದು ಜಗ –।
ತ್ಕರ್ತನನ್ನು ಪೂಜಿಸುವರೆ ೧

ಪಿತೃ ಸ್ಥಾನಕಿತ್ತ ಬಾರೆಲೋ ಇಲ್ಲಿ ಪಿತನ ।
ಪಿತೃಗಳೆಲ್ಲ ಬಳಲ್ವರೆಲ್ಲೆಯೋ ।
ಸತತ ಶುದ್ಧ ಚಿತ್ತ ಲಕ್ಷ್ಮೀ ।
ಪತಿಯ ಚರಣದೊಳಗೆ ನಿಲಿಸಿ ।
ಅತಿಶಯದೊಳು ಪಾಡಿ ಪರ
ಗತಿಯ ಪಡೆದು ಸುಖದೊಳಿರಲು ೨

ಅಂತರಂಗದೊಳಗೆಯಿರುವವರಾ । ನಿಶ್ಚಿಂತೆಯಿಂದ ।
ಕುಂತಿರುವ ಹಗೆಗಳಾರ್ವರಾ ।
ಶಾಂತಿ ದಾಂತಿಯವರ ಸಹಾಯ –।
ವಾಂತು ದುರುಳರನ್ನು ಗೆಲಿದು ।
ಅಂತರಾತ್ಮನನ್ನು ನೆನೆದು ।
ಚಿಂತಿತಾರ್ಥ ಪಡೆಯಲೀಗ ೩

ಅದು ಇದೆಂಬ ಭ್ರಮೆಗಳ್ಯಾಕೆಲಾ । ಬಹಿರಂಗದಲ್ಲಿ ।
ಪದುಮನಾಭನಾಟ ನೋಡೆಲಾ ।
ವಿಧ ವಿಧದ ಮಹೇಂದ್ರ ಜಾಲ ।
ವುದಿಸಿ ಬೆಳದೋಲ್ವೈಸಿ ತೋರ್ಪ ।
ಸದಮಲಾನಂದಾತ್ಮಮಯನ ।
ಹೃದಯದೊಳಗು ಹೊರಗು ನೋಡಿ ೪

ಗುರುವೆ ಬ್ರಹ್ಮನೆಂದು ನೋಡೆಲಾ । ಗುರು ವಿಷ್ಣುವನ್ನು ।
ಗುರು ಮಹೇಶನೆಂದು ತಿಳಿಯೆಲಾ ।
ಗುರು ಜಗನ್ಮಯನೆ ಭಕ್ತಿ ।
ಗುರುವೆ ಭಕ್ತಿ ಮುಕ್ತಿ ಶಕ್ತಿ ।
ಗುರುವೆ ಸದಾನಂದವಾಸ ।
ಗುರುವೆ ನಿಜದ ಶ್ರೀನಿವಾಸ ೫

## (ಊ) ಗುರುನಮನ

### ೧೭೮

ಗುರುಕರುಣಾಮೃತ ಶರಧಿಯ ತೆರೆಯೊಳು ।
ಮುಳುಗಿ ಮೀಯೊ ಮನುಜ ಪ

ಪರಿಪರಿ ಹಿಂದಣ ದುರಿತ ಬಂಧಗಳ ।
ಹರಿಸಿ ಸುಸ್ಥಿರ ಪದ (ಕರುಣಿಸುವಂಥ) ಅ.ಪ

ತೀರ್ಥಯಾತ್ರೆಗಳ ಸುತ್ತಿ ಸುಳಿದಿರಲು ।
ಸ್ವಾರ್ಥವಾಗದಣ್ಣ ॥
ಚಿತ್ತದಿ ನಿರ್ಮಲ ಭಕ್ತಿಯೊಳ್ನಿಜ ಸುಖ ।
ಮುಕ್ತಿಸಂಪದಗಳ ಅರ್ತಿಯೊಳ್ ಪಡೆಯಲು ೧

ಯಜ್ಞಶತಂಗಳ ಊರ್ಜಿಸಿ ಮಾಡಲು ।
ಮೂರ್ಜಗಪತಿ ದಯವಿಡನಣ್ಣ ॥
ಸಜ್ಜನರಂದದಿ ಪ್ರಾಜ್ಞರ ಸಂಗದಿ ।
ಅರ್ಜುನ ಸಖನ ಪದಾಬ್ಜವ ಸೇರಲು ೨

ಲಕ್ಷ ಸಂಖ್ಯೆ ಗೋದಾನವ ಮಾಡಲು ।
ಪಕ್ಷಿವಾಹನ ದಯವಿಡನಣ್ಣ ॥
ಅಕ್ಷಯ ಸುಖವ ತನ್ನಿಚ್ಛೆಯೊಳ್ ಪಡೆದು ಮು–।
ಮುಕ್ಷುವಾಗಿ ನಿಜ ಮೋಕ್ಷವ ಪಡೆಯಲು ೩

ಇನ್ನೂರ್ ಮುನ್ನೂರ್ ಕನ್ಯಾದಾನದಿ ।
ಚೆನ್ನ ಶ್ರೀಕೃಷ್ಣನೊಲಿಯನಣ್ಣ ॥
ತನ್ನೊಳವರಿಯುತ ಪನ್ನಗಶಯನನ ।
ಸನ್ನಿಧಿ ಭಾಗ್ಯವನುಣ್ಣುತಿರುವರೆ ೪

ವೇದಶಾಸ್ತ್ರ ಪುರಾಣವನೋದಲು ।
ಮಾಧವ ಮೆಚ್ಚುವನಲ್ಲಣ್ಣ ॥
ಆದಿಮಧ್ಯಾಂತವಿಲ್ಲದ ಪದವಿಯೊಳ್ ಸ–।
ದಾನಂದನಾಗಿ ವಿನೋದದೊಳಿರುವರೆ ೫

## ೧೭೯

ಗುರುವರನೆ ಲಾಲಿಸೊ ।
ಸ್ಥಿರ ಸುಖದೊಳ್ ಪಾಲಿಸೊ ಪ

ಗುರುವರ ತವಚರಣಕೆ ಶಿರವೆರಗುತ ।
ಕರವ ಮುಗಿವೆ ನಿನ್ನಂತಿರಿಸೆನ್ನ ನಿಜದೊಳ್ ಅ.ಪ

ಸೃಷ್ಟಿಸಿದವನೆ ಯೆನ್ನಿಷ್ಟಾರ್ಥವೀವನೆ ।
ಶ್ರೇಷ್ಠನೆನ್ನಿಸುವನೆ ॥
ಸೃಷ್ಟಿ ಸ್ಥಿತಿಲಯವೆಂಬ ಕಟ್ಟಳೆಗಧೀಶನಾಗಿ ।
ಅಷ್ಟಮೂರ್ತಿಯೆನಿಸಿ ಜಗವ । ಗುಟ್ಟಿನಿಂದಲೆ ಪೊರೆವ ೧

ನಿನ್ನನಾ ಸೇರಿದೆಯಿನ್ನಾವ ಭಯವಿದೆ ।
ಮನ್ನಿಸೆನ್ನಗಲದೆ ॥
ಎನ್ನನುದ್ಧರಿಸುವ ಭಾರ ನಿನ್ನದಾದ ಮೇಲೆ ನಾನು ।
ಧನ್ಯನಾಗಿ ಭಿನ್ನವಡಗಿ ಮಾನ್ಯನೆನಿಸಿ ಕಾಯ್ದ ೨

ಸವಿಸವಿದು ಸೊಗಸಿದೆ, ತವ ಬೋಧಾಮೃತವದೆ ।
ಭವಭಯವು ಹರಿದಿದೆ ॥

ಪಾವನನಾದೆನು ಮುಕ್ತಿ ಶ್ರೀವಧು ಸತ್ಕರುಣದಿಂದ ।
ದೇವರ ದೇವನೆ ಶಿವ ಸದಾನಂದನಾಗಿರುವ ೩

## ೧೮೦

ಜ್ಞಾನ ಸಂಜೀವಾ ದಯ ಮಾಡೋ ಬೇಗಾ ।
ಮಾನಸಾದಾತೂರ ಕಳವಳಗೊಳದಂತೇ ಪ

ಮೂಢ ಮಾನವ ನಾನು । ರೂಢಿಗೊಡೆಯ ನೀನೇ ।
ಕಾಡುವ ದುರಿತಾಗಳೋಡಿಸಿ ಸಲಹಲು ೧

ದುಷ್ಟ ಜನರು ಧರೆಯೊಳು । ಶಷ್ಟಾ (?) ಮಂದಿಗಳಿವರು ।
ನಿಷ್ಠೂರದಿಂದೆನಗೆ । ಕಷ್ಟಗೊಳಿಸದಂತೇ ೨

ಸತ್ಯವ ನಡಸಲಕೃತ್ಯಾರು ಬಿಡರು ।
ನಿತ್ಯಾ ಚಿತ್ತಕೆ ದುಃಖವೊತ್ತಿ ದೂಡುವರು ೩

ಜೇಷ್ಠಾತ್ರಿ ಸುಖದಿಂ । ದಷ್ಟಾಮದಗಳು ಪುಟ್ಟಿ ।
ಧ್ರಷ್ಟರಿಂದ್ದದಿನೆಂಟು । ಕೆಟ್ಟಾ ದೋಷವ ತ್ಯಜಿಸಲ್ ೪

ಎಂದು ಹೃದ್ಮಂದೀರದಿಂದಾ ನಿತ್ಯಾನಂದಾ ।
ಎಂದೂ ರಕ್ಷಿಸೋ ಯೆನ್ನ । ತಂದೆ ಸದಾನಂದ ೫

## ೧೮೧

ನಮಿಪೆನು ಗುರುರಾಯನೆ । (ನಾ ನಿನ್ನನು)।
ನಮಿಪೆನು ಗುರುರಾಯನೆ ಪ

ನಮಿಪೆ ಸದಾನಂದ ಗುರುವೆ ತವ ಚರಣಕೆ ।
ಕುಮತಿಯಾಗಿರ್ದೆನ್ನ ಮಮತೆಯೊಳ್ ಪೊರೆಯೆಂದು ಅ.ಪ

ಮಂದ ಬುದ್ಧಿಗಳಿಂದ ನೊಂದೆ ಭವಭಯದಿಂದ ।
ಹೊಂದಿದೆ ತವ ಪಾದ ಕಂದನ ಸಲಹೆಂದು ೧

ಎನ್ನಾದಿ ಮಧ್ಯಾಂತವನ್ನರಿಯದ ಭ್ರಾಂತ ।
ಇನ್ನು ನೀ ವೇದಾಂತವನ್ನು ಬೋಧಿಸೆಂದೆನುತ ೨

ಮುನ್ನ ನಾನಾರೆಂಬುದಿನ್ನು ಮುಂದೇನೆಂಬು–।
ದೆನ್ನಯ ನಿಜದರಿವ ಚೆನ್ನಾಗಿ (ಪೇಳೆಂದು) ೩

ಯೋಗ ಭೋಗದ ಸಕಲಾಗಮಂಗಳ ಸುಖ
ಸಾಗರದೊಳಗೈಕ್ಯವಾಗುವಂತೆಸಗಯ್ಯ ೪

ಗುರುವೆ ವಾಣೀಶ ಮದ್ಗುರುವೇ ಲಕ್ಷ್ಮೀಶ ।
ಗುರು ಪಾರ್ವತೀಶ ಸದ್ಗುರುವೆ ತ್ರೈಜಗದೀಶ ೫

ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ ।
ಇಂದೆನ್ನ ಹೃದಯದೊಳ್ ನಿಂದು ಮೈದೋರೆಂದು ೬

ಆದಿಶಕ್ತಿಯೆ ನಿಜವಾದ ಸದಾಶಿವ ।
ನಾದ ಸ್ವರೂಪನೆಯಾದ ಸದಾನಂದ ೭

## ೧೮೨

ನಾನಾರೆಂಬುದ ನಿಜವೆನಗೀಗ ಪೇಳ್ವೈ ।
ನೀನೆ ಸದ್ಗುರುರಾಯನೆ ಪ

ಮಾನವನು ನಾನಾಗಿ ಜನಿಸಿದ –।
ರೇನು ಫಲವೆನಗಿಲ್ಲದಾಯಿತು ।
ನಾನು ನಿನ್ನವನಾಗಲೆನ್ನನು ।
ಹೀನನಿವನೆನಲೇನು ಕಾರಣ ಅ.ಪ

ನೀನೆ ಸೃಷ್ಟಿಸಿದವನು ।
ನೀನೆ ಪಾಲಿಸುವವನು ।
ನಿನ್ನಿಂದಾದವ ನಾನಾರೊ ॥
ನೀನೆ ನಿಜ ಸುಖ ವಸ್ತುವಾಗಿಹೆ ।
ನಾನು ನಿನ್ನನು ಪೂಜಿಸುತ್ತಿರೆ ॥
ನೀನೆ ಪುರುಷೋತ್ತಮನು ನಿನ್ನಾ – ।
ಧೀನದೊಳು ನಾನಿರುವ ದಾಸನು ೧

ನೀನೆ ದೇವರ ದೇವ ।
ನಾ ನಿನ್ನೊಳಾದವ ।
ನಾನಾರು ನೀ ಪೇಳಯ್ಯ ॥
ನೀನೆ ಹೀನನೊ ನಾನೆ ಹೀನನೊ ।
ಎನ್ನೊಳಗೆ ಪರಿಪೂರ್ಣನಾವನೊ ।
ನೀನೆ ಪಾವನ ವಸ್ತುವಾಗಿಹೆ ।
ಎನ್ನೊಳಗೆ ನೀನ್ನೈಕ್ಯವಾಗಿಹೆ ೨

ದೀನವತ್ಸಲನೆನ್ನ ।
ಮಾನಾಪಮಾನಗಳ್ ।
ನಿನಗಲ್ಲದಾರಿಗಯ್ಯ ।
ನಿನ್ನ ಭಕ್ತರ ಹಾನಿವೃದ್ಧಿಗ –।
ಳನ್ಯರೊಬ್ಬರಿಗಿಹುದೆ ಪೇಳ್ಬೈ ।
ಅನ್ಯನೋ ನಾ ನಿನ್ನವನೊಯೇ – ।
ನೆನ್ನು ನೀ ನಿಜವನು ಸದಾನಂದ ೩

## ೧೮೩

ಶರಣು ಸದ್ಗುರುನಾಥ ಮಮ ದಾತ ।
ಶರಣಾಗತರನು ।
ಕರುಣೆಯಿಂದಲಿ ಪೊರೆಯೊ ಸುಪ್ರೀತ ಪ

ಪರಿಪರಿಯ ಭವದೊಳಗೆ ತಿರುಗುತ ।
ನರ ಜನುಮದೊಳು ಬಂದು ತೊಳಲುತ ।
ಮರೆಯ ಹೊಕ್ಕೆನು ತವ ಪದಾಶ್ರಿತ ।
ತರಳನನು ಸ್ಥಿರಸುಖದಿ ಪಾಲಿಸು ಅ.ಪ

ಬ್ರಹ್ಮ ನಿರ್ಮಲರೂಪ ಗುರು ಬ್ರಹ್ಮ । ಸಚರಾಚರಾತ್ಮಕ ।
ಧರ್ಮಪಾಲನ ಗುರು ಪರಬ್ರಹ್ಮ ।
ಬ್ರಹ್ಮ ವಿಷ್ಣು ಮಹೇಶ್ವರಾತ್ಮಕ ।
ಬ್ರಹ್ಮ ಬ್ರಹ್ಮೋಂಕಾರ ರೂಪಕ ।
ಬ್ರಹ್ಮ ಬ್ರಹ್ಮಾನಂದ ದಾಯಕ ।
ಬ್ರಹ್ಮ ಗುರು ಪರಬ್ರಹ್ಮಣೇ ನಮಃ ೧

ಸತ್ಯ ಗುಣ ಪೂರಿತನೆ ನಿರುಪಮನೆ । ನಿರ್ಗುಣ ನಿರಂಜನ ।
ನಿತ್ಯ ತೃಪ್ತ ನಿರಾಮಯಾತ್ಮಕನೆ ॥
ಸತ್ಯಚರಿತನೆ ಸದ್ಧೃದಯ ಸ ।
ರ್ವೋತ್ತಮೋತ್ತಮ ದೇವದೇವನೆ ।
ಅತ್ಯಧಿಕ ಭಯ ಭಕ್ತಿಯಿಂ ಪದ–।
ಕರ್ಪಿಸುವೆನೀ ತನುಮನಂಗಳ ೨

ನೀನೆ ಮತಿ ಗತಿ ನೀನೆ ಸದ್ಗುರುವೆ । ಸರ್ವತ್ರ ಸಾಧನ ।
ನೀನೆ ಎನ್ನಯ ಆದಿ ಕುಲವಿಭುವೆ ॥
ನೀನೆ ತಂದೆಯು ನೀನೆ ತಾಯಿಯು ।
ನೀನೆ ಕರುಣಾಸಿಂಧು ಬಂಧುವು ।
ನೀನೆ ಪರಮಾನಂದದಾತನು ।
ನೀನೆ ಎನ್ನಯ ಪ್ರಾಣನಾಥನು ೩

ಆದಿತತ್ತ್ವ ರಹಸ್ಯ ಮೂಲವನು । ನಾನರಿಯೆನೀ ಭವ ।
ವಾರ್ಧಿಯನ್ನುತ್ತರಿಪ ರೀತಿಯನು ॥
ಆದಿಮಧ್ಯಾಂತಗಳ ತಿಳಿಯೆನು ।

ಹಾದಿಯೇನೆಂದೆನುತಲರಿಯೆನು ।
ಆದಿಮೂರುತಿ ಕರುಣದಿಂದೆನ–।
ಗಾದರದಿ ನೀ ಬೋಧಿಸೈ ನಿಜ ೪

ಸರ್ವದಾ ನಂಬಿರುವೆ ತವ ಪದವ । ಗುರದೇವ ಜಯ ಜಯ ।
ಸರ್ವದಾ ಕೊಡು ತವ ಪದದ ಸೇವಾ ॥
ಸರ್ವದಾ ಸರ್ವಾತ್ಮ ಜಯ ಜಯ ।
ಸರ್ವದಾ ನಿಜಸುಖದ ಜಯ ಜಯ ।
ಸರ್ವದಾ ಸನ್ಮೋಕ್ಷ ಜಯ ಜಯ ।
ಸರ್ವದಾ ಸದಾನಂದ ಜಯ ಜಯ ೫

## ೧೮೪

ಶಾರದಾವರ । ಶರಣು ಗುರುವರಾ ।
ಶಾರದಾವರ ಪ

ನಾರಾಯಣ ನಾಮ । ಚರಣ ಭಕ್ತಿ ಪ್ರೇಮ ।
ಸಾರಿ ಸಂನ್ನುತಿಪ್ಪಾ । ವರವ ನೀಯೆನ್ನಪ್ಪಾ ಅ.ಪ

ಸೃಷ್ಟಿಕಾರಣ ಪರ । ಮೇಷ್ಠಿದ್ರುಹಿಣಾ । ದುಷ್ಟಮಾರಣ ।
ಸೃಷ್ಟ ವೇದ ವಿಧಾತ ಶ್ರೇಷ್ಠ । ಭೂಸುರ ಜೇಷ್ಠಾ ।
ಕಷ್ಟ ಪರಿಸೊ । ಇಷ್ಟಾರ್ಥ ಪಾಲಿಸೊ ೧

ಹರಿಕಥಾಮೃತ । ಸಾರವೀಕ್ಷೃತ । ವರಕವಿತ್ವಥಾ ।
ಸ್ಥಿರ ಮನೋರಥವ । ಪೂರಯಿಸೊ ದೇವ ।
ಭಾರವೊಪ್ಪಿಸಿದೆನು । ಪಾರಗಾಣಿಸಿದನು ೨

ಮರೆಯ ಹೊಕ್ಕೆನೂ । ವರಕವಿತ್ವವನ್ನೂ । ಮೆರೆಯಿಸಿ
ನೀನೂ । ಹರಿದಾಸತ್ವವಿತ್ತೂ । ಪೊರೆಯಬೇಕು ಮತ್ತು ।
ಇರಿಸೆನ್ನಾ ಸತ್ಕೀರ್ತಿ । ಸ್ಥಿರ ಸದಾನಂದಾರ್ತಿ ೩

## ೧೮೫

ಶ್ರೀ ಗುರುವರನೆ ನಮೋ । ನಮ ಓಂ ।
ಶ್ರೀ ಗುರುವರನೆ ನಮಃ ಪ

ಭಾಗವತರ ನಿಜಯೋಗ ಭಾಗ್ಯ ಸುಖ ।
ಸಾಗರ ಮಹಿಮ ಸದಾನಂದ ಮೂರುತಿ ಅ.ಪ

ವಿಘ್ನನಿವಾರಣ ಕಾರಣ । ನಿಗ–
ಮಾಗಮ ಶಾಸ್ತ್ರ ವಿಚಾರಣ ॥
ತ್ರಿಗುಣಾತ್ಮಕ ತ್ರಿಜಗತ್ಪರಿಪಾಲನ ।
ಸಗುಣ ನಿರ್ಗುಣ ತ್ರೈಜಗದುದ್ಧರಣ ೧

ತಂದೆ ತಾಯ್ ಗುರು ನೀನೆ ಬಾಂಧವ । ನಾ ।
ನಂದಿಂದಿಗೆಂದೆಂದು ನಿನ್ನವ ॥
ಇಂದು ಎನ್ನ ಹೃನ್ಮಂದಿರದೊಳು ನಿಂದು ।
ನಂದದಿಂದ ದಯದೋರಿಂದೆನಗೆ ೨

ದಾಸರ ಸಂಗವ ಪಾಲಿಸೊ । ಹರಿ ।
ದಾಸನು ನಾನೆಂದೆನ್ನಿಸೊ ॥
ವಾಸಿಸಿ ಮನದೊಳು ಲೇಸು ಸಂಬೋಧೇಯ, ।
ಬೇಸರಿಸದೆ ಶ್ರೀನಿವಾಸನೆ ಪಾಲಿಸೊ ೩

# (ಎ) ಮಂಗಳ ಪದಗಳು

## ೧೮೬

ಏಳಯ್ಯ ಶ್ರೀ ಗುರು ಸಚ್ಚಿದಾನಂದನೆ ।
ಏಳಯ್ಯ ಬೆಳಗಾಯ್ತು ಏಳು ಬೇಗ ಪ

ಏಳು ಪನ್ನಗಶಯನ ಏಳು ಗರುಡಗಮನ ।
ಏಳೈ ಕರುಣಾಕರನೆ ಏಳು ಲಕ್ಷ್ಮೀವರನೆ ಅ.ಪ

ಭಾರತೀಶನು ಋಷಿವರರ ಸಮ್ಮೇಳದಿ ।
ಪರಿಪರಿ ವೇದಸಾರದ ಘೋಷದಿ ॥
ಹರಿಯೆ ನಿನ್ನಯ ದಿವ್ಯ ಚರಣಪೂಜೆಯ ಮಾಡಿ ।
ಕರವ ಮುಗಿದು ಶಿರವೆರಗಿ ಸಂಸ್ತುತಿಸುವ ೧

ಚಂದ್ರಶೇಖರನು ನಂದನರೊಡಗೂಡಿ ।
ಇಂದುವದನೆ ಗೌರಿಯೊಂದಿರುತ ॥
ನಂದಿಯನೇರಿ ಆನಂದದಿ ಪ್ರಮಥರ ।
ವೃಂದದೊಡನೆ ಬಂದು ನಿಂದು ಹಾರೈಸುವ ೨

ಜಾತವೇದ ಪಿತೃಪತಿ ಯಾತುಧಾನ ಪ್ರ–।
ಚೇತಸ ಮಾತರಿಶ್ವ ಧನಾಧಿಪರ ॥
ವ್ರಾತದೊಳಮರೇಶ ಹಸ್ತಿವಾಹನನಾಗಿ ।
ಪತ್ನಿಯನೊಡಗೊಂಡು ಸ್ತೋತ್ರಮಾಡುವನಯ್ಯ ೩

ಮನು ಯಕ್ಷ ಗಂಧರ್ವ ಮುನಿಸಿದ್ಧ ಸಾಧ್ಯರು ।
ಪನ್ನಗ ಗರುಡ ಕಿನ್ನರ ತುಂಬುರರು ॥
ಸನಕ ಕಿಂಪುರುಷ ಸನಂದ ವಿದ್ಯಾಧರರು ।
ನೆನೆವರ್ ನಾರದರ್ಗೂಡಿ ಚಿನ್ಮಯಾತ್ಮಕ ರಂಗ ೪

ಯಾಗನಿಷ್ಠರು ನಿಗಮಾಗಮಜ್ಞರು ಭವ ।
ರೋಗವರ್ಜಿತ ಸರ್ವತ್ಯಾಗಿಗಳು ॥
ಭಾಗವತರು ನಿಜಭೋಗ ಸದಾನಂದ ।
ಯೋಗಿಗಳ್ ನಿಜಸುಖಸಾಗರರೊಡಗೂಡಿ ೫

## ೧೮೭

ಜೋಜೋ ಯದುಕುಲಾಂಬುಧಿ ಪೂರ್ಣಚಂದ್ರ ॥
ಜೋಜೋ ಪದುಮದಳಾಕ್ಷ ಉಪೇಂದ್ರ ಪ

ಜೋಜೋ ವೇದವಂದಿತ ನಿತ್ಯಾನಂದ ।
ಜೋಜೋ ಆದಿಮೂರುತಿ ಶ್ರೀಗೋವಿಂದ ಅ.ಪ

ಮಧುಮುಖರಾದ ದುಷ್ಟರನೆಲ್ಲ ಕೊಂದು ।
ತ್ರಿದಶ ಗೋದ್ವಿಜರನ್ನು ಸಲಹಬೇಕೆಂದು ॥
ಅದಿತಿ ಕಶ್ಯಪರಿಚ್ಛೆ ಪೂರೈಸಲೆಂದು ।
ಉದಿಸಿದೆ ವಸುದೇವನರಸಿಯೊಳಂದು ೧

ದೇವಕಿಯುದರದೊಳ್ ನವಮಾಸ ಕಳೆದೆ ।
ಶ್ರಾವಣ ಬಹುಳಾಷ್ಟಮಿಯೊಳ್ ದಯೆದೋರ್ದೆ ॥
ಕಾವೆ ತ್ರೈಜಗವೆನ್ನುತಲಿ ಮೈದೋರ್ದೆ ।
ದೇವ ರೋಹಿಣಿ ನಕ್ಷತ್ರದೊಳು ಧರೆಗಿಳಿದೆ ೨

ಮಕುಟಮಣಿ ಕೇಯೂರ ಕೌಸ್ತುಭ ಭರದಿ ।
ಪ್ರಕಟಿಸಿ ತೋರುವ ಹಾರ ಕುಂಡಲದಿ ॥
ಭಕುತರಿಗಭಯದ ಕರದ ಕಂಕಣದಿ ।
ಸಕಲ ಲೋಕೇಶ ಶೋಭಿಸುವೆ ಸಂಭ್ರಮದಿ ೩

ಬೆರಳೊಳೂ ಮುದ್ರಿಕೆ ಮಿನುಗುವ ಚಂದ ।
ಉರದಿ ಪೀತಾಂಬರ ಶೋಭಿಸುವಂದ ॥
ಸರಪಣಿ ನೇವಳ ಡಾಬುಗಳಿಂದ ।
ಪರಿಪರಿ ಶೋಭಿಸಿ ಮೆರೆವೆ ಆನಂದ ೪

ಕಾಲಲಂದುಗೆ ಪಾಡಗ ಗೆಜ್ಜೆ ರವದಿ ।
ಮೇಲಾದ ನವರತ್ನ ಖಚಿತ ಭೂಷಣದಿ ॥

ಸಾಲಿನೊಳ್ ಸರಗಳ ಪದಕ ಸಂಭ್ರಮದಿ ।
ಲೀಲಾವಿನೋದವ ಮಾಳ್ಪೆ ಸಂತಸದಿ ೫

ಗಂಧ ಕಸ್ತುರಿ ಚಂದನಾದಿ ಲೇಪನದಿ ।
ಮಂದರ ಪದ್ಮ ತುಲಸಿ ಮಾಲಾ ಭರದಿ ॥
ವೃಂದಾರಕರು ಜಯ ಜಯವೆಂಬ ರವದಿ ।
ಒಂದಾಗಿ ಸುಮವೃಷ್ಟಿ ಸುರಿವ ಸಂಭ್ರಮದಿ ೬

ಭೇರಿ ನಗಾರಿ ದುಂದುಭಿಯ ನಾದಗಳು ।
ಓರಂತೆ ಧ್ವನಿಗೈಯುತಿಹವು ಶಂಖಗಳು ॥
ನಾರದ ಮುನಿಪನ ವೀಣಾಗಾನಗಳು ।
ನಾರಿ ಲಕ್ಷ್ಮಿಯು ರತ್ನದಾರತಿಯೆತ್ತುವಳು ೭

ಪರಿಪರಿ ಕಪಟನಾಟಕ ಸೂತ್ರಧಾರಿ ।
ಮರೆಹೊಕ್ಕ ಶರಣರ ಭವಭಯಹಾರಿ ॥
ನಿರತ ಸದಾನಂದ ಭಕ್ತ ಸಂಸಾರಿ ।
ಗಿರಿಜೇಶಪ್ರಿಯನೆ ತ್ರೈಜಗದುದ್ಧಾರಿ ೮

ತ್ರುವಿತ್ರುವಿ ಯಜ್ಞವಸ್ತುವೆ ಯಜ್ಞಕರ್ತ ।
ತ್ರುವಿತ್ರುವಿ ಯಜ್ಞಭೋಕ್ತೃವೆ ಯಜ್ಞಭುಕ್ತ ।
ತ್ರುವಿತ್ರುವಿ ಸರ್ವಶಕ್ತನೆ ನಿತ್ಯತೃಪ್ತ ।
ತ್ರುವಿತ್ರುವಿ ಶಂಖಚಕ್ರಗದಾಪದ್ಮ ಹಸ್ತ ೯

ತ್ರುವಿತ್ರುವಿ ಸರ್ವಾಂತರ್ಯಾಮಿ ನಮಾಮಿ ।
ತ್ರುವಿತ್ರುವಿ ಶರಣ ಜನಾರ್ಚಿತಪ್ರೇಮಿ ॥
ತ್ರುವಿತ್ರುವಿ ನಿಶ್ಚಿಂತ ಸದ್ಗುಣಧಾಮ ।
ತ್ರುವಿತ್ರುವಿ ಪರತರ ಪಾವನರಾಮ ೧೦

ಇಂತೆಂದು ಬಗೆಬಗೆ ಲೀಲಾಟಗಳನು ।
ಅಂತರಾತ್ಮನೆ ನಿನ್ನ ತೂಗಿ ಪಾಡುವೆನು ।

ಸಂತತ ಪಾಡುತ್ತ ತೂಗುವರನ್ನು (ನೀ) ।
ನಂತರ್ಯದೊಳಗಿಟ್ಟು ಪೊರೆವೆನಿನ್ನೇನು ೧೧

ಮರೆವೆಯೊಳ್ ಬ್ರಹ್ಮಾಂಡಮಯನಾಗುತಿರುವೆ ।
ಅರಿವಿನೊಳ್ ಪರಂಜ್ಯೋತಿಯಾಗಿ ನೀನಿರುವೆ ।
ನಿರತ ಸದಾನಂದ ನೀನೆ ಆಗಿರುವೆ ।
ಗುರು ದಾಮೋದರ ಶ್ರೀನಿವಾಸ ಆಗಿರುವೆ ೧೨

# ಶ್ರೀ ಬೆಳ್ಳೆ ದಾಸಪ್ಪಯ್ಯರ ಕೀರ್ತನೆಗಳು

## (ಪಾವಂಜೇಶ)

## ಗಣಪತಿ ಸ್ತುತಿ

### ೧೮೮

ಭಜಿಸುವೆ ತವ ಚರಣ ಗಜಾನನ ಪ

ಸಿಂಧುವ ಮಥಿಸುವಾಗ ಸುರಾಸುರರ್
ವಂದಿಸದಿರಲು ಬೇಗಾ ।
ಮಂದರ ಗಿರಿಯ ಬಲ್ಪಿಂದ ಮಳ್ಗಿಸುತವ –
ರಿಂದ ಮೊದಲ ಪೂಜೆವೊಂದಿದ ವಿಘ್ನೇಶ ೧

ಪಾಶ ಅಂಕುಶಧರನೆ ವಿನಾಯಕ
ಮೂಷಿಕ ವಾಹನನೆ ।
ಈಶನಸುತ ವಿಘ್ನನಾಶನಮಣಿಗಣ
ಭೂಷಣ ರವಿಶತಭಾಸ ಲಂಬೋದರ ೨

ಉರಗಬಂಧನ ಜಠರಾಗಣಾಧ್ಯಕ್ಷ
ವರ ದಿವ್ಯ ಧವಳಾಂಬರಾ ।
ಧರಿಸುತಲನುದಿನ ಮೆರೆವನೆ ಪಾವಂಜಿ
ಪುರದಧೀಶನ ದಾಸರ್ಗುರು ಹಿತಗೈವನೆ ೩

### ೧೮೯

ಬೇಡುವೆನು ಕರ ಜೋಡಿಸುತ ನಿನ್ನಾ । ಗಣಾಧಿಪತಿ ನಾ ಪ

ಅಂಬಿಕಜ ಹೇರಂಬ ವಿಘ್ನೇಶಾ । ತವಪದವನನುದಿನ
ನಂಬಿಕೊಂಡಿಹೆ ಪಾಲಿಪುದ ಲೇಸಾ ।
ಶಂಭುಕುವರನೆ ಲಂಬೋದರನೆ ಬೇಡುವೆನು ೧

ನಾಗಬಂಧನ ಉದರ ಗಣನಾಥಾ । ತವಪದಕೆ ಶಿರವನು
ಬಾಗಿಸುತ ನಾ ನಮಿಪೆ ಪ್ರಖ್ಯಾತಾ ।
ಯೋಗಮೂರುತಿ ಯೋಗಿವಂದಿತ ಬೇಡುವೆನು ೨

ಪಾಶ ಅಂಕುಶಧಾರಿ ರವಿ ತೇಜಾ ವಿನಾಯಕ ಪಾವಂ–
ಜೇಶನಗ್ರಜ ಮೂಷಿಕಧ್ವಜಾ ।
ದಾಸಜನರನು ಪೋಷಿಸೆನ್ನುತ ಬೇಡುವೆನು ೩

## ೧೯೦

ಸಿದ್ಧಿ ವಿನಾಯಕ ಶ್ರದ್ಧೆಯಿಂ ಭಜಿಪೆ ಸ–
ದ್ಬುದ್ಧಿಯ ಕೊಡು ಗಣನಾಯಕನೆ ಪ

ಉದ್ಧರಿಸೆನ್ನ ಪ್ರಸಿದ್ಧ ಮಹಿಮ ಯೋಗಿ
ಹೃದ್ಯಗಣಾಧ್ಯಕ್ಷ ಜಿತಕಾಮನೇ ಅ.ಪ

ನಾಗೇಂದ್ರ ಭೂಷಣ ನಾಗೇಂದ್ರಾನನ ವಿದ್ಯಾ–
ಸಾಗರ ಗಣಪ ಲಂಬೋದರನೇ
ನಾಗಬಂಧ ಉರ ಪುನ್ನಾಗ ಫಲ ಭಕ್ಷಕ
ಆಗಮಜ್ಞನೆ ಸರ್ವ ವಿಘ್ನೇಶನೆ ೧

ಏಕದಂತನೆ ಭಕ್ತಾನೇಕ ವಂದಿತನೆ ಪಿ–
ನಾಕ ಪುತ್ರನೆ ಸರ್ವ ವ್ಯಾಪಕನೆ ।
ಶೋಕಾದಿ ತಾಪದ ವ್ಯಾಕುಲವಿಲ್ಲದು–
ಮಾಕುಮಾರಕ ವಿಘ್ನನಾಶಕನೇ ೨

ಪಾಶ ಅಂಕುಶಧರ ಮೂಷಿಕ ಧ್ವಜರತ್ನ–
ಭೂಷಣಾಗ್ರ ಪೂಜೆ ಪೊಂದುವನೇ
ದಾಸರಿಗನುದಿನ ತೋಷವೀಯುವ ಪಾವಂ
ಜೇಶನಗ್ರಜ ದೀರ್ಘನಾಸಿಕನೇ ೩

## ೧೯೧

### ಸರಸ್ವತಿ ಸ್ತುತಿ

ವಾಣಿ ಪಲ್ಲವ ಪಾಣಿ ನಾಗ-
ವೇಣಿ ಹಂಸಗಾಮಿನೀ ಪ

ವೇಣಿ ಹಂಸಗಾಮಿನೀ ಸು-
ವೀಣಾ ಪುಸ್ತಕ ಧಾರಿಣಿ ಅ.ಪ

ಶಾರದೆ ಶ್ರುತಿ ಸಾರನಿಧೇ
ವಾರಿಜಾಕ್ಷಿ ಭಾರತೀ
ವಾರಿಜಾಕ್ಷಿ ಭಾರತೀ ಮಮ-
ಕಾರ ಮೋಹಗಳಜಿತೀ ೧

ಲೋಕಮಾತೆ ಶೋಕರಹಿತೆ
ನಾಕಾಧೀಶ ಪೂಜಿತೇ
ನಾಕಾಧೀಶ ಪೂಜಿತೇ ವಿ-
ವೇಕ ಜ್ಞಾನ ಸಂಧೃತೇ ೨

ದಾಸರಿಷ್ಟವೀವ ಪಾವಂ
ಜೇಶನಗ್ರಜೆ ಸರಸ್ವತೀ ಸಂ-
ತೋಷವೀಯೇ ಸನ್ಮತಿ ವಾಣಿ ೩

## ೧೯೨

ಸರಸ್ವತಿ ವಿಧಿಸತೀ ಸುರತತಿ ಪೂಜಿತೇ ಪ

ಶ್ರೀವಾಣಿ ಬ್ರಹ್ಮನ ರಾಣೀ । ಅಹಿವೇಣಿ ಪಲ್ಲವಪಾಣೀ ।
ಶುಕವಾಣಿ ಸದ್ಗುಣ ಶ್ರೇಣೀ । ಕಲ್ಯಾಣೀ ಪದ್ಮಿನೀ ೧

ತ್ರೈಲೋಕ್ಯ ಪೂಜಿತೆ ಮಾತೇ ದಿವೌಕಸಾದ್ಯರ ಧಾತೇ ।
ರಮಣಿ ಕುಲದೊಳತಿ ಖ್ಯಾತೇ ಮುನಿನೀಕಾ ಸನ್ನುತೇ ೨

ಖಳ ಶಿಕ್ಷೆ ಸಜ್ಜನಪ್ರೀತೇ ಗಾನಾಧ್ಯಕ್ಷೆ ವರದೆ ಪುನೀತೇ ।
ದಾಸ ರಕ್ಷೆ ಬುಧೆ ಪುನೀತೇ ವನಜಾಕ್ಷಾ ಮಾನಿತೇ ೩

## ೧೯೩

## ಶ್ರೀ ಹರಿಸ್ತುತಿ

ಶ್ರೀ ರಮಾಧವ ವಾರಿಜನೇತ್ರ । ಪುರಾರಿಯ ಸಖ ಪಾಹಿಮಾಂ ಪ

ನಿಗಮ ಚೋರನ ಕೊಂದ । ನಗವನೆತ್ತುತ ಬಂದ ।
ಜಗವ ದಂತದಿ ಪೊತ್ತ । ನಗುತ ಕಂಬದಿ ನಿಂತ ।
ವಿಗಡ ವಿಪ್ರನಾದಾ ಕ್ಷತ್ರಿಯರುಗಳ ಶಿರವ ಕಡಿದಾ ಜಲಧಿಯ
ನಗದಿ ಬಂಧಿಸಿ ಪಾರ್ಥಗೆ ಸಾರಥಿಯಾಗಿ
ದಿಗಂಬರನೆನಿಸಿ ತುರಗವೇರಿದ ಕಲ್ಕ್ಯ ಶ್ರೀ ರಮಾಧವ ೧

ಎವೆಯಿಕ್ಕದಾಡುತ್ತ । ಜವದಿ ಭಾರವ ಪೊತ್ತ ।
ಕವಲು ದಾಡೆಯ ಧರಿಸಿ । ಕುವರಗೋಸ್ಕರ ಜನಿಸಿ ।
ಅವನಿಯ ದಾನವನು ಬೇಡುತ । ಶಿವನೊಳು ವಿದ್ಯೆಯನು ಪಠಿಸುತ ।
ರವಿಕುಲೋದ್ಭವನಾಗಿ । ಹವದಿ ಕಂಸನ ಗೆದ್ದು ।
ಜವದಿ ಬೆತ್ತಲೆಯಾಗಿ । ಹವಣಿಸುತೋಡಿದ ಶ್ರೀ ರಮಾಧವ ೨

ಜಲಚರ ಕೂರ್ಮಭೂವಲಯವೆತ್ತುತ ಕಂಭ ।
ದೊಳಗಿಂದ ಬಂದು ಮೂರಡಿ । ನೆಲಬೇಡಿ ಭಾರ್ಗವ ।
ಕುಲಜ ಶಿಲೆಯ ತುಳಿದಾನಂದನ । ನಿಳಯದೊಳಗೆ ಬೆಳೆದಾ ತ್ರಿಪುರರ ।
ಲಲನೆಯರನು ಮೋಹಗೊಳಿಸುತ ಹಯವೇರ್ದ ।
ಚೆಲುವ ಪಾವಂಜೇಶ ಗೆಳೆಯದಾಸರ ರಕ್ಷ ಶ್ರೀ ರಮಾಧವ ೩

## ೧೯೪

## ಶಿವಸ್ತುತಿ

ನೀಲಕಂಠ ಶಿವ ಶಂಕರ । ಫಾಲ ನೇತ್ರ ಭವ ಪ

ರುಂಡಮಾಲ ಸರ್ವಭೂತಾಳಿ ಸೇವಿತ । ಶೂಲಪಾಣಿಹರ ಅ.ಪ

ಸಾಮಗಾನ ಪ್ರಿಯ ಭಕ್ತರ । ಪ್ರೇಮಿ ಗುಣವರ್ಯ ನಿರುಪಮ ।
ಭೀಮಬಲ ಸುತ್ರಾಮವಂದಿತ । ಕಾಮನಾಶ ಹರ ೧

ನಾಗ ಚರ್ಮಧರ ಚಿನ್ಮಯ । ನಾಗ ಭೂಷವರ ಸರ್ವವೇ–
ದಾಗಮಾಳಿ ಸರಾಗ ಪೊಗಳುವ । ಯೋಗಿ ವಂದ್ಯ ಹರ ೨

ಈಶ ಮಹದೇವ ಅನುದಿನ । ದಾಸರನು ಕಾವ – ಪಾಂಂ
ಜೇಶನ ಪಿತ ಶ್ರೀಶ ಸಖ ಗಿರೀಶ ಶರ್ವ ಹರ ೩

## ೧೯೫

ಗಿರಿರಾಜ ಸುಕುಮಾರಿ ಶಕ್ತಿ ವಿರಕ್ತಿ ಪ

ದೊರೆಯುವಂತೆನಗವ್ವ ತವಪಾದ ಭಕ್ತಿ ಅ.ಪ

ಅಂಬುಜವದನೆ ಮೂಕಾಂಬಾ ಜಗದಂಬಾ
ಕಂಬುಕಂಠಿನಿ ಗುಹ ಜನನಿ ದುರ್ಗಾಂಬಾ ೧

ಕೇಶವನನುಜೆ ಭವಾನಿ । ಅನ್ನಪೂರ್ಣೇ ।
ನಾಸಿಕ ಚಂಪ ಪೋಲ್ವ ಶರ್ವಾಣೀ ೨

ಪಾವನೆ ಸೌಖ್ಯದಾಯಕಿಯೇ ಪಾರ್ವತಿಯೇ
ಪಾವಂಜೇಶನ ದಾಸಜನರ ರಕ್ಷಕಿಯೇ ೩

## ೧೯೬

ಶುಂಭ ದಮನಿ ದುರ್ಗೆಯೇ ಮಹಾಕಾಳಿ ಪ

ಶುಂಭ ದಮನಿ ದುರ್ಗೆ ಅಂಬುಜವದನೆಯೇ ॥ಶುಂಭ ಅ.ಪ

ಕಾಳಿಕರಾಳಿಯೇ ನೀಲಕುಂತಳೆಯೇ ।
ವ್ಯಾಳ ವೇಣಿಯೇ ಸುರಾಳಿ ಪೂಜಿತೆಯೆ ೧

ರಕ್ತಬೀಜನ ಹರೆ ಶಕ್ತಿ ಮಹೇಶ್ವರಿ
ಭಕ್ತರ ಪೋಷಿಣಿ ಮುಕ್ತಿದಾಯಕಿಯೆ ೨

ವಾಸವಾರ್ಚಿತೆ ಧೂಮ್ರನಾಶೆಯೆ ಬೇಡುವೆ ।
ಪೋಷಿಸೆನುತ ಪಾವಂಜೇಶನ ದಾಸರ ೩

# ಆ. ಕಾರ್ತಿಕೇಯ (ಸುಬ್ರಹ್ಮಣ್ಯ) ಸ್ತುತಿ

## ೧೯೭

ಏಳಯ್ಯ ಕಾರ್ತಿಕೇಯ । ಬೆಳಗಾಯಿತೇಳಯ್ಯ ಕಾರ್ತಿಕೇಯ ಪ

ಮೂಡದಿಕ್ಕಿನಲಿ ತಂಗಾಳಿ ಬೀಸುತ್ತಿಹುದು
ನಾಡಕೋಳಿಗಳೆಲ್ಲ ತಲೆಯೆತ್ತಿ ಸಂತಸದಿ
ಪಾಡುವವು ನಿನ್ನ ನಾಮಾವಳಿಯ ನೈದಿಲೆಯು
ಬಾಡುತಿದೆ ವಿರಹದಿಂದಾ ರೂಢಿಯನು ಬೆಳಗಿಸುತ
ಮೂಡುತಿಹ ರವಿಯನ್ನು ನೋಡಿ ಭಯದಿಂದ ಹಿಂ–
ದೋಡುವುದು ಕತ್ತಲೆಯು । ಕಾಡ ಹಕ್ಕಿಗಳೆಲ್ಲ
ಗೂಡಬಿಟ್ಟೋಡುವವು ೧

ದುರುಳ ಪದ್ಮನು ಸುರಪನರಸಿ ಶಚಿಯನು ಬಯಸಿ
ಸುರಪುರವ ಸುಲಿಯಲಿಕೆ ಬರುವ ವಾರ್ತೆಯ ಕೇಳಿ
ಸುರಪನತಿದುಗುಡದಿಂ ಕೊರಗುತ್ತ ತವಪಿತನ

ಚರಣ ಕಮಲಕ್ಕೆ ನಮಿಸಿ । ಮೊರೆಯಿಡಲ್ ಖಳನೊಡನೆ
ಧುರವನೆಸಗಲು ನಿನ್ನ ಕರೆದು ಕಳುಪುವೆನೆನುತ
ಸುರಪಗಭಯವನಿತ್ತು ಚರರನಟ್ಟಿಹನತ್ತ
ಧುರವನೆಸಗಲಿಕೆ ಬೇಗೇಳಯ್ಯ ಕಾರ್ತಿಕೇಯ ೨

ಅಸಿತ ಮುನಿಶಾಪದಿ ಅದಿತಿ ರಕ್ಕಸಿಯಾಗಿ
ಪಿಸಿ ತಾಸಿ ಪೆಸರಿಂದ ವೇದ ಚೋರನ ವರಿಸೆ
ಅಸುರಾರಿ ನಳಮತ್ಸ್ಯರೂಪಿಂದಲವಳ ಕರ
ಪಾತ್ರೆಯುದಕದಲಿ ಜನಿಸಿ ।
ಅಸುರನಸುವನು ಹೀರೆ ಪತಿವಿರಹದಿಂದ ನಾಲ್
ದೆಶೆ ತಿರುಗಿ ತವಪಾದ ಬಿಸರುಹವ ಸೇರಿಪ್ಪ
ಳಸುರೆ ಮೇಲ್ ದಯೆಯಿಂದ ಪೂರ್ವಜನ್ಮವನೀಯ
ಲೇಳಯ್ಯ ಕಾರ್ತಿಕೇಯ ೩
ವರ ದೇವಲಾಮುನಿಯ ಶಾಪದಿ ಸುಧರ್ಮನೆಂ
ಬರಸುವೇತಾಳಾಗಿ ಪರಿಪರಿಯ ದುಷ್ಕೃತ್ಯ
ವಿರಚಿಸುತ ತವ ಕ್ಷೇತ್ರಕೈತಂದು
ಹರಿಯುತಿಹ ಧಾರಾತೀರ್ಥದಿ ಮೀಯಲೂ ।
ದುರುಳತನವಡಗುತಂಕುರಿಸಲಾತಗೆ ಜ್ಞಾನ
ಶಿರಬಾಗಿ ಕಡುಭಕ್ತಿಯಿಂದೀಗ ತವಪಾದ
ಸರಸಿರುಹವನು ಅರ್ಚಿಪಗೆ ಮೋಕ್ಷ
ಕೊಡುವುದಕ್ಕೇಳಯ್ಯ ಕಾರ್ತಿಕೇಯ ೪

ಪರಮ ಋಷಿಗಳು ಇತ್ತ ಶಾಪದಿಂ ಕುಷ್ಠವಂ –
ಕುರಿಸೆ ಕಡು ದುಗುಡದಿಂ ನರಳುತ್ತ ಬಳಲುತ್ತ
ಸಿರಿಯರಸ ಸುತಸಾಂಬ ತವಧ್ಯಾನವನು ಮಾಡೆ
ಕರುಣದಿಂ ಕಾಪಾಡಿದಾ ಪರಮಪುರುಷನೆ ನಿನ್ನ
ದರುಶನವ ಗೈಯಲಿಕೆ ನರರೆಲ್ಲರುದಯದೊಳು
ನೆರೆದು ನಿಂದಿರುತಿಹರು । ಕರುಣದಿಂದವರನೀ–
ಕ್ಷಿಸುತಭಯವೀಯಲಿಕ್ಕೇಳಯ್ಯ ಕಾರ್ತಿಕೇಯಾ ೫

ಏಳು ಮುರಹರಸಖನೆ ಏಳು ಜಗತ್ಪಾಲಕನೆ
ಏಳು ಸುರಗಣನುತನೆ ಏಳು ಜನಕಾಶ್ರಿತನೆ
ಏಳು ವಲ್ಲೀಪ್ರಿಯನೆ ಏಳು ಮುನಿಗಣಸುತನೆ
ಏಳು ಪಾರ್ವತಿಬಾಲನೆ ।
ಏಳು ಜನರಕ್ಷಕನೆ ಏಳು ಖಳಶಿಕ್ಷಕನೆ
ಏಳು ನಿತ್ಯಾತ್ಮಕನೆ ಏಳು ಕಮಲೇಕ್ಷಣನೆ
ಏಳು ಸರ್ವೇಶ್ವರನೆ ಏಳ್ ತಾರಕಾಂತಕನೆ ಏಳಯ್ಯ ಕಾರ್ತಿಕೇಯಾ ೬

ಪಾವನವಾದ ಪಾವಂಜೆ ಪುರದೊಳು ನೆಲಸಿ
ಭಾವಶುದ್ಧದಲಿ ನಂಬಿದ ಭಕ್ತಜನರ ಮನೋ
ಭಾವಗಳನರಿತವರ ಬಯಕೆಯನು ಕರುಣದಿಂ–
ದೀವುತ್ತ ಮೆರೆಯುತಿರುವಾ ।
ಕೋವಿದನೆ ತವಪದವನೆಡೆಬಿಡದೆ ಭಕ್ತಿಯಿಂ
ಸೇವಿಸುತ ಧ್ಯಾನಿಸುವ ದಾಸರಂತನವರತ
ಕಾವೆನೆಂದಭಯ ಹಸ್ತವನೀಯಲ್ದಯದಿಂದ–
ಲೇಳಯ್ಯ ಕಾರ್ತಿಕೇಯಾ ೭

## ೧೯೮

ಮನದ ಬಯಕೆಯನೀವ ದಿವ್ಯ ನಾಮಾ – ಭಕ್ತ
ಜನರ ಪಾಲಿಸುವ ಷಣ್ಮುಖನ ನಾಮಾ ಪ

ಧರಣಿಯನು ಪಾವನಗೈದು ಮೆರೆಯುವ ನಾಮ ।
ಶರಣ ರಕ್ಷಕನೆಂಬ ಬಿರುದಾಂತನಾಮ ।
ಸುರಮುನಿಗಳ ನವರತ ಶಿರವ ಬಾಗಿಪ ನಾಮ
ಪರಕೆ ಪರತತ್ವವಾಗಿಹ ದಿವ್ಯನಾಮ ೧

ತಾರಕಾಸುರನ ಅಸು ಹೀರಿ ಕಳೆದ ನಾಮ
ಹೇರಂಬನಾನುಜನೆನಿಪ ನಾಮ ।
ಚಾರು ಕೇಕಿಯ ವೆಗಲ ನೇರಿ ಚರಿಪ ನಾಮ
ತಾರಕ ಬ್ರಹ್ಮವಾಗಿಹ ದಿವ್ಯನಾಮ ೨

ನಂಬಿದ್ದ ಸಾಂಬನಿಗೆ ಇಂಬುಗೊಟ್ಟಿಹ ನಾಮ
ಕಂಬನಿಯಗರೆವ ದನುಜೆಯ ಕಾಯ್ದ ನಾಮ ।
ಹಂಬಲಿಪ ವಾಸುಕಿಯೊಳಂಶವಿರಿಸಿದ ನಾಮ
ಶಂಭುಪುತ್ರನೆ ನಿನ್ನ ದಿವ್ಯನಾಮ ೩

ನೆಚ್ಚಿಬಹ ಭಕ್ತರನು ಮೆಚ್ಚಿ ಸಲಹುವ ನಾಮ
ತುಚ್ಛರನು ದೂರೆಸೆದು ಬಿಡುವ ನಾಮ ।
ಅಚ್ಚರಿಯು ಭಕ್ತರಿಗೆ ನಿಚ್ಚ ತೋರುವ ನಾಮ
ಸಚ್ಚಿದಾನಂದ ಚಿನ್ಮಯ ನಿನ್ನ ನಾಮ ೪

ವಾಸವನು ಅನುದಿನ ಸ್ತೋತ್ರ ಮಾಡುವ ನಾಮ
ವಾಸುದೇವನ ಗೆಳೆಯನೆನಿಪ ನಾಮ
ವಾಸ ಪಾವಂಜೆ ಕ್ಷೇತ್ರದಲಿಗೈದನ ನಾಮ
ದಾಸರ ಭವಾಂತರದ ಅಘ ಕಳೆವ ನಾಮ ೫

## ೧೯೯

ಶ್ರೀಕುಮಾರ ನಾಕೇಶ ಪೂಜ್ಯ ಕರುಣಾಕರನೆ ಬೇಗಲೇಳೆನ್ನುತಾ ಪ

ಕೋಕಿಲಗಾನೆ ಶ್ರೀವಲ್ಲಿಯೆಬ್ಬಿಪಳು ಪಿ ।
ನಾಕಿ ಸುತನೆ ನಿದ್ದೆ ಸಾಕೆನ್ನುತಾ ಅ.ಪ

ತರಣಿಸೂತನು ತಮದುರುವಣೆಯನು ಕಂಡು
ಭರಿತಕೋಪದಿ ರಕ್ತವಾಗಿಹನು ।
ತರಣಿಯು ತನ್ನ ಸಾಸಿರ ಕಿರಣದಿ ಸುಟ್ಟು
ತರಿದೊಟ್ಟಿ ತಮವ ಮುಂದರಿಸುವನು ದೇವ ೧

ಸುತ್ತ ಸಂಚರಿಸೆ ವಿಪತ್ತೊದಗಲಿಕೆ ಬೇ–
ಸತ್ತು ಮನದಿ ಕಡು ದುಃಖಿಸುತ
ಉತ್ತಮವಾತನೀ ಕೃತ್ಯವ ದೂರೆ ಪೂ
ರ್ವೋತ್ತರದಿಂ ಬಹನೇಳೆನ್ನುತಾ ದೇವ ೨

ಹಕ್ಕಿಗಳುರೆ ತಮ್ಮ ಪಕ್ಕದೊಳ್ಮಲಗಿಹ
ಚಿಕ್ಕ ಮರಿಗಳ ಮುತ್ತಿಟ್ಟೊಳುತ್ತ ।
ಚೊಕ್ಕಟ ಧ್ವನಿಗೈದು ಪಕ್ಕವನಲುಗಿಸಿ
ಫಕ್ಕನೋಡುವವು ನೀನೇಳೆನ್ನುತ ದೇವ ೩

ಸುರರು ಕಿನ್ನರರು ಕಿಂಪುರುಷರು ಸಾಧ್ಯರು
ಉರಗರು ನೆರೆದೆಲ್ಲ ಬಂದಿಹರೂ ।
ಶರಜನೆ ತವಪಾದ ದರುಶನಾಪೇಕ್ಷೆಯಿಂ
ಕರಗಳಂ ಮುಗಿದು ನಿಂದಿರುತಿಹರು ದೇವಾ ೪

ಧರಣಿಸುರರು ಎದ್ದು ಭರದಿ ಸ್ನಾನವ ಮಾಡಿ
ಪರಿಪರಿಯಲಿ ಸ್ತೋತ್ರ ಮಾಡುವರು ।
ವರದ ಪಾವಂಜೇಶ ಕರುಣದಿ ದಾಸರ
ಪರಿಕಿಸಿ ವರವೀಯಲೇಳುವುದು ದೇವ ೫

## ೨೦೦

ಪರಮ ಪುರುಷ ದಯಮಾಡೋ । ನಿನ್ನ ।
ಸಿರಿಚರಣದಮರೆಸೇರ್ದೆ ಕಾಪಾಡೋ ಪ

ಅರಿಯದೆ ವಿಪ್ರನೆಂದಿರಿಸಿ ಕೊಂಡೆ ।
ದುರುಳ ವ್ಯಾಧನ ನಾನು ಅತಿಪತಿಕರಿಸಿ
ನರಮಾಂಸ ಉಣಿಸಿದೇ ಮುನಿಗೆ– ಈ
ಪರಿಯ ಕೃತ್ಯದಿ ಬಿದ್ದೆ ನೀ ಅಧೋಗತಿಗೆ ೧

ಪಥವ ಕಾಣೆನು ನಾ ಕುಮಾರಾ– ತಕ್ಕ
ಪಥವ ತೋರಿಸು ಮಹದೇವ ಸುಕುಮಾರ ।
ಹಿತಗೈಯುವರ ಕಾಣೆ ಜೀಯಾ – ನಿನ್ನ
ಸುತನಂತೆ ಕಾಯೆಂದು ಬೇಡ್ವೆ ದಮ್ಮಯ್ಯ ೨

ಬಂಧು ಬಳಗವೆಲ್ಲ ಎನ್ನಾ – ಬಿಟ್ಟು
ನಿಂದಿಸುತಿರುತಲಿ ಹರಸು ಪ್ರಸನ್ನಾ ।
ತಂದೆಯೆಂದುಸುರ್ವೆನು ನಿನ್ನಾ – ಈಗ
ಬಂದ ಬವಣೆಗಳ ಕಳೆ ಅಗ್ರಗಣ್ಯಾ ೩

ಲೋಕದೂಷಿತನಾದೆ ನಾನು – ಅತಿ
ಶೋಕ ತಾಪದಿ ಬೆಂದು ಕಡುಬಳಲಿದೆನು ।
ಲೋಕ ಪೂಜಿತ ದೇವ ನೀನು – ಎನ್ನ
ವ್ಯಾಕುಲ ಕಳೆಯೆಂದು ಸೆರಗನೊಡ್ಡುವೆನೂ ೪

ಇಂದೆನಗಾರು ದಿಕ್ಕಿಲ್ಲಾ – ನಿನ್ನ
ಸಂದರುಶನವ ಮಾಡಿದೆ ವಲ್ಲೀನಲ್ಲಾ ।
ಬಂದೀಯೋ ಮನದಿಷ್ಟವೆಲ್ಲ – ದಾಸ
ನೆಂದೆನ್ನ ಕಾಯೊ ಪಾವಂಜೆಪುರ ನಲ್ಲ ೫

## ೨೦೧

ತರುಣಿ ವಲ್ಲಿಯು ತನ್ನ ಪುರುಷನ ಪಾದವ
ಕರದಿಂದ ಅಲುಗಿಸುತರುಹುವಳೂ ಪ

ಶರಣ ರಕ್ಷಕ ತವ ಚರಣ ದರ್ಶನಕಾಗಿ ನೆರೆದಾರು
ಸುರಸಿದ್ಧಸಾಧ್ಯರು ಬರುವರು ।
ಮನು ಮುನಿಗಳುರಗರು
ನರರು ತವ ದ್ವಾರದಲಿ ತಮ್ಮಯ ।
ಕರಗಳನು ಜೋಡಿಸಿ ಕೊಳುತ ನಿಂ

ದಿರುತಿಹರು ನೀನೇಕೆ ಮಲಗಿಹೆ ।
ಭರದಿ ನಿದ್ದೆಯ ತ್ಯಜಿಸುತೇಳೆಂದು ಅ

ಸೋಕುತ್ತ ತರುಗುಲ್ಮ ನೀಕವ - ಮನೆಗಳ
ನಾಕು ದಿಕ್ಕಿಲಿ ಮುತ್ತಿಕೊಂಡಾಳುತಾ ।
ಏಕಾಧಿಪತ್ಯದಿ ಮೆರೆಯುವ ತಮವನು
ನೂಕುತ್ತ ಜನಪದಕೆ ಉಷ್ಣವ ।
ಹಾಕುತ್ತಲಿಲಿರುತಿರಲಿ ಬೇಕೆಂದು ।
ದೇಕುತ್ತ ದಿನಮಣಿಯ ತೋಷದಿ ।
ಏಕಗಾಲಿಯು ರಥಕೆ ತುರಗವಿದೂ ।
ಕಟ್ಟಲಿಕೆ ಸಾಲಲಿ । ನಾಕರ ಮೇಲ್ಲೂರು
ಇರುವದು ನಡೆಸಲಿಕೆ ಸೂತಗೆ ।
ವ್ಯಾಕುಲವು ಕಾಲಿಲ್ಲವೆನ್ನುವ
ನೇಕಕಷ್ಟವನೆಣಿಸಿಕೊಳ್ಳದೆ ।
ಶ್ರೀ ಕುಮಾರನೆ ಪರಿಬರುತಿಹ-
ನೇಕೆ ಮಲಗಿಹೆ ಏಳು ಎನ್ನುತ ೧

ಪಡುಗಡಲಿಂದಲೀ ಕಡೆಗೆ ಉಗ್ರದಿ ಬಂದು
ಎಡೆಯೆಡೆಯೊಳಗೆಲ್ಲ ತಿರುಗಾಡುತಾ
ಗಿಡ ತರು ಲತೆಗಳ ಪಿಡಿದು ಕಿತ್ತೊಗೆಯುತ
ಕುಡಿಗಳನು ದಡಬಡನೆ ಉದುರಿಸಿ ।
ಮಿಡಿಗಳನು ತಾ ಬಳಸಿ ಸುತ್ತು ।
ಬುಡಗಳನು ನೆರೆ ಮೀಟುತೆಸೆಯುತ
ಕಡು ಬಳಲಿ ಪಿಂತಿರುಗಿಕೊಳ್ಳುತ್ತ ಪುಷ್ಪಗಳ ಮೆಲ್ಲನೆ
ಪಿಡಿದು ಕೀಳುತ್ತಲೆತ್ತಿಕೊಳ್ಳುತ್ತ । ತವಪದಕೆ ಕಾಣಿಕೆ
ಕೊಡುತ ನಮಿಸುತ ತನ್ನ ಕಷ್ಟವ ನುಡಿದು ಮೆಲ್ಲನೆ
ಪೋಪೆನೆನುತೀ ಎಡೆಗೆ ಬೀಸುತ ಬರುವ ವಾತನ
ಸಡಗರ ನೀ ನೋಡು ಎನ್ನುತ ೨

ಶೀತದ ಬಾಧೆಯ । ತಾ ತಾಳಲಾರದೆ ಸೋತು
ತಮ್ಮಯ ಗೂಡಿನೊಳಗೆ ಸೇರೀ
ಭೀತಿಯಿಂದಿಹ ಖಗವ್ರಾತವು – ಉದಯದ
ರೀತಿಯಾ ನೋಡುತ್ತ ತ್ಯಜಿಸುತ ಭೀತಿಯಾ ।
ತವಪದ ಭಕ್ತಿಯಾ ಖ್ಯಾತಿಯಾ । ನರರಿಂಗೆ ತೋರ್ಪವೆಂ ।
ಬಾತುರದಿ ಚಿಲಿಪಿಲಿಯ ಗುಟ್ಟುತ್ತಾ
ತವದಾಸರಂದದಿ ಪೋತಗಳ ಗೂಡಿನಲಿ ನಿಲಿಸುತ್ತಾ
ತಿನಿಸನ್ನು ತಹೆವೆಂದು । ಪ್ರೀತಿಯಿಂದಲಿ ಅರುಹಿ ಪಕ್ಕವ
ನಾತಗಳು ಬಿಡಿಸುತ್ತ ಪಾರುವ ।
ರೀತಿಯನು ನೋಡೇಳು ನೀ ನಿ– ।
ರ್ಭೀತ ಪಾವಂಜೇಶ ಎನ್ನುತ ೩

## ೨೦೨

ಕಾರ್ತಿಕೇಯ ನಮೋ ಪಾವನ
ಮೂರ್ತಿ ಶರಜ ನಮೋ ಸಜ್ಜನ ಪ

ಸಜ್ಜನರಾರ್ತ ಕೇಳುವ ಕರ್ತಸಂತತ ।
ಧೂರ್ತ ಶಿಕ್ಷ ನಮೋ ಅ.ಪ

ತಾರಕಾರಿ ನಮೋ ಚಿನ್ಮಯ ।
ಮಾರರೂಪ ನಮೋ ಚೆಲ್ವ ಮ–
ಯೂರ ಧ್ವಜ ತ್ರಿಪುರಾರಿತನಯ
ಸಾರಸಾಕ್ಷ ನಮೋ ೧

ವಲ್ಲಿ ಪ್ರೀಯ ನಮೋ । ಶೋಭಿಪ ।
ಫುಲ್ಲನೇತ್ರ ನಮೋ । ತ್ರೈಜಗ
ಮಲ್ಲ ಭಕ್ತರ ನಲ್ಲ – ವಿಶ್ವ ।
ವಲ್ಲಭೇಶ ನಮೋ ೨

ದಾಸರಕ್ಷ ನಮೋ ಪಾವಂ
ಜೇಶ ಸ್ಕಂದ ನಮೋ । ನಾಮಾ ।
ಸಾಸಿರನೆ ಕಮಲಾಸನಾರ್ಚಿತ ।
ದೋಷರಹಿತ ನಮೋ ೩

## ೨೦೩

ರಕ್ಷಿಸು ಕುಮಾರಾ । ಸ್ವಾಮಿಯೆ ।
ಪಕ್ಷಿವಾಹನ ಗೆಳೆಯಾ ।
ದಕ್ಷಜೆ ಸುತ ನಿರಪೇಕ್ಷನೆ ಸಜ್ಜನ ।
ರಕ್ಷಕ ದುರ್ಜನ ಶಿಕ್ಷಕ ಸಂತತ ೧

ತಾರಕ ಸಂಹಾರೀ । ಚಾರು ಮ– ।
ಯೂರನ ಪೆಗಲೇರೀ ।
ಮೂರು ಲೋಕದ ಸಂಚಾರವ
ಮಾಳ್ಪತಿ ಧೀರನೆ ಭಕ್ತೋದ್ಧಾರನೆ ಸಂತತ ೨

ಅಂಬುಧಿ ಗಂಭೀರಾ । ದೇವ ತ್ರಿ–।
ಯಂಬಕ ಸುಕುಮಾರ ।
ಕಂಬು ಕಂಧರ ಹೇರಂಬನಾನುಜ ಗುಹ
ಅಂಬುಜೇಕ್ಷಣ ಅರಿ
ಭಂಜನ ಸಂತತ ೩

ಚಿತ್ತಜಶತರೂಪ । ದುರ್ಜನ ।
ಮೊತ್ತವ ಸಂಹರಿಪಾ ।
ಉತ್ತಮ ಪುರುಷನೆ ನಿತ್ಯವು ತವಪದ ।
ಸ್ತುತ್ಯವ ಮಾಡುವ ಭೃತ್ಯನ ಸಂತತ ೪

ಗಿರಿಜಾತೆಯ ಕುವರಾ । ಅಭಯಾ ।
ವರಶಕ್ತಿ ವಜ್ರಧರಾ ।

ಮೆರೆವ ಪಾವಂಜೆ ಪುರೇಶನೆ ದಾಸರ ।
ಕರುಣದಿಂದೀಕ್ಷಿಸಿ ವರವಿತ್ತು ಸಂತತ ೫

## ೨೦೪

ಬಾರೋ ಬಾರೋ ಗಿರಿಜಾಸುತ ಗುಹ ।
ಬಾರೋ ಬಾರೋ ಶರಣೆಂಬೆನು ದೇವ ಪ

ಪಂಕಜ ನೇತ್ರ ಪಂಕಜಾಕ್ಷನ ಮಿತ್ರ
ಪಂಕಜ ವದನದ ಶಂಕರಸುತ ಗುಹ ಬಾರೋ ೧

ವೃಂದಾರಕಮುನಿ ವೃಂದ ವಂದಿತಪಾದ
ಕಂದರ್ಪಾನ್ವಿತಗುಣ ವೃಂದ ನಿತ್ಯಾನಂದ ಬಾರೋ ೨

ದೋಷರಹಿತ ಪಾವಂಜೇಶ ಸಂತತ ತವ
ದಾಸರ ಭವದಘ ರಾಶಿಯ ತರಿಯುತ್ತಾ ಬಾರೋ ೩

## ೨೦೫

ಬಾರೋ ಬೇಗ ಬಾರೋ ಮ–।
ಯೂರ ವಾಹನ ದೇವ ಪ

ಬಾರೋ ಬೇಗ ಬಾರೋ ಕು– ।
ಮಾರ ಬೆಟ್ಟದ ದೇವ ಅ.ಪ

ಸ್ಕಂದಾ ನಿತ್ಯಾನಂದಾ ಗುಣ ।
ವೃಂದಾ ಬೇಗ ಬಾರೋ
ವೃಂದಾರ ಕೇಂದ್ರ ಮಹೇಂದ್ರ
ಪುತ್ರ ಬಾರೋ ಬಾರೋ ೧

ಧೀರಾ ಉ–ದಾರಾ ಗಂ ।
ಭೀರಾ ಬೇಗ ಬಾರೋ ।

ಮಾರಾನಾಕಾರಾ ಭವ- ।
ದೂರ ಬೇಗ ಬಾರೋ ೨

ಈಶಾ ಗುಹೇಶಾ ಪಾವಂ- ।
ಜೇಶಾ ಬೇಗ ಬಾರೋ ।
ದಾಸಾನು ದಾಸಾ ಜನ ।
ತೋಷ ಬೇಗ ಬಾರೋ ೩

## ೨೦೬

ಬಾ ಬಾ ಬಾ ಗುಹನೇ । ಓಡುತ್ತೋಡುತ್ತ ।
ಬಾ ಬಾ ಬಾ ಗುಹನೇ ಪ

ವಲ್ಲಿಯ ವಲ್ಲಭ ಮಲ್ಲಿಸಾಹಸ ಸುರ ।
ವಲ್ಲಭನುತರು ಮನಕುಲ್ಲಾಸದೋರುತ ೧

ಕರದೊಳು ಕುಕ್ಕುಟ ವರವಜ್ರ ಶಕ್ತಿಯೆಂ-
ಬುರು ಆಯುಧಗಳ ಧರಿಸಿಹ ಷಣ್ಮುಖ । ಬಾ ೨

ದುಷ್ಟ ಖಳರ ತಲೆ ಕುಟ್ಟುತ ಕಾಲನ
ಪಟ್ಟಣಕಟ್ಟುವ ದಿಟ್ಟ ಕುಮಾರ ನೀ ಬಾ ೩

ಕುಂದರದನ ಅರವಿಂದ ಲೋಚನ ಕಂಬು
ಕಂಧರ ಅಷ್ಟಮಿ ಚಂದ್ರಲಲಾಟನೆ ಬಾ ೪

ಮೆರೆಯುವ ಪಾವಂಜೆಪುರದೊಡೆಯನೆ ತವ
ಚರಣದ ದಾಸರ ನಿರತದಿ ಪೊರೆಯಲು ಬಾ ೫

## ೨೦೭

ನಂಬಿದೆ ನಿನ್ನಯ – ಚರಣ । ಸುಗು ।
ಣಾಂಬುಧಿ ಶ್ರೀ ಸುಬ್ರಹ್ಮಣ್ಯ ।

ಶಂಭು ಪುತ್ರನೆ ಅಗ್ರಗಣ್ಯ । ಚೆಲ್ವ ।
ಕಂಬುಕಂಧರ ಸುಪ್ರಸನ್ನ ಪ

ಅಂಬುಜವದನ ಪಾ । ದಾಂಬುಜಯುಗಳನೆ
ಅಂಬಿಕ ಸುತ ಸುಕುಮಾರಾ । ನಿತ್ಯಾನಂದ
ಅಂಬುಧಿ ಸಮ ಗಂಭೀರಾ । ಕುಮಾರ । ನಂಬಿದೆ ೧

ನರಜನ್ಮದಲ್ಲಿ ಜನಿಸಿದೆ । ನಿನ್ನ ।
ಚರಣಾರವಿಂದವ ಮರೆತೆ ।
ಪರಿಪರಿ ದುಃಖವ ಪಡೆದೆ । ತವ ।
ಸಿರಿಚರಣದ ಮರೆ ಸೇರ್ದೆ
ಪರಮ ಪುರುಷ ಎನ್ನ । ದುರಿತಗಳೆಲ್ಲದ
ತರಿದೊಟ್ಟೆ ನೀ ಕಾಯೆಂದು । ಬೇಡುವೆ ನಿನ್ನ
ಸೆರಗೊಡ್ಡಿ ಕರುಣಸಿಂಧು । ಕುಮಾರ । ನಂಬಿದೆ ೨

ದೇವಾಧಿದೇವ ಗುಹೇಶ । ತವ ।
ಸೇವೆ ಮಾಳ್ಪರಿಗೆ ಸಂತೋಷಾ ।
ಜೀವ ಮಹಾತ್ಮ ಸರ್ವೇಶ । ಅತಿ ।
ಪಾವನ ಪಾವಂಜೆ ವಾಸಾ ।
ಕೋವಿದ ನಿನ್ನಯ ಸೇವಕ ದಾಸನ ।
ಭಾವದಿಚ್ಛೆಯನೀವುದು
ಸಂತಸದಿಂದಲೋ ನೀ ಕಾಯುವುದು ।
ಕುಮಾರಾ । ನಂಬಿದೆ ೩

## ೨೦೮

ಸುಬ್ರಹ್ಮಣ್ಯನೆ ಶುಭ್ರವದನನೆ ।
ಅಭ್ರರಾಜನ ತೇಜನೆ
ಪರ್ಬಿದಸುರರ ಗರ್ಭ ಸೀಳುತ ।
ನಿರ್ಭಯವನುರೆ ಮಾಳ್ಪನೆ । ಶರಣು ಶರಣು ೧

ಶರಣ ರಕ್ಷನೆ ದುರಿತನಾಶನೆ
ಪರಮ ತೇಜಃಪುಂಜನೆ
ವರದ ಹಸ್ತನೆ ಸರಸಿಜಾಕ್ಷನೆ
ಕರುಣಿ ನಿತ್ಯಾನಂದನೆ । ಶರಣು ೨

ವಲ್ಲೀ ಪ್ರೀಯನೆ । ಪಲ್ಲವಾಧರನೆ ।
ಫುಲ್ಲಬಾಣನ ರೂಪನೆ ।
ಸಲ್ಲಲಿತ ಪದ ಪಲ್ಲವವ ಭಜಿಪೆಲ್ಲ
ರಾಮನ ತೋಷನೆ । ಶರಣು ೩

ನಾಕದೊಡೆಯನನೇಕ ದೇವಾ– ।
ನೀಕ ಪೂಜಿತ ಸ್ಕಂದನೇ ।
ಶೋಕ ನಾಶ ಉಮಾ ಕುಮಾರಕ ।
ಶ್ರೀ ಕುಮಾರ ಗಿರೀಶನೆ । ಶರಣು ೪

ಶ್ರೀಶಸಖ ಕಮಲಾಸನಾರ್ಚಿತ ।
ನಾಶರಹಿತ ಕುಮಾರನೆ ।
ಈಶ ಪಾವಂಜೇಶ ತವಪದ ।
ದಾಸರಾ ಮನ ತೋಷನೆ ೫

## ೨೦೯

ಕೊಡು ಕೊಡು ಕೊಡು ಎನ್ನ ಒಡಯನೆ ದೇವಾ
ಕೊಡುವುದು ಮನದಿಷ್ಟ ತಡೆಯದೆ ದೇವ ಪ

ಕೊಡದಿರೆ ಪಾದವ ಪಿಡಿಯುತ ದೇವಾ
ಅಡಿಯಿಡೆ ಬಿಡೆ ಮುಂದೆ ನಡೆಯಲು ದೇವಾ ಅ.ಪ

ಸುರವರ ಪೂಜಿತ ಮುರಹರ ಮಿತ್ರ
ಕರುಣ ವಾರಿಧಿ ಪುಣ್ಯ ಪುರುಷ ಸುಚರಿತ್ರ ।
ಶರಣ ರಕ್ಷಕ ಮುಕ್ತಾಭರಣ ಪವಿತ್ರ
ಸುರಮುನಿ ವಂದಿತ ಪರಮೇಶ ಪುತ್ರ ಕೊಡು । ೧

ವನಜಲೋಚನ ಸರ್ವ ಮನುಜರ ಪಾಲ
ದನುಜಮರ್ದನ ಕಾತ್ಯಾಯನಿ ಪ್ರಿಯ ಬಾಲ
ಮನಸಿಜರೂಪ ದಿವ್ಯ । ಮಣಿಗಣಮಾಲಾ
ಅನುಪಮ ಕ್ರೌಂಚ ವಾಹನ ವಲ್ಲೀಲೋಲಾ ।ಕೊಡು । ೨

ದೇವಸೇನೆಯ ರಮಣ ದೇವೇಂದ್ರನಳಿಯ
ದೇವಾದಿದೇವಸುತ ಕೋವಿದರೊಡೆಯಾ ।
ಪಾವನ ಮೂರುತಿ ಪಾವಂಜೆ ನಿಲಯ
ಸೇವಕ ದಾಸನ ಕಾವ ಕಾರ್ತಿಕೇಯ । ಕೊಡು । ೩

## ೨೧೦

ಪಾಲಿಸೆಮ್ಮನು ಗುಹನೇ । ಶ್ರೀ ಸುಬ್ರಹ್ಮಣ್ಯ ಪ

ಪಾಲಿಸೆಮ್ಮನು ಗುಹ । ನೀಲಕಂಠನ ಸುತ ಅ.ಪ

ತಾರಕಾಸುರ ಮಹಾಶೂರಪದ್ಮನ ಯಮ ।
ನೂರಿಗಟ್ಟಿದ ಗುಹನೇ ಶ್ರೀ ಸುಬ್ರಹ್ಮಣ್ಯ ॥ಪಾಲಿಸೆ॥ ೧

ಕುಷ್ಠದಿ ನರಳುವ ಕೃಷ್ಣ ಸುತನ ಮನ– ।
ದಿಷ್ಟವನಿತ್ತ ಗುಹನೇ ಶ್ರೀ ಸುಬ್ರಹ್ಮಣ್ಯ ॥ಪಾಲಿಸೆ॥ ೨

ವಲ್ಲಿ ದೇವಿಯ ಪ್ರಾಣವಲ್ಲಭನೆನಿಸುವ
ಪುಲ್ಲಂಬರೂಪ ಗುಹನೇ ಶ್ರೀ ಸುಬ್ರಹ್ಮಣ್ಯ ॥ಪಾಲಿಸೆ॥ ೩

ವೃಂದಾರಕಮುನಿ ವೃಂದವಂದಿತ ನಿತ್ಯಾ–।
ನಂದ ಚಿನ್ಮಯ ಗುಹನೇ ಶ್ರೀ ಸುಬ್ರಹ್ಮಣ್ಯ ॥ಪಾಲಿಸೆ॥ ೪

ನಂಬಿದ ದಾಸರಿಗಿಂಬನು ಕೊಡು ಬೇಗ ।
ಅಂಬಿಕಸುತ ಗುಹನೇ ಶ್ರೀ ಸುಬ್ರಹ್ಮಣ್ಯ ॥ಪಾಲಿಸೆ॥ ೫

## ೨೧೧

ಪಾದಕ್ಕೆರಗುವೆ ಗುಹ । ಗಿರಿಜಾಸುತನೆ ತವ
ಪಾದಕ್ಕೆರಗುವೆ ಗುಹಾ ಪ

ಪಾದಕೆರಗುವೆ ಮೋದದಿಂದಲಿ ।
ಆದರಿಸಿ ಪಿಡಿದೆತ್ತಿ ನಿನ್ನಯ
ಪಾದರೇಣುವನೀಯೊ ಶ್ರೀ ದಾ– ।
ಮೋದರನ ಸಖ ಶಿವನ ಸುತ ತವ ಅ.ಪ

ದುಷ್ಟ ಪದ್ಮನ ಬಾಧೆಯಾ ಸಹಿಸಲಿಕೆ ಕೂಡದೆ
ಕಷ್ಟದಿಂದಲೆ ಸುರವರ್ಯಾ ।
ಕಟ್ಟಡವಿಯನು ಸೇರಿಸುತಿಹನ
ಗುಟ್ಟಿನಲಿ ತವ ಪದವ ಧ್ಯಾನಿಸೆ
ದುಷ್ಟನನು ತರಿದೊಟ್ಟಿ ಸುರಪತಿ
ಇಷ್ಟವನು ಪಾಲಿಸಿದ ಗುಹತವ ೧

ಧರ್ಮಾಧಿರಾಜ್ಯವನು ಪಾಲಿಸುತಿಹ ಸು– ।
ಧರ್ಮವೆಂಬವನೀಶನು
ಕರ್ಮವಶದಿಂ ಕ್ರೂರ ದನುಜನ
ಜನ್ಮವನು ಧರಿಸುತ್ತಲಧಿಕ ದು–
ಷ್ಕರ್ಮಗಳ ನೆಲೆಗೈಯ್ಯುತಿರೆ
ನಿರ್ಮೂಲನ ಮಾಡಿರುವ ಗುಹ ತವ ಪಾದಕ್ಕೆ॥ ೨

ಇಂದಿರೇಶನ ಸುತನೂ ಮುನಿವರ ।
ರಿಂದ ಬಂದಾ ಶಾಪದಲಿ ತಾನೂ
ನೊಂದು ಪೂಜಿಸಲವನ ಕುಷ್ಠವಾ ।
ನಂದದಲಿ ಪರಿಹರಿಸಿ ಭಕ್ತರ
ವೃಂದವನು ಪಾಲಿಸೆ ಪಾವಂಜೆಗೆ
ಬಂದ ಶರಜಗೆ ದಾಸನನುದಿನ ೩

## ೨೧೨

ಶರಜನೆ ಬಾ ಬಾ ಪರಶಿವ ಪುತ್ರ ಭಾ–
ಸ್ಕರ ಕೋಟಿ ತೇಜನೆ ನೀ ಬಾರೋ ಪ

ಶರಣ ರಕ್ಷಕ ಬಾ ದುರಿತ ವಿನಾಶಕ
ಕರುಣೆಗಳರಸನೆ ನೀ ಬಾರೋ ಅ.ಪ

ಇಂದುವದನ ಬಾ ಸುಂದರಾಂಗನೆ – ಅರ
ವಿಂದ ಲೋಚನ ಯುಗ್ಮ ನೀ ಬಾರೋ ।
ಕುಂದರದನ ಸುರ ವೃಂದ ವಂದಿತ ನಿತ್ಯಾ –
ನಂದ ಚಿನ್ಮಯ ರೂಪ ನೀ ಬಾರೋ ೧

ಜಗಪಾವನ ಬಾ ಅಘನಾಶನ ಬಾ
ನಗಧರಸಖ ಗುಹ ನೀ ಬಾರೋ ।
ನಿಗಮ ವೇದ್ಯನೆ ಬಾ ಸುಗುಣಾಂಬು ನಿಧಿಯೆ ಬಾ
ಅಗಣಿತ ಮುನಿ ವಂದ್ಯ ನೀ ಬಾರೋ ೨

ಪಾವನ ಮೂರುತಿ ಪಾವಂಜೆವಾಸ ನೀಲ ।
ಗ್ರೀವ ವಾಹನನೆ ನೀ ಬಾರೋ ।
ಭಾವ ಶುದ್ಧದಿ ತವ ನಾಮಾವಳಿ ಜಪಿಸುವ
ಸೇವಕ ದಾಸನಿಗೊಲಿ ಬಾರೋ ಶರಣ ೩

## ೨೧೩

ಹೇ ನಂದಿವಾಹನ ಕಂದ ಸಚ್ಚಿದಾನಂದ
ಶರಜ ಪಾಹಿಮಾಂ ಪ

ಪೂರ್ಣೇಂದುವದನ । ಸ್ಕಂದ ನಿತ್ಯಾನಂದ
ಚಿನ್ಮಯ ಪಾಹಿಮಾಂ ಅ.ಪ

ಉಮಾ ಕುಮಾರ ಶೋಕ ಮೋಹಾನೀಕದೂರ ಪಾಹಿಮಾಂ–
ಜಗದೇಕ ವೀರ ತ್ರಿಲೋಕ ಪೂಜಿತ ಶ್ರೀಕುಮಾರ ಪಾಹಿಮಾಂ ೧

ಶ್ರೀವಲ್ಲಿ ಪ್ರೀಯಾ ಫುಲ್ಲನೇತ್ರಾ ।
ಪಲ್ಲವಾಧರ ಪಾಹಿಮಾಂ । ವಿಶ್ವ
ವಲ್ಲಭಾಸುರದಲ್ಲಣೂನತನಲ್ಲ
ಷಟ್‌ಶಿರ ಪಾಹಿಮಾಂ ೨

ನಾಕೇಶ ಪೂಜಿತ ನಾಶರಹಿತ
ಶ್ರೀಶ ಸಖಗುಹ ಪಾಹಿಮಾಂ ।
ಸರ್ವೇಶ ಪಾವಂಜೇಶ ತವಪದ ।
ದಾಸ ರಕ್ಷಕ ಪಾಹಿಮಾಂ ೩

## ೨೧೪

ಜೋಜೋ ಗಿರಿಜೆಯ ಬಾಲ ಸುಶೀಲಾ
ಜೋಜೋ ಶಂಕರ ಸುತ ಗುಣಮಾಲಾ । ಜೋಜೋ ಪ

ಕುಂದರದನ ಅರವಿಂದಾಕ್ಷ ಜೋಜೋ
ಮಂದರಧರ ಸಖ ಸ್ಕಂದನೆ ಜೋಜೋ
ಇಂದುವದನ ನಿತ್ಯಾನಂದನೆ ಜೋಜೋ ।
ವೃಂದಾರಕ ಮುನಿ ವಂದಿತ ಜೋಜೋ ೧

ಕರಿವದನಾನುಜ ಶರಣ ರಕ್ಷಕ ಜೋಜೋ ।
ಪರಮ ಪಾವನ ಮೂರ್ತಿ ಪರಿಶುದ್ಧ ಜೋಜೋ ।
ಅರಿಗಳೆನ್ನುವ ಮದಕರಿಗೆ ಕೇಸರಿ ಜೋಜೋ
ಧರಣಿಸುರಕಲ್ಪ ತರು ಗುಹ ಜೋಜೋ ಜೋಜೋ ೨

ವಾಸವನುತ ಸರ್ವ ಪೋಷಕ ಜೋಜೋ
ಸಾಸಿರ ಪೆಸರ ವಲ್ಲೀಶನೆ ಜೋಜೋ ।
ವಾಸ ಪಾವಂಜೆ ಸರ್ವೇಶನೆ ಜೋಜೋ
ದಾಸ ಜನರ ಮನ ತೋಷಕಾ ಜೋಜೋ ಜೋಜೋ ೩

## ೨೧೫

ತೂಗಿದಳೆ ಸ್ಕಂದನಾ ಪಾರ್ವತೀ ದೇವಿ
ಆಗಮಜ್ಞನ ಗುಹನಾ ಪ

ಯೋಗಿ ವಂದ್ಯನ ನಿತ್ಯ ಭೋಗಿ ಭೂಷಣ ಜನ
ಸಾಗರದಂತೆ ಗಂಭೀರನ ಜೋಯೆಂದು ॥ತೂಗಿದಳೆ॥ ಅ

ವನಜಲೋಚನನೆ ಜೋಜೋ ಸನಕಾದಿ
ಮುನಿವರ ವಂದಿತ ಜೋಜೋ ।
ಅನುಪಮ ಸದ್ಗುಣ ಚಿನುಮಯ ಸರ್ವಜ್ಞ
ಅನಿಮಿಷ ವಂದಿಪ ಅನಘ ಜೋಜೋಯೆಂದು ೧

ತಾರಕಹಾರಿ ಜೋಜೋ ಸಂತತ
ಭಕ್ತೋದ್ಧಾರ ಕುಮಾರ ಜೋಜೋ
ನಾರದಾದಿ ಮುನಿವರ ವಂದಿತ
ಮಾರನಾಕಾರದ ಧೀರ ಜೋಜೋಯೆಂದು ೨

ದೇವಾಧಿದೇವ ಜೋಜೋ ನಿತ್ಯಾನಂದ ।
ಪಾವನ ಮೂರ್ತಿ ಜೋಜೋ ।

ಪಾವಂಜೆ ವಾಸನ ಸೇವಕ ದಾಸರ
ಕಾವ ಮಹಾತ್ಮನನೋವಿ ಜೋಜೋಯೆಂದು ॥ತೂಗಿದಳೆ॥ ೩

## ೨೧೬

ಜಯ ಜಯ ಪಾರ್ವತಿ ಬಾಲ ನಮೋ ನಮೋ
ಜಯ ಜಯ ಸಜ್ಜನ ಪಾಲ ಪ

ಜಯ ಜಯಾ ನಾಥಬಂಧು ಜಯ ಕರುಣಾಸಿಂಧು
ಜಯ ಜಯ ಶ್ರೀಧರ ಪ್ರಿಯ ಸಖ ಷಟ್ ಶಿರ ಜಯ ಅ.ಪ

ಬಾಲಾರ್ಕಶತಭಾಗ ಸು ।
ಶೀಲ ಚಂಪಸ ನಾಸಾ ಫಾಲಾಕ್ಷಜ
ಸುವಿಶಾಲ ವಕ್ಷ ಅಮರಾಳಿ
ಪೂಜಿತ ಬಲಶಾಲಿ ಕುಮಾರ ೧

ಕರ್ಣಾಟಾ ಶ್ರೀಪೋಲ್ವಾ ಚೆಲ್ವ ।
ಕರ್ಣದ್ವಯದಿ ಮೆರೆವಾ ।
ವರ್ಣನಾ ತೀರ ಸುವರ್ಣಕುಂಡಲ ವಿಹ ।
ಚೂರ್ಣೀಕೃತ ದೈತ್ಯಾರ್ಣವ ಷಟ್ ಶಿರ ॥ಜಯ॥ ೨

ನಿತ್ಯ ನಿರ್ಮಲ ದೇವ ಪ್ರತಿನಿತ್ಯ ದಾಸರ ಕಾವ
ಚಿತ್ತಜರೂಪ ಪ್ರಶಸ್ತ ಲಲಾಟ ಮುನಿ
ಸ್ತುತ್ಯ ಪಾವಂಜೆಯ ಕರ್ತನೆನಿಪ ಗುಹ ॥ಜಯ॥ ೩

## ೨೧೭

ಕರುಣದೋರೋ ಸ್ಕಂದ ಕರುಣದೋರೋ ಪ

ಮೃತ್ಯು ದೇವತೆಯೆನ್ನ । ನೆತ್ತಿಯಳಿಹಳೂ ।
ಕೃತ್ತಿವಾಸನ ಸುತ ಕಿತ್ತೊಗೆಯೋ ಸ್ಕಂದ ೧

ಕಾಲ ದಂಡವ ಪಿಡಿದು ವೇಳೆ ನೋಡುವನೂ ।
ಶೂಲಪಾಣಿಯ ಪುತ್ರ ಬೀಳ ಹೊಯ್ಯೋ ೨

ದಾಸರ ಕಾಲನ ಪಾಶಕೀಯದಿರೋ ।
ತೋಷದೋಳೈಕ್ಯ ಪಾವಂಜೇಶ ಮಾಡೋ ೩

## ೨೧೮

ಜಯ ಜಯ ಶಂಕರ ಪ್ರಿಯಸುತ ಷಟ್ಶಿರ ।
ಜಯ ಜಯ ಕುಮಾರಾ ಪ

ಜಯ ಜಯ ಶ್ರೀಧರ ಪ್ರಿಯಗುಣ ಮಂದಿರ ।
ಜಯ ಜಯ ಧುರ ಧೀರಾ ಮಹ ಶೂರಾ ಅ.ಪ

ತಂದೆ ತಾಯೀ ಪೂರ್ವ ಬಂಧು ಬಳಗವೆಲ್ಲಾ ।
ಇಂದು ಎನಗೆ ನೀನೇ ।
ಪೊಂದಿದೆ ತವಪದ । ದ್ವಂದ್ವವ
ಪಾಲಿಪುದಿಂದುವದನ ಗುಹನೇ ಷಟ್ಶಿರನೇ ೧

ನಿನ್ನ ಬಿಟ್ಟರೆ ಎನಗಿನ್ನಾರು ಗತಿಯಿಲ್ಲ ।
ಎನ್ನುತ ನಾ ಜೀಯಾ ।
ಬೆನ್ನ ಪಿಡಿದೆ ಸುಪ್ರಸನ್ನ ನೀ ಪಾಲಿಸು ।
ಪನ್ನಗ ಕುಲದೊಡೆಯಾ ಕಾರ್ತಿಕೇಯಾ ೨

ದಾಸರ ಅಘಕುಲ ರಾಶಿಯ ತರಿಯುತ ।
ಪೋಷಿಸ ಬೇಕೆಂದು ಆಶಿಸಿ ಬೇಡುವೆ । ಬೇಸರಿಸದೆ ಪಾವಂ –
ಜೇಶನೆ ಬಲಬಂದೂ ದಯ ಸಿಂಧು ೩

## ೨೧೯

ಕಾರ್ತಿಕೇಯಾ ದೇಹಿ ಮಹ ಶೂರಾ ಧುರ
ಧೀರಾ ಉದಾರಾ ಗಂಭೀರ ಕುಮಾರ ಪ

ವೃಂದಾರಕಾದಿ ಸುರೇಂದ್ರ ಪಾಲಾ ।
ಕಂದರ್ಪ ರೂಪಾರ್ಧ ಚಂದ್ರಫಾಲಾ
ಗುಣಮಾಲಾ ಜನಲೋಲಾ ಉಮೆ ಬಾಲಾ ಸುಶೀಲ ೧

ನಿಗಮಾಳಿ ಪೊಗಳುವ ಖಗಧ್ವಜ ಮಿತ್ರಾ ।
ಜಗಪಾವನ ಶಶಿಮೊಗ ಕಂಜನೇತ್ರಾ ತ್ರಿನೇತ್ರಾ
ಪ್ರಿಯಮಿತ್ರಾ ಸುಚರಿತ್ರಾ ಪವಿತ್ರಾ ೨

ಪಾವನ ಮೂರುತಿ ಪಾವಂಜೆ ವಾಸಾ ।
ಕೋವಿದರೊಡೆಯ ರಕ್ಷಕ ದಾಸಾ ಗುಹೇಶಾ
ಸರ್ವೇಶಾ ಸೇನೇಶಾ ಜಗದೀಶಾ ೩

## ೨೨೦

ನಮಿಸುವೆನೋ ಪಾದಕೆ ಕಾರ್ತಿಕೇಯಾ । ನಮಿಸುವೆ ಪ

ನಮಿಸುವೆ ಪಾದಕೆ ಸುಮನಸ ವಂದ್ಯನೆ ಅ.ಪ

ಚಾರು ಚಂಪಕನಾಸ ನೀರಜನೇತ್ರಾ ।
ತಾರಕಾಸುರನ ಸಂಹಾರಿ ಕುಮಾರಾ ೧

ಕುಕ್ಷಿಯ ಪಾಲಿಪ ಇಕ್ಷು ಚಾಪನ ರೂಪ ।
ದಕ್ಷೆಯ ಪುತ್ರ ಮುಮುಕ್ಷು ಪ್ರಿಯಾ ಗುಹ ೨

ದಾಸರಿಗನುದಿನ ತೋಷವಿತ್ತು ಅಘ–
ನಾಶ ಷಟ್ಶಿರ ಪಾವಂಜೇಶನೆ ಕಾಯೆಂದು ೩

## ೨೨೧

ಜಯ ಜಯಾ ಶಿವ ಪುತ್ರ ಶರಜ ಜಯ ಜಯಾ ಗುಹಾ ಪ

ಜಯ ಜಯ ಪಾರ್ವತಿ ಕುಮಾರ ಜಯ ಜಯಾ ದೇವಾ ॥ಜಯ॥
ತಾರಕಾಸುರನು ಸುರರ
ಊರಿಗೈದಿ ಆಳುತಿರಲು
ಕೂರಲಗಿನಿಂದಲಸುವ ಹೀರಿ
ಸುರರ ಪೊರೆದ ದೇವಾ ೧

ಗಿರಿಯ ತುದಿಯೊಳ್ನಿಂದು ।
ತವ ಬರವನಿದಿರು ನೋಡುತ್ತಿದ್ದ ।
ಉರಗ ಪತಿಯೊಳಂಶವಿರಿಸಿ ।
ವರವನಿತ್ತ ಕರುಣಿ ದೇವಾ ೨

ದಾಸರಂತೆ ಸೇವಿಸಿದವಧ ।
ನೀಶ ಸುಧರ್ಮನೆಂಬವನಾ ।
ಪೋಷಣೆಯ ಗೈದ ಪಾವಂ ।
ಜೇಶ ಕಾರ್ತಿಕೇಯ ದೇವಾ ೩

## ೨೨೨

ಆರ ಬೇಡುವೆನೂ ನಿನ್ನನು
ಬಿಟ್ಟಿನ್ನಾರ ಕಾಡುವೆನೂ ಪ

ಆರನು ಬೇಡಲಿನ್ನಾರನು ಕಾಡಲು
ಪಾರು ಮಾಳ್ಪರ ಕಾಣೆನೂ । ಎನ್ನನೂ ಅ.ಪ

ಇಂದುವದನ ನಿನ್ನಾಮರೆಯ ಸಾರ್ದೆ ತಂದೆಯಂತೆ ಎನ್ನಾ –
ನಂದದಿ ತಪ್ಪುಗಳೊಂದೆಣಿಸದೆ ಪೊರೆ –
ಯೆಂದು ನಾ ಬೇಡುವೆನೂ ಕಾಲ್ಪಿಡಿವೆನು ೧

ತಾರಕಾರಿ ಸ್ವಾಮೀ ಸಂತತ
ಭಕ್ತೋದ್ಧಾರಿ ಸುಗುಣ ಪ್ರೇಮೀ ।
ಘೋರ ದುರಿತವೆಂಬಪಾರಮಡುವಿನೊಳು
ಸೇರಿ ಮುಳುಗಿದೆನು ನಾನು । ಪಿಡಿದೆತ್ತು ನೀನು ೨

ನಿತ್ಯ ಕಷ್ಟದಲಿ ಬೆಂಡಾಗಿ ಬೇ– ।
ಸತ್ತೆ ಶೋಕದಲೀ ಉತ್ತಮ ಪಾವಂಜೆ ।
ಕ್ಷೇತ್ರ ವಾಸಿಯೆ ನಿನ್ನ । ಸ್ತುತಿಯ
ಮಾಡುವೆನೂ ದಾಸನು ನಾನು ೩

## ೨೨೩

ನಿನ್ನ ಬೇಡುವೆ ಸುಬ್ರಹ್ಮಣ್ಯ ।
ನಿನ್ನ ಬೇಡುವೆ ಪ
ನಿನ್ನ ಬೇಡುವೆನು ಸುಪ್ರ ।
ಸನ್ನ ಬೇಗ ದಯ ತೋರು
ತೆನ್ನನುದ್ಧರಿಸುತ ಪಾಲಿಸೆನ್ನುತಾ
ಸೆರಗೊಡ್ಡಿ ನಾನು ಅ.ಪ

ಮನುಜ ವರ್ಗದಲ್ಲಿ ಜನಿಸಿ
ನೆನೆಯದೇ ತವಪದವ ನಿತ್ಯ
ಮನದೊಳಹಂಕಾರದಳೆದು
ಜನುಮ ಕೆಡಿಸಿಕೊಂಡ ಪಾಪಿ ೧

ಕಾಮಕ್ರೋಧಗಳಿಗೆ ಸಿಲುಕಿ ।
ನೇಮ ನಿಷ್ಠೆಗಳನು ತ್ಯಜಿಸಿ
ಪಾಮರನಂದದಲಿ ಬೆಳೆದ ।
ಕಾಮುಕನ ಪಾಲಿಸೆನುತ ೨

ಕ್ಲೇಶನಾಶ ಎನ್ನ ಮನದ
ಕ್ಲೇಶಗಳನು ತರಿದು ಪಾವಂ
ಜೇಶ ರಕ್ಷಿಸೆನುತ ನಿನ್ನ
ದಾಸನಾದ ನಾನು ನಮಿಸಿ ೩

## ೨೨೪

ನಮಿಸುವೆ ಅನುದಿನ ನಿನ್ನ । ಸುಬ್ರಹ್ಮಣ್ಯ ಪ

ಮಮ ಅಪರಾಧವ ಕ್ಷಮಿಸು ಪ್ರಸನ್ನ ಅ.ಪ

ನೀಲಲೋಹಿತನ ಸುಕುಮಾರಾ ಸದ್ವಿಚಾರ ।
ಬಾಲಾರ್ಕಭಾಸ ಸುಶೀಲಾ ಅಪಾರಾ ೧

ತಾರಕಾದ್ಯ ಸುರಾಳಿನಾಶಾ । ಶ್ರೀವಲ್ಲೀಶ ।
ಮಾರನಾಕಾರದ ಧೀರ ಗುಹೇಶ ೨

ಶ್ರೀಶನ ಸಖ ದಾಸರಕ್ಷ । ಖಳ ಶಿಕ್ಷ ।
ಸಾಸಿರ ಪೆಸರ ಪಾವಂಜೇಶ ಸುರಪಕ್ಷ ೩

## ೨೨೫

ನಂಬಿದೆ ನಿನ್ನ ನಂಬಿದೆನು ।
ಅಂಬಿಕಾ ಕುಮಾರನೆ ಪ

ಕಂಬುಕಂಧರ ಅಂಬುಜಾಕ್ಷ ।
ಶಂಭುಪುತ್ರ ಸ್ಕಂದನೇ ಅ.ಪ

ಸುರಪುರವ ಗೆಲಿದುಕೊಂಡ
ದುರುಳ ತಾರಕನಾಶನೆ
ಶರಜ ವಲ್ಲಿಯರಸ ಗುಹ
ಕರುಣಾ ಸಾಗರ ಸ್ಕಂದನೆ ೧

ಕಾರ್ತಿಕೇಯ ಪರಮ ಪಾವನ
ಮೂರ್ತಿ ಸುಬ್ರಹ್ಮಣ್ಯನೆ
ಸ್ತೋತ್ರ ಮಾಳ್ಪ ಜನರ ಮನದಿ–
ಷ್ಟಾರ್ಥವೀವ ಸ್ಕಂದನೆ ೨

ವಾಸವಾದಿ ದಿವಿಜನುತ ಪಾವಂ–
ಜೇಶ ಪರಮ ಪೂಜ್ಯನೆ ।
ದಾಸ ಜನರ ಮನಕೆ ಸಂತತ
ತೋಷವೀವ ಸ್ಕಂದನೆ ౩

## ೨೨೬

ಅಂಬಿಕ ಸುತನೆ ಷಡಾನನನೆ ।
ಲಂಬೋದರನ ಸಹೋದರನೆ ಪ

ಅಂಬುಜನೇತ್ರನೆ ಕಂಬುಕಂಧರನೆ ।
ಶಂಭುಜ ಕರುಣಾಸಾಗರನೆ ಅ.ಪ

ಶೂರಪದ್ಮನ ಎದೆ ಸೀಳಿದನೆ
ಮಾರನ ಪೋಲುವ ಸುಂದರನೆ
ಧೀರ ಹಿರಣ್ಯಕನಾರಾಧನೆಗೆ ಮೆಚ್ಚಿ
ಸೂರೆಯ ಮುಕ್ತಿಯನಿತ್ತವನೆ ೧

ವರವಜ್ರ ಶಕ್ತ್ಯಾಯುಧ ಧರನೆ
ಸುರಮುನಿ ನಮಿತ ಸರ್ವೇಶ್ವರನೆ
ಸುರುಚಿರ ರತ್ನಾಭರಣ ವಿಭೂಷಣನೆ
ಶರಣ ರಕ್ಷ ಕುಮಾರಕನೆ ೨

ದಾಸ ಜನರ ಮನತೋಷಕನೆ
ವಾಸುದೇವನ ಸಖ ಷಟ್ಶಿರನೆ
ದೋಷವಿನಾಶನೆ ನಾಶರಹಿತ ಪಾವಂ
ಜೇಶನೆ ಕಾರ್ತಿಕೇಯನೆ ಸ್ಕಂದನೆ ೩

## ೨೨೭

ಕೃತ್ತಿವಾಸನ ಪ್ರಿಯ ಪುತ್ರನೆ ಗುಹ ಸ–
ರ್ವೋತ್ತಮ ಚಿದ್ರೂಪ ಪ

ನಿತ್ಯನಿರ್ಮಲ ಸುಚರಿತ್ರ ಪವಿತ್ರನೆ
ಚಿತ್ತಜ ಪ್ರತಿರೂಪಾ ಪ್ರತಾಪಾ ಅ.ಪ

ದೀನತನದಿ ಕಡುಬೇನೆಯ ಪಡುತಲಿ
ಹೀನಮನುಜನೆನ್ನಾ ।
ದಾನಿಯಾಗಿಹ ಕರುಣಾನಿಧಿ ಕೈಪಿಡಿ
ಧ್ಯಾನಿಪೆ ನಾ ನಿನ್ನ ಪ್ರಸನ್ನ ೧

ಸುತ್ತಮುತ್ತಿರುವ ವಿಪತ್ತುಗಳಾ ಭಯ
ಮೆತ್ತಿಕೊಂಡಿದೆ ತಾನೇ
ಸತ್ವಶಾಲಿಯೇ ನೀ ಕಿತ್ತೊಗೆಯದಿರೆ ಅ–
ನ್ಯತ್ರ ಗತಿಯ ಕಾಣೆ ನಿನ್ನಾಣೆ ೨

ಪಾಶ ಅಂಕುಶಧರ । ನಾ ಸಹೋದರ ಪಾವಂ–
ಜೇಶ ಮಹಾನುಭಾವ ।
ದಾಸರಿಗೊದಗುವ ತ್ರಾಸವ ಕಳೆ ಸ–
ರ್ವೇಶನೆ ಮಹದೇವಾ । ದೇವರ ದೇವಾ ೩

## ೨೨೮

ಮುನಿಜನ ಮಾನಿತ ಸ್ಕಂದ ।
ಸದ್ಗುಣಮಂದಿರ ನಿತ್ಯಾನಂದ ।
ಸನಕನ ನಂದನ ವಂದ್ಯಾ । ಸುರ ।
ಗಣರಕ್ಷ ಪರಮಾನಂದ ೧

ದಕ್ಷಜೆ ಪ್ರೀತಿಯ ಬಾಲಾ । ಖಳ ।
ಶಿಕ್ಷಕ ಸಜ್ಜನ ಪಾಲ ।
ರಕ್ಷಕ ಜಗಜನ ಲೋಲ । ಸೇನಾ ।
ಧ್ಯಕ್ಷಾರ್ಧ ಚಂದ್ರನ ಪಾಲಾ ೨

ವರಶಕ್ತಿ ಕುಕ್ಕುಟ ಹಸ್ತ । ಸದಾ ।
ಶರಣರ ದುರಿತ ವಿಧ್ವಸ್ತಾ ।
ಅರಿಗಜಸಿಂಹ ಪವಿತ್ರ । ಲಂಬೋ– ।
ದರನನುಜಾ ಸುಚರಿತ್ರಾ ೩

ಕಷ್ಟದಿ ನರಳುತ ಬರುವ । ಜನ ।
ರಿಷ್ಟವ ಅನುದಿನ ಕೊಡುವ
ಕುಷ್ಠನಾಶನ ಮಹಾದೇವ । ಜಗ ।
ಜಟ್ಟೆಯೆ ಭಕ್ತರ ಕಾವಾ ೪

ವಾಸವಾರ್ಚಿತ ಶಿವತನಯ । ಅಘ ।
ನಾಶವರದ ಕಾರ್ತಿಕೇಯ ।
ದಾಸರ ಭಕ್ತಿಯ ಮೊರೆಯ । ಪಾವಂ–।
ಜೇಶ ಲಾಲಿಸಿ ರಕ್ಷಿಸಯ್ಯ ೫

# ೨೨೯

ನಿನ್ನ ಪಾದವ ನಂಬಿದೆನು ।
ನಿನ್ನನೇನು ಮರೆಹೊಕ್ಕೆನು ಪ

ನಿನ್ನ ನಾಮವ ಜಪಿಸುತನುದಿನ ।
ನಿನ್ನನೇ ನಾ ಬೇಡ್ವೆನು ಅ.ಪ

ಶರಣು ಸ್ಕಂದನೆ ದುರಿತ ಭಂಜನೆ
ಶರಣು ಪಾರ್ವತಿ ಕಂದನೆ ।
ಶರಣು ತಾರಕ ನಾಶ ಕರುಣಾ
ಶರಧಿ ನಿತ್ಯಾನಂದನೆ ೧

ಕೃತ್ತಿಕೆಯೊಳುದಿಸಿದನೆ ಪರಮ ಪ-
ವಿತ್ರನೇ ಸುರವಂದ್ಯನೆ
ಉತ್ತಮೋತ್ತಮ ದೇವಸೇನೆಯ
ಚಿತ್ತಹಾರಿಯೆ ಶರಜನೇ ೨

ಚಾರು ಚಂಪಕ ನಾಸ ಧೀರ ಕು-
ಮಾರ ತ್ರೈಜಗದೊಡೆಯನೆ ।
ಘೋರ ಶಾಪದಿ ಗಾರುಗೆಟ್ಟಿಹ
ನಾರಿರನ್ನೆಯ ಕಾಯ್ದನೆ ೩

ಮುಷ್ಟಿಕಾರಿಯ ಮಿತ್ರನೆ ಪರ-
ಮೇಷ್ಟಿ ವಂದ್ಯನೆ ಪೂಜ್ಯನೆ ।
ದುಷ್ಟ ಪದ್ಮನ ಕುಟ್ಟಿ ಸುರಪತಿ
ಇಷ್ಟವನು ಕರುಣಿಸಿದನೆ ೪

ಭಾವಜಾರಿಯ ಪುತ್ರನೆ ಸದಾ
ಭಾವಜನ ಪ್ರತಿರೂಪನೆ ।
ಭಾವ ಭಕ್ತಿಯೊಳ್ ಭಜಿಪ ದಾಸರ
ಕಾವ ಪಾವಂಜೇಶನೆ ೫

## ೨೩೦

ಎನ್ನಪರಾಧವ ಮನ್ನಿಸಿ ಪೊರೆ ಸುಪ್ರ–
ಸನ್ನ ಕುಮಾರ ದೇವ ಪ

ನಿನ್ನಂಥ ಕರುಣಾಳು ಇನ್ನಿಲ್ಲ ಲೋಕದೊ–
ಳೆನ್ನನುದ್ಧರಿಸು ದೇವಾ ಅ.ಪ

ನೀರಜನೇತ್ರ ಮಯೂರವಾಹನ ಭಕ್ತೋ–
ದ್ಧಾರ ಶಂಕರನ ಸುತಾ ।
ಶೂರಾಖ್ಯ ಪೂರ್ವಸುರಾರಿಗಳಂತಕ
ಮಾರನಾಕಾರದಾತಾ , ಪುನೀತಾ ೧

ಇಂದುವದನ ಸುರವೃಂದ ವಂದಿತ ನಿತ್ಯಾ–
ನಂದಾ ಚಿನ್ಮಯರೂಪಾ ।
ಕುಂದರದನ ಕಂಬು ಕಂಧರಶರಜ ಮು–
ಕುಂದನ ಸಖ ಚಿದ್ರೂಪ ಪ್ರತಾಪ ೨

ಈಶನ ಸುತ ಕಮಲಾಸನಾರ್ಚಿತ ರವಿ–
ಭಾಸ ಸೇನಾನಿ ಧೀರಾ
ದೋಷರಹಿತ ಪಾವಂಜೇಶನೆ ತವಪಾದ
ದಾಸರ ಕುಲ ಉದ್ಧಾರ । ಗಂಭೀರ ೩

## ೨೩೧

ಪಾಹಿಮಾಂ ಕಾರ್ತಿಕೇಯಾ । ಪಾರ್ವತಿಯ ಕುವರಾ
ಪಾಹಿಮಾಂ ಕಾರ್ತಿಕೇಯಾ ಪ

ಪಾಹಿ ಭಕ್ತಾವಳಿಯ ಪಾಲಕ ।
ಪಾಹಿ ದುರ್ಜನ ಕುಲವಿನಾಶಕ
ಪಾಹಿ ನಿರ್ಮಲ ಚಿತ್ತ ನಿರ್ಗುಣ ।
ಪಾಹಿ ಕರುಣೆಯೆ ಸುಬ್ರಹ್ಮಣ್ಯ ಅ

ಸುಗುಣಾಭರಿತ ಶರಜಾ ಸಚ್ಚಿದಾನಂದ
ಅಗಜೆಯ ಪ್ರಿಯ ತನುಜ ನಿಗಮ–
ಗೋಚರ ನಿತ್ಯ ನಿರ್ಮಲ
ನಗಧರನ ಸಖ ವಲ್ಲಿವರ ತ್ರೈ
ಜಗದೊಡೆಯ ಪರಿಶುದ್ಧ ಪಾವನ
ಮೃಗಧರನ ಸುತ ಸುಬ್ರಹ್ಮಣ್ಯ । ಪಾಹಿ । ೧

ಬಾಲಾರ್ಕ ಕೋಟಿ ತೇಜ ನಿತ್ಯಾನಂದ
ನೀಲಗ್ರೀವನ ಸುಧ್ವಜ ಖೂಳ ತಾರಕನೆಂಬ
ದೈತ್ಯನ ಪಾಳಯಕೆ ಕಾಲ ಸ್ವರೂಪ
ಸುರಾಳಿಯಂಬುಧಿ ಚಂದ್ರ ವರಮುನಿ
ಜಾಲವಂದಿತ ಸುಬ್ರಹ್ಮಣ್ಯ ೨

ವಾಸವನುತ ಚರಣ ವರಶಕ್ತಿ ಹಸ್ತ
ಭಾಸುರ ರತ್ನಾಭರಣ
ದಾಸಜನರನು ತೋಷದಿಂದಲಿ
ಪೋಷಿಸುವ ಗುಹ ವರದ ಪಾವಂಜೆ
ವಾಸ ಚಿತ್ತಜರೂಪ ಭವಹರ ।
ಭೂಸುರ ಪ್ರಿಯ ಸುಬ್ರಹ್ಮಣ್ಯ ೩

## ೨೩೨

ಬಾ ಶಿವಪುತ್ರನೆ ಶ್ರೀಶನ ಮಿತ್ರನೆ ಪ

ಬಾ ಸುರವಂದ್ಯನೆ ವಾಸುಕಿಗೊಲಿದನೆ । ಬಾ । ಅ

ಚಂದಿರವದನನೆ ಕುಂದಣವರ್ಣನೆ
ಕುಂದರದಾನನ ಸುಂದರ ಕಾಯನೆ ಬಾ ೧

ತಾರಕನಾಶನೆ ಧೀರಕುಮಾರನೆ
ನೀರಜ ನೇತ್ರನೆ ಮಾರಸ್ವರೂಪನೆ ಬಾ ೨

ವಲ್ಲಿಯ ರಮಣನೆ ಖಿಲ್ಲರ ದಮನನೆ
ಬಲ್ಲಿದರೊಡೆಯನೆ । ಮಲ್ಲ ಸಾಹಸನೆ । ಬಾ । ೩

ಶಿಷ್ಟರ ರಕ್ಷನೆ ದುಷ್ಟರ ಶಿಕ್ಷನೆ ।
ಕುಷ್ಠ ವಿನಾಶನೆ ಇಷ್ಟವ ಕೊಡುವನೆ । ಬಾ । ೪

ದೋಷ ವಿನಾಶನೆ ನಾಶ ರಹಿತನೆ
ದಾಸರ ರಕ್ಷ ಪಾವಂಜೇಶನೆ ಸ್ಕಂದನೆ । ಬಾ । ೫

## ೨೩೩

ನಲಿಯುತ ನಲಿಯುತ ಬಂದನೆ । ವಿಶ್ವಾ -
ವಳಿಯ ಪಾಲಿಪ ಶಿವನ ಕಂದನೆ ಪ

ಪಾವಕನೊಳು ಬೆರೆತಿದ್ದನೆ - ದಿವಿ -
ಜಾವಳಿ ನುತಿಸಲು ಎದ್ದನೆ - ನಿಗ -
ಮಾವಳಿ ಪೊಗಳುವ ಸೇರಕೋದ್ಧಾರನು ನಲಿಯುತ ೧

ಸೇನಾನಿ ಪದವಿಯೊಳೆದ್ದನೆ – ಸುರರ
ಸೇನೆಯ ನೊಡಗೂಡಿ ಪೋದನೆ – ಧುರದಿ
ದಾನವರೆರೆಯನ ಗೋಣನು ತರಿದೊಟ್ಟಿ ನಲಿಯುತ ೨

ವಾಸವಾರ್ಚಿತ ಧರೆಗೆ ಬಂದನೆ – ಅಘ
ನಾಶ ಪಾವಂಜೆಯೊಳ್ ನಿಂದನೆ – ರವಿ
ಭಾಸ ಕಾರ್ತಿಕೇಯ ದಾಸರ ಪೊರೆಯಲು ನಲಿಯುತ ೩

## ೨೩೪

ವಂದಿಸುವೆ ಮುನಿವೃಂದ ವಂದಿತ
ಸ್ಕಂದ ದೇವನಿಗೆ – ಜಯ ಜಯ
ವೆಂದು ಪಾಡುತ ವಂದಿಸುವೆ ಮು–
ಕುಂದ ಮಿತ್ರನಿಗೆ ಪ

ಭಕ್ತರ ವೃಂದ ರಕ್ಷಕ ಇಂದುವದನಾ ।
ನಂದ ಮೂರುತಿ ಸುಂದರಾಂಗ ಅ.ಪ

ತಾರಕಾದಿ ಸುರಾರಿನಾಶ ಪುರಾರಿ
ಪುತ್ರನಿಗೆ – ಚೆಲ್ವ ಮ
ಯೂರ ವಾಹನಗಾರುಶಿರದಾ
ಧೀರ ಶರಜನಿಗೆ – ಮೌಕ್ತಿಕ
ಹಾರಧರ ಸುರವಾರ ವಂದಿತ
ಮಾರರೂಪಗಪಾರ ಮಹಿಮಗೆ ೧

ವಲ್ಲಿದೇವಿಯ ವಲ್ಲಭಗೆ ಜಗಕೆಲ್ಲ
ಪಾಲಕಗೆ – ತ್ರೈಜಗ
ಮಲ್ಲನಿಗೆ ನವಪಲ್ಲವಾಧರಗೆ

ಪುಲ್ಲನಯನನಿಗೆ – ಆನತ
ನಲ್ಲನಿಗೆ ಖಳದಲ್ಲಣಗೆ ಸುರ–
ರೊಲ್ಲಿಭಗೆ ವಿಶ್ವಕೆಲ್ಲ ಒಡೆಯನಿಗೆ ೨

ಪರಮಪಾವನ ಚರಿತ ವಿಶ್ವಂಭರನ
ಸೋದರಗೆ – ಸದ್ಗುಣ
ಭರಿತ ಗುಹನಿಗೆ ವರದ ಹಸ್ತಗೆ
ಕರುಣವಾರಿಧಿಗೆ – ದಾಸರ
ನಿರತ ಪೊರೆಯುವ ಪರಮ
ಪಾವಂಜೆ – ಪುರದಧೀಶಗೆ ಗಿರಿಜೆ ತನುಜಗೆ ೩

## ೨೩೫

ದಯದೋರೋ ಸುಬ್ರಹ್ಮಣ್ಯ ।
ದಯದೋರೋ ಪ

ದಯದೋರು ಅನುದಿನ
ಲಯ ವಿವರ್ಜಿತ ಚಿನು –
ಮಯನೆ ನಿತ್ಯಾನಂದ ವಾರಿಜ
ನಯನ ಲಂಬೋದರನ ಸೋದರ ಅ

ಶರಜನೇ ಸುಧರ್ಮಭೂಪನ ಪೊರೆದನೇ
ಕರುಣವಾರಿಧಿ ಪುರಹರನ ಪ್ರೀತಿಯ ಬಾಲ ।
ತರಣಿ ಸಾಸಿರಕಿರಣ ಪೋಲುವ ।
ಪರಮತೇಜಃಪುಂಜ ಷಟ್ಶಿರ ೧

ಸ್ಕಂದನೆ ಅಖಿಲ ಮುನಿವಂದ್ಯನೆ
ಮಂದರಧರಸಖ ಕುಂದರದನ
ಪೂರ್ಣ ಚಂದಿರಾನನ ಸುಂದ–
ರಾಂಗಾರವಿಂದ ಚರಣ ದ್ವಂದ್ವ ಷಟ್ಶಿರ ೨

ಈಶನೆ ತಾರಕ ದೈತ್ಯ ನಾಶನೆ
ಸಾಸಿರ ಪೆಸರ ಪಾವಂಜೇಶನೆ ತವಪದ
ದಾಸ ಜನರನು ನಿರತ ಪೊರೆವ ಸ-।
ರ್ವೇಶ ಪಾವನ ಮೂರ್ತಿ ಷಟ್ಶಿರ ೩

೨೩೬

ಇನ್ನೂ ದಯೆದೋರೆಯಾ ।
ಸುಬ್ರಹ್ಮಣ್ಯ ಇನ್ನೂ ದಯೆದೋರೆಯ ಪ

ಮುನ್ನ ಮಾಡಿದ ಕರ್ಮ ಬೆನ್ನ ಪಿಡಿಯುತೀಗ-
ಲೆನ್ನ ಕಾಡುತಲಿದೆ ನಿನ್ನಾಶ್ರಯವ ಗೈದೆ ಅ

ಅನುದಿನ ಕೊರಗುವೆ ಅನಪತ್ಯಕೋಸುಗ
ಕೊನೆಗಾಣಿಸೆಂದು ನಾ ಮಣಿಯುತ ಬೇಡುವೆ ೧

ಬಲವೆಲ್ಲಿ ಕುಗ್ಗಿತು ಗೆಲವೆಲ್ಲಿ ನಿಂತಿತು
ಛಲ ಬಿಟ್ಟು ಎನ್ನನೀ ಸಲಹೆಂದು ಬೇಡುವೆ ೨

ಲೇಶವು ಸುಖವಿಲ್ಲ ಘಾಸಿಯಾದೆನು ಪಾವಂ-
ಜೇಶನೆ ತವಪದ ದಾಸರ ಮೇಲೆ ನೀ । ಇನ್ನೂ ೩

೨೩೭

ಕಾಯೊ ಕೃಪಾನಿಧಿಯೇ ಭವಾನಿಜ
ಕಾಯೊ ಸುಗುಣ ಮಣಿಯೆ ಪ

ಆಯತ ವಕ್ಷ ಸುರನಾಯಕ ಪೂಜಿತ
ಪ್ರೀಯ ಮುರಾರಿ ವಿನಾಯಕ ಸೋದರ ಅ

ಸುರನರೋರಗ ವಂದ್ಯಾ ವಲ್ಲಿಯ ।
ವರ ಸಚ್ಚಿದಾನಂದ ಪರಮ ಪುರುಷ ಅಘ –
ಹರ ಬಾಹುಲೇಯ ಸಚ್ಚರಿತ
ಪಾವನಮೂರ್ತಿ ಶರಣರ ರಕ್ಷಕ ೧

ಇಂದೀವರನಯನಾ ಶೋಭಿಪ ಕುಂದ
ಕುಂದಕುಟ್ಮಲಪದನಾ
ನಂದಿಧ್ವಜ ಸುತ ಸುಂದರ ಮೂರುತಿ ।
ಇಂದುವದನ ಮುನಿವೃಂದ ವಂದಿತ ಗುಹ ೨

ಸಾಸಿರ ರವಿತೇಜಾ ಪಾವಂಜೆ ವಾಸ
ಮಯೂರ ಧ್ವಜಾ ।
ಕ್ಲೇಶದಿ ನರಳುವ ದಾಸರ ರಕ್ಷ ಸ–
ರ್ವೇಶಕರಜ ನಿರ್ದೋಷಿ ಸುಬ್ರಹ್ಮಣ್ಯ ೩

## ೨೩೮

ಬೇಡುವೆ ತವ ಪಾದವಾ ಕಾರ್ತಿಕೇಯಾ ।
ಬೇಡುವೆ ತವ ಪಾದವಾ ಪ

ಬೇಡುವೆ ತವ ಪಾದ ಮಾಡಿ ದಯವನು ಹೋ–
ಗಾಡಿಸು ಬವಣೆಯ ನೀಡು ಮನೋದಯ ಅ.ಪ

ನೀಲ ಲೋಹಿತನ ಪುತ್ರಾ ಶೋಭಿಸುವ ಮ–
ರಾಳ ವಾಹನ ಪವಿತ್ರಾ ಖೂಳ ತಾರಕನೆಂಬ
ವ್ಯಾಳ ಗರುತ್ಮ ಮರಾಳಿ ಪೂಜಿತ
ವಿಶ್ವಪಾಲ ಸದ್ಗುಣ ಮಾಲ ೧

ಅದಿತಿಯ ಕಾಯ್ದವನೇ ಸುಧರ್ಮಗೆ ಸು–
ಪದವಿಯನಿತ್ತವನೇ ಮದನನ ರೂಪಾರಿ–

ಮದಗಜ ಕೇಸರಿ ಪದುಮಾಕ್ಷ ಖಳಪದ್ಮ
ಮದಹರ ಶರಜನ್ಮ ೨

ದಾಸರ ನಿತ್ಯ ಕಾವ ಪಾವಂಜೆಯ
ವಾಸ ಷಡ್ವದನದೇವಾ ಕೇಶವ ಮಿತ್ರ
ದಿನೇಶನ ತೇಜ ವಿಘ್ನೇಶನ ಅನುಜ
ಸರ್ವೇಶ ಭವಾನಿಜ ೩

## ೨೩೯

ಶ್ರೀ ಸ್ಕಂದಾ ಜನ ವಂದ್ಯಾ
ಭೋಗೀಂದ್ರ ಭೂಷಣಾ ಪ

ಶ್ರೀ ವಾಸುದೇವನ ಮಿತ್ರಾ ದಿನೇಶ ತೇಜ ಪವಿತ್ರಾ
ಸರ್ವೇಶ ಮಂಜುಳಗಾತ್ರಾ ಗುಹೇಶ ಸುಚರಿತ್ರಾ ೧

ಖಳ ತಾರಕಾಸುರ ಮಥನಾ ಬಲು ಧೀರ ಪದ್ಮನ ದಮನಾ
ಸುವಿಚಾರಿ ವಲ್ಲಿಯ ರಮಣಾ ಮಯೂರ ವಾಹನಾ ೨

ಪಾವಂಜೆ ಕ್ಷೇತ್ರಾಧೀಶಾ ಅರಿ ಭಂಜ ರಕ್ಷಕ ವಾಸಾ
ರಂಜನಾನತ ಪೋಷಾ ಧನಂಜಯ ಭಾಸಾ ೩

## ೨೪೦

ಕಾಪಾಡೋ ಸುಬ್ರಹ್ಮಣ್ಯ ಮಹಸ್ವಾಮೀ ಪ

ಕಾಪಾಡೋ ಅನುದಿನ ಎನ್ನ
ಸರ್ವವ್ಯಾಪಕ ಸುಗುಣ ಸಂಪನ್ನ ನಿ–
ರ್ಲೇಪ ಚಿನ್ಮಯ ಸುಪ್ರಸನ್ನಾ ಸ್ವಾಮಿ

ಗೋಪಾಲ ಸಖ ಅಗ್ರಗಣ್ಯಾವರ
ತಾಪಸರಿಗೆ ಮುಕ್ತಿ ಸೋಪಾನ ತೋರ್ಪ
ದಯಾಪರ ದೇವ ನೀನೂ
ಮಮತೆಯಿಂದ ಕಾಪಾಡು ಎಂಬೆ ನಾನು ಸುಬ್ರಹ್ಮಣ್ಯ ೧

ಸುರ ಮಾತೆಯ ಶಾಪವನು ಪರಿಹರಿಸಿದ
ಕರುಣಾಳು ನೀನು ನೃಪ
ವರ ಸುಧರ್ಮನ ಪೊರೆದವನು
ಪರಿಯನೆಷ್ಟೆಂದು ವರ್ಣಿಪೆನು ಆಹಾ
ಉರಗ ಪತಿಯೊಳಂಶ ವಿರಿಸುತ್ತ
ವರವಿತ್ತ ಪರಮಪುರುಷನೆ ಎ–
ನ್ನಾ ರಕ್ಷಿಸು ಎಂದು ಸೆರಗೊಡ್ಡಿ
ಬೇಡ್ವೆ ನಿನ್ನ ಸುಬ್ರಹ್ಮಣ್ಯ ೨

ನಿತ್ಯನಿರ್ಮಲನಾದ ದೇವಾ ಪ್ರತಿ
ನಿತ್ಯವು ನಲಿಯುತಲಿರುವಾ ಅತಿ
ಉತ್ತಮ ಪಾವಂಜೆ ಪುರವಾಸ
ಪವಿತ್ರವ ಮಾಡುತ್ತ ಮೆರೆವ ಮಹಾ
ಕೃತ್ತಿವಾಸನಸುತ ಚಿತ್ತಜ ರೂಪ
ಪುರುಷೋತ್ತಮ ತವ ದಾಸರ
ರಕ್ಷಿಸು ನೀನೆನುತ್ತ ಬೇಡುವೆ
ಕುಮಾರಾ ಸುಬ್ರಹ್ಮಣ್ಯ ೩

## ೨೪೧

ಕೃತ್ತಿವಾಸನ ಪ್ರಿಯ ಪುತ್ರನಿಗೇ
ಭಕ್ತವತ್ಸಲನಿಗೇ ಭವಹರಗೇ ।

ನಿತ್ಯನಿರ್ಮಲ ಪುರುಷೋತ್ತಮ
ಶರಜಗೆ ನಿತ್ಯತೃಪ್ತಗೆ ನಿರ್ವಿಕಾರನಿಗೇ ಮಂಗಲಂ ೧

ದೇವಸೇನೆಯ ಮನ ಪ್ರೀಯನಿಗೆ
ದೇವತೆಗಳಭೀಷ್ಟದಾಯಕಗೇ ।
ದೇವಾದಿದೇವಗೆ ಭಾವಜ ರೂಪಗೆ
ಪಾವನ ಮೂರ್ತಿಗೆ ಕೋವಿದಗೆ ಮಂಗಲಂ ೨

ವಾಸುಕಿಗಭಯವನಿತ್ತವಗೆ
ವಾಸ ಪಾವಂಜೆಯೊಳ್‌ಗೈದನಿಗೆ ।
ಸಾಸಿರ ತರುಣಿ ಸಂಕಾಶಗೆ
ಈಶಗೆ ದಾಸರನನುದಿನ ಪೋಷಿಪಗೇ ॥
ಮಂಗಲಂ ಜಯ ಮಂಗಲಂ ೩

## ೨೪೨

ವಲ್ಲಿ ದೇವಿಯ ವಲ್ಲಭಗೆ ಬಲ್ಲಿದ
ಪದ್ಮನ ಸೀಳ್ದನಿಗೇ
ಖಿಲ್ಲ ತಾರಕನನು ಜನಿಸಿದೇಳನೆದಿನ
ಸಂಹರಿಸಿದ ಷಣ್ಮುಖಿಗೇ ಮಂಗಲಂ ೧

ಮಾರಾರಿಯ ಸುಕುಮಾರನಿಗೇ ಚಾರು
ಮಯೂರ ತುರಂಗಮಗೆ
ಮಾರನ ಪೋಲುವ ಕಾಯಗೆ ಧೀರಗೆ
ವಾರಿಜನಾಭನ ಪ್ರೀಯನಿಗೇ ಮಂಗಲಂ ೨

ಆಶಾದಿ ಷಡ್ವೈರಿ ಸೋಕದಗೇ
ದಾಸರನನುದಿನ ಪೋಷಿಪಗೇ
ಭೂಸುರ ಪ್ರೀಯಗೆ ಪಾವಂಜೆ ಕ್ಷೇತ್ರದಿ
ವಾಸವಾಗಿರುತಿಹ ಶ್ರೀ ಗುರುಗೇ । ಮಂಗಲಂ ೩

## ೨೪೩

ತೋರೋ ತೋರೋ ತವ ದಿವ್ಯ ಚರಣವ ಪ

ತೋರಿಸು ಕರುಣಾವಾರಿಧಿ ಶರಜ ನೀ ತೋರೋ ಅ.ಪ

ವಲ್ಲಿದೇವಿಯ ವಲ್ಲಭ ಸುರನುತ
ಪಲ್ಲವಾಧರ ವಿಶ್ವದೊಲ್ಲಭ ಶರಜ ನೀ ॥ತೋರೋ ೧

ತಾರಕನ ಸಂಹಾರಿ ಕಾರ್ತಿಕೇಯಾ
ಶೂರಪದ್ಮನ ಅಸು ಹೀರಿದ ಶರಜ ನೀ ॥ತೋರೋ ೨

ಅಂಬೂಜಾಸ್ಯ ಹೇರಂಬನ ಸೋದರ
ಕಂಬುಕಂಧರ ಭಕ್ತರ್ಗಿಂಬೀವ ಶರಜ ನೀ ॥ತೋರೋ ೩

ಯೋಗಿವಂದಿತ ರಾಗಾದಿ ವಿರಹಿತ
ಆಗಮಜ್ಞನೆ ಗುಣಸಾಗರ ಶರಜ ನೀ ॥ತೋರೋ ೪

ವಾಸೀ ಪಾವಂಜೆ ಶೇಷ ಶಾಯಿಯ ಸಖ
ದಾಸರ ಪೋಷ ಸರ್ವೇಶ ಶರಜ ನೀ ॥ತೋರೊ ೫

## ೨೪೪

ಗಿರಿಜಾತೆಯ ಸುತ ಸುರನರ ಪೂಜಿತ
ಪರಮಪುರುಷ ಗುಹ ದಯದೋರೋ ಪ
ಕರುಣೆಗಳರಸಾ ಶರಣರ ರಕ್ಷಕಾ
ದುರಿತ ವಿನಾಶ ಗುಹ ದಯದೋರೋ ಅ.ಪ

ಶಕ್ತಿ ವಜ್ರಾಯುಧ ಹಸ್ತದಿ ಧರಿಸಿಹ
ಮುಕ್ತಿದಾಯಕ ಗುಹ ದಯದೋರೋ ।
ಭಕ್ತರ ಮನಕೆ ಸಂತೃಪ್ತಿಯನೀವ
ಸರ್ವೋತ್ತಮೋತ್ತಮ ಗುಹ ದಯದೋರೋ ೧

ಇಂದಿರೆಯರಸನ ಕಂದನ ಗತರೂಪಾ-
ನಂದದೊಳಿದ್ದ ಗುಹ ದಯದೋರೋ
ಇಂದ್ರನ ಮಾತೆಗೆ ಬಂದ ವಿಪತ್ತನು
ಕುಂದಿಸಿದಾ ಗುಹ ದಯದೋರೋ ೨

ಬಾಲೆ ವಲ್ಲಿಯವರ ಶೀಲ ಸುಗುಣ-
ರತ್ನಾಮಾಲ ದಾಸರಕ್ಷ ದಯದೋರೋ ।
ನೀಲಕಂಠನ ಧ್ವಜ ನೀಲಕಂಠಜ ಜನ
ಲೋಲ ಪಾವಂಜೆ ಗುಹ ದಯದೋರೋ ೩

## ೨೪೫

ಹರನ ಪ್ರಿಯ ಕುವರ ಸರ್ವದುರಿತ ನಾಶ ಶರಜನೇ ಪ

ದುರಿತ ನಾಶ ಶರಜನೇ ಕರುಣ ಸಾಗರ ಸ್ಕಂದನೇ ಅ.ಪ

ದಿನಪ ತೇಜ ಗಣಪನನುಜ ಮನಸಿಜನ ರೂಪನೇ
ಮನಸಿಜನ ರೂಪನೆ ವನಜನಾಭನ ಪ್ರೀಯನೇ ೧

ಭಕ್ತವತ್ಸಲ ಶಕ್ತಿ ವಜ್ರ ಹಸ್ತ ಬಾಹುಲೇಯನೇ
ಹಸ್ತ ಬಾಹುಲೇಯನೇ ಮುಕ್ತಿದಾಯಕ ಸ್ಕಂದನೇ ೨

ವಲ್ಲಿಯವರ ಪಲ್ಲವಾಧರ ಫುಲ್ಲನಯನ ಧೀರನೇ
ಫುಲ್ಲನಯನ ಧೀರನೇ ಖುಲ್ಲ ತಾರಕ ನಾಶನೇ ೩

ಖ್ಯಾತ ಅಂಬಿಕ ಜಾತ ಪಾವಂಜೆನಾಥ ದಾಸ ರಕ್ಷನೇ
ನಾಥ ದಾಸ ರಕ್ಷನೇ ಪ್ರೀತ ಕಾರ್ತಿಕೇಯನೇ ೪

## ೨೪೬

ಕರ ಮುಗಿವೆ ಶರಜನೇ ಸೆರಗೊಡ್ಡಿ ನಾನು
ಕರ ಮುಗಿವೆ ಶರಜನೇ ಪ

ಕರಗಳ ಮುಗಿವೆನು ಕರುಣೆಗಳರಸನೇ
ಕರಮುಗಿವೆ ಅ.ಪ

ಕಾಲಕಾಲನ ಪ್ರಿಯ ಬಾಲ ಕುಮಾರ ।
ಶೀಲ ಸುಗುಣ ರತ್ನಮಾಲ ಗಂಭೀರ । ಕರಮುಗಿವೆ ೧

ಬೆನಕನನುಜ ಗುಹ ದಿನಪನ ತೇಜಾ
ರಣದಲಿ ಸೇನಾನಿ ಸನಕಾದಿ ಪೂಜಾ । ಕರಮುಗಿವೆ ೨

ಚರಣ ದಾಸರಿಗಿಷ್ಟ ಕರುಣಿಸಿ ಕೊಡುವಾ
ಸುರವರ ಪಾವಂಜೆ ಪುರದ ಶ್ರೀ ದೇವಾ । ಕರಮುಗಿವೇ ೩

## ೨೪೭

ಪಾಲಿಸೋ ಸುಬ್ರಹ್ಮಣ್ಯ ಪಾಲಿಸೋ ಪ

ಪಾಲಿಸು ದಯೆಯಿಂದ ನೀಲಲೋಹಿತ
ಪ್ರಿಯ ಲಾಲ ಸದ್ಗುಣ–
ಶೀಲ ಸಜ್ಜನಪಾಲ ಮಣಿಗಣ ಮಾಲ
ಷಡ್ಮೊರ ಪಾಲಿಸೋ ಅ.ಪ

ಚಂದಿರಾವದನ ಕಂಬುಕಂಧರ ಕುಂದರದನ
ಚೆಲ್ವ ಇಂದೀವರಾಕ್ಷ ಸ–
ನಂದನಾದಿ ಮುನೀಂದ್ರ ಪೂಜ್ಯಾನಂದ
ಮೂರುತಿ ಸ್ಕಂದ ಷಡ್ಮೊರ ೧

ತಾರಕಾ ಚಿನ್ಮಯ ಭಕ್ತೋದ್ಧಾರಕ ಚಾರು
ಚಂಪಕನಾಸ ಮಾರ ಸ್ವರೂಪ ಮುರಾರಿ
ಸಖ ಸುರವಾರ ವಂದ್ಯ
ಮಯೂರವಾಹನ ಧೀರ ಷಡ್ವಿರ 2

ದಾಸರ ರಕ್ಷಕ ರವಿ ಭಾಸುರಾ ಪಾಶ
ಅಂಕುಶಧರನಾ ಸಹೋದರ ಸರ್ವ
ದೋಷ ಹರ ಕಮಲಾಸನಾರ್ಚಿತ
ಈಶ ಪಾವಂಜೆವಾಸ ಷಡ್ವಿರ 3

## ೨೪೮

ಕರುಣಾನಿಧಿ ಸುರವರ ಗುಹ ಶರಜಾ
ಪರಮಪುರುಷ ಅಘಹರ ನೀನೆ ಶರಜಾ ಪ

ನಗುಮೊಗದರಸ ತ್ರಿಜಗಪತಿ ಶರಜಾ ।
ನಗಧರ ಪ್ರಿಯಸಖ ಸುಗುಣಿಯೆ ಶರಜಾ ।
ನಿಗಮ ಗೋಚರ ಖಳನಗ ವಜ್ರ ಶರಜಾ ।
ಅಗಜೆಯ ಮೋಹದ ಮಗ ನೀನೆ ಶರಜಾ 1

ಇಂದುವದನ ಅರವಿಂದೇಕ್ಷಣ ಶರಜಾ ।
ವೃಂದಾರಕ ಕುಲ ಮಂದಾರ ಶರಜಾ ।
ಕಂದರ್ಪ ಶತರೂಪ ಸುಂದರ ಶರಜಾ ।
ನಂದಿಧ್ವಜ ಜನಪ್ರಿಯ ಕಂದನೆ ಶರಜಾ 2

ವಾಸವ ವಂದ್ಯ ಸರ್ವೇಶನೆ ಶರಜಾ
ಆಶಾದಿ ರಹಿತ ವಲ್ಲೀಶನೆ ಶರಜಾ
ದಾಸ ಜನರ ಸದಾ ಪೋಷಕ ಶರಜಾ
ವಾಸ ಪಾವಂಜೆ ಸೇನೇಶನೆ ಶರಜಾ 3

## ೨೪೯

ಕರುಣದಿ ಕೊಡು ಕಾರ್ತಿಕೇಯಾ । ತವ ।
ಶಿರದ ಮೇಲಿಹ ಗಂಧ ಸಿಂಗಾರ ಹೂವಾ ಪ

ದುರಿತ ಕೋಟಿಗಳನು ತರಿಯೇ । ಮಹಾ ।
ದುರುಳರುಪದ್ರದ ಗಿರಿಯನು ಮುರಿಯೇ
ಪರಮ ಕುಲಿಶದಂತೆ ಇರುವಾ । ತವ ।
ಶಿರದ ಮೇಲಿರುವ ಸಂಪಿಗೆ ಹೂವ । ದೇವಾ ೧

ಕೆಡುಕಿನ ತಾಮಸವಳಿದೂ । ತವ ।
ದೃಢಭಕ್ತಿ ಎನ್ನಯ ಮನದೊಳು ಮೊಳೆದೂ
ದೃಢವಾಗಿ ನೆಲೆಸುವ ತೆರದೀ । ತವ ।
ಮುಡಿ ಮೇಲಿಹ ಮಲ್ಲಿಗೆಯನತಿ ಮುದದೀ ೨

ಆಶಾದಿಗಳ ಪರಿತ್ಯಜಿಪಾ । ತವ ।
ದಾಸರ ಚರಣಯುಗ್ಮಕೆ ನಮಸ್ಕರಿಪಾ ।
ಲೇಸಿನ ತಿಳಿ ಜನಿಸಲಿಕೇ ಪಾವಂ–
ಜೇಶ ನೀ ಪೊತ್ತು ಕೊಂಡಿರುವ ಅಶೋಕೇ ೩

## ೨೫೦

ಈತನೇ ಕುಮಾರಸ್ವಾಮಿ ಖ್ಯಾತನಾಗಿಹಾ ।
ಭೂತ ಗಣದ ನಾಥ ಶಿವನ ಜಾತನಾಗಿಹಾ ಪ

ಸುಜನ ರಕ್ಷ ಕುಜನ ಶಿಕ್ಷ ದ್ವಿಜ ಕುಲಾಧಿಪಾ ।
ಅಜ ಸುರಾದಿ ತ್ರಿದಶ ವಂದ್ಯ ಭಜಕ ಪಾಲಕಾ ೧

ಕಾಮರೂಪ ವಾಮನ ಸಖ ನಾಮ ಸಾಸಿರ
ಭೀಮ ಬಲ ನಿಷ್ಕಾಮ ಮೂರ್ತಿ ಪ್ರೇಮಸಾಗರಾ ೨

ದಾಸತತಿಯ ಕ್ಲೇಶ ಸತತ ನಾಶಗೈಯುವಾ ।
ಭಾಸುರಾಂಗ ಪಾವಂಜೇಯೊಳು ವಾಸಗೈದಿಹಾ ೩

## ೨೫೧

ಇಂಥಾ ಬಾಲನೆಲ್ಲು ಕಾಣೆನೊ ಪ

ಉದಿಸಿದೇಳನೆ ದಿನದಿ ತ್ರಿದಶರೊಡನೆ ಕೂಡಿ
ಮದಮುಖತಾರಕ । ಸದನವನೇರಿ
ಕದನವಗೈಯುತ । ಹದವಿಹ ಶಸ್ತ್ರದಿ
ಅಧಮ ದೈತ್ಯನ ಯಮ । ಸದನಕಟ್ಟಿರುವಂಥ ೧

ಅಸಿತನ ಶಾಪದಿ । ಅಸುರೆಯಾದದಿತಿಯು
ನಿಶಿಚರ ತಮನ ವರಿಸಿಕೊಂಡು ಇರಲು ।
ಅಸುರ ಹರನು ಖಳ । ನನು ಸೆಳೆಯಲಿಕೆನು-
ತಿಸುವದಿತಿಗೆ ಪೂರ್ವ । ದೆಸೆಯನಿತ್ತಿರುವಂತಾ ೨

ದುರುಳ ರಕ್ಕಸನಾಶಿ । ಧರಣಿಯೊಳ್ತೊಳಲುವ
ದೊರೆ ಸುಧರ್ಮನ ಶಾಪ । ಪರಿಹರಿಸುತಲೇ ।
ನಿರತ ತನ್ನಯ ನಾಮ । ಸ್ಮರಿಪ ದಾಸರ ಸದಾ
ಪೊರೆಯೆ ಪಾವಂಜೆಯೊಳು । ಸ್ಥಿರವಾಗಿನಿಂತ ತಾ ೩

## ೨೫೨

ಜಯ ಕಾರ್ತಿಕೇಯ । ದಾಮೋದರ
ಪ್ರಿಯ ಪಾರ್ವತೀ ತನಯ ಪ

ಲಯ ವಿವರ್ಜಿತನೆ ದುಷ್ಟ ।
ಚಯದ ನಾಶ ಇಂದೀವರ

ನಯನ ಸದ್ಗುಣ ಭರಿತ ಚಿನು ।
ಮಯ ಸದಾನಂದ ಅ

ನೀಲಕಂಠನ ಸುಧ್ವಜ ಚಂಪಕನಾಸ
ಬಾಲಾರ್ಕ ಕೋಟಿ ತೇಜಾ ಕಾಲಾಂತಕ ದೇವ ಶಿವನ
ಬಾಲ ಬಾಹುಲೇಯ ಜನಲೋಲ ಸಜ್ಜನ
ಪಾಲ ರತ್ನಮಾಲ ಕುಮಾರ ೧

ವಲ್ಲಿ ದೇವಿಯ ರಮಣ ತಾರಕ ಪೂರ್ವ
ಖುಲ್ಲ ದೈತ್ಯರ ದಮನಾ
ಫುಲ್ಲಶರನ ಪೋಲ್ವ ರೂಪ ಪಲ್ಲವಾಧರ ನತಜನರ
ನಲ್ಲಿ ತ್ರೈಜಗಮಲ್ಲ ವಿಶ್ವ । ವಲ್ಲಭ ಗುಹಾ ೨

ಪಾವಂಜೆ ಕ್ಷೇತ್ರವಾಸಾ । ರಕ್ಷಕ ದಾಸ
ಕೋವಿದರೊಡೆಯ ಈಶಾ । ದೇವಸೇನೆಯಾ ರಮಣ
ದೇವಾಧಿದೇವನುತ
ಪಾವನ ಮೂರುತಿ । ಪಾವಕೋದ್ಭೂತಾ ೩

## ೨೫೩

ಗಿರಿಜೆಯ ಪ್ರೀತಿಯ ಕುವರ ಪ

ಧುರ ಧೀರ ಭವದೂರ ಉದಾರ ಗಂಭೀರ ತವ
ಚರಣವ ತೋರೋ ಕುಮಾರ ಅ

ತಾರಕ ದೈತ್ಯನ ವಿನಾಶ ಗುಹೇಶ ಸರ್ವೇಶಾ ಜಗ-
ದೀಶಾ ಸೇನೇಶಾ ಗುಣವಾರಿಧಿ ಚಂಪಕನಾಸಾ ೧

ವಲ್ಲಿದೇವಿಯ ರಮಣ ಖಳದಮನ ನಿರ್ಮರಣ– ಶುಭ
ಚರಣ – ಕಡುಕರುಣಾಕರ ಪಲ್ಲವ ರತ್ನಾಭರಣ ೨

ಪಾವನ ಮೂರುತಿ ಈಶ ರವಿಭಾಶಾ ಅಘನಾಶಾ ಸದ್
ದಾಸಾ ಜನಪೋಷ ವರ ಪಾವಂಜೆ ಕ್ಷೇತ್ರ ನಿವಾಸ ೩

## ೨೫೪

ನಂದಿ ಧ್ವಜನ ಪ್ರಿಯ ಕಂದ ।
ಗುಹ ಕಂದರ್ಪಾನ್ವಿತ ಮುನಿವಂದ್ಯ ಪ

ಸಿಂಧು ಗಂಭೀರ ಗುಣಸಿಂಧು
ಸದಾನತ ಬಂಧು ಶರಜ ನಿತ್ಯಾನಂದ ಅ

ಕುಕ್ಕುಟವೇರು ಬಂದ । ಮಹಾ ।
ರಕ್ಕಸನಿದಿರೊಳು ನಿಂದ ।
ಸೊಕ್ಕಿಂದ ಮಲೆತಾ ರಕ್ಕಸ ಸೈನ್ಯವ ।
ಮುಕ್ಕಿ ತಾರಕನನು ಕೊಂದ ೧

ಸುರಪನ ಸತಿ ಶಚಿಯಂದಾ । ತಾನು ।
ಅರಿತು ಮೋಹದಿ ಮನ ನೊಂದ ।
ದುರುಳ ಪದ್ಮನು ಪಡೆವೆರಸಿ ಯುದ್ಧಕೆ ಬರೆ ।
ಶಿರವ ಕತ್ತರಿಸಿದ ಸ್ಕಂದ ೨

ವಾಸುಕಿಗೊಲಿಯುತ ಬಂದ । ರವಿ ।
ಭಾಸನಾಶನ ಭವಬಂಧ ।
ದಾಸರನನುದಿನ ಪೋಷಿಸೆ ಚಂಪಕ ।
ನಾಸ ಪಾವಂಜೆಯೊಳ್ನಿಂದ ೩

## ೨೫೫

ಕಾರ್ತಿಕೇಯನ ಮಾಡೋ ನೀ ಧ್ಯಾನ ಪ

ತಾರಕ ಮಥನನ ನೀರಜ ನಯನನ
ತಾರಕ ಮಂತ್ರನ ಮಾಡೋ ನೀ ಧ್ಯಾನ ೧

ನಿಗಮಗಳಿಗೆಟಕದ । ಜಗದೇಕ ದೇವನ
ಅಗಣಿತಮಹಿಮನ । ಮಾಡೋ ನೀ ಧ್ಯಾನ ೨

ನಿತ್ಯಾನಂದನ । ಭೃತ್ಯರ ಪೊರೆವನ
ಸತ್ಯ ಸ್ವರೂಪನ । ಮಾಡೋ ನೀ ಧ್ಯಾನ ೩

ದುಷ್ಟ ಖಳರ ಎದೆ । ಮೆಟ್ಟಿ ಶಿಕ್ಷಿಸುವನ
ಕುಷ್ಠ ವಿನಾಶನ । ಮಾಡೋ ನೀ ಧ್ಯಾನ ೪

ದಾಸರ ಕಾವ ಪಾವಂ । ಜೇಶನ ಸ್ಕಂದನ
ಭೂಸುರ ಪ್ರೀಯನ । ಮಾಡೋ ನೀ ಧ್ಯಾನ ೫

## ೨೫೬

ನಮಿಸುತ ಪೊರಳುವೆನು । ಕಾರ್ತಿಕೇಯ
ನಮಿಸುತ ಪೊರಳುವೆನು ಪ

ನಮಿಸುತ ಪೊರಳುವೆ । ರಮೆಪತಿ ಸಖ ಗುಹ
ನಮಿಸುತ ಅ

ಪರಿಪರಿ ತಾಪದ । ಸೆರೆಯೊಳ್ ಸಿಲುಕಿ ಬಲು
ತರ ಕಷ್ಟಪಡುತಿಹೆನು ಕುಮಾರ ನಮಿಸುತ ೧

ಮೊರಲಾರದಷ್ಟು ನಾ । ದುರಿತ ರಾಶಿಯಗೈದು
ನರಳುತಾಬಲಿಹೆನು । ಕಾವುದು ನೀನು ನಮಿಸುತ ೨

ಈಶನ ಪುತ್ರ ಸ । ರ್ವೇಶ ಸದ್ಗುಣ ಪಾವಂ ।
ಜೇಶನೆ ಸ್ತುತಿಸುವೆನು । ದಾಸನು ನಾನು ನಮಿಸುತ ೩

## ೨೫೭

ನಂಬಿದೆ ಕುಮಾರ ತವ ಪಾದಾಂಬುಜವ ಧೀರಾ ಪ

ನೀನೆನಗಿಂಬುಕೊಟ್ಟು ಪರಾಂಬರಿಸು
ಶ್ರೀ ಶಂಭು ಸುಕುಮಾರ ಅ.ಪ

ಯೋಗಿಜನವಂದ್ಯ ಸದ್ಗುಣ
ಸಾಗರಾನಂದ ನಿರುಪಮ
ರಾಗ ಲೋಭವ ತ್ಯಾಗಗೈದಿಹ ಶ್ರೀ ಗಿರಿಜೆಕಂದಾ ೧

ಶಕ್ತಿ ಮೊದಲಾದ ಆಯುಧ
ಹಸ್ತದೊಳು ಪಿಡಿದಾ ನಿರ್ಮಲ
ಚಿತ್ತ ಶ್ರೀಧರ ಮಿತ್ರ ಪರಮ ಪವಿತ್ರ ಖಳ ಭೇದಾ ೨

ವಾಸವಾರ್ಚಿತನೇ ಸರ್ವದಾ
ದಾಸ ರಕ್ಷಕನೇ ರವಿಶತ
ಭಾಸ ಚಂಪಕನಾಸ ಪಾವಂಜೇಶ ಷಟ್ಶಿರನೇ ೩

## ೨೫೮

ಆರತಿಯನು ಬೆಳಗಿ ಪಾರ್ವತಿಯ
ಕುಮಾರ ಗುಹಗೆ ಎಸಗಿ ಪ

ಮಾರನಾಕಾರಗೆ ವಾರಿಜನೇತ್ರ ಮಯೂರ
ವಾಹನನಿಗೆ ಧೀರಗೆ ಜಯವೆಂದು ಆರತಿ ಅ.ಪ

ವೇದೋಕ್ತ ಮಂತ್ರದಿಂದ ಶರ್ಕರ ಮೊದ-
ಲಾದ ದ್ರವ್ಯದಿಂದ ಸಾಧು ವಂದಿತನಿಗೆ

ಭೂದೇವರಭಿಷೇಕ ಸಾದರದಲಿ ಮಾಡಿ
ಮೋದದಿ ಜಯವೆಂದು ॥ಆರತಿ॥ ೧

ಕಲಶೋದಕ ಮಂತ್ರಿಸಿ ಭೂಸುರರೆಲ್ಲ
ನಲವಿಂದಲಭಿಷೇಕಿಸಿ ತಲೆಗೆ ಗಂಧಾಕ್ಷತೆ
ತುಲಸಿ ಪತ್ರವು ಪುಷ್ಪಗಳ ಮಾಲೆ ಇರಿಸುತ್ತ
ನಲವಿಂದೆ ಜಯವೆಂದು ॥ಆರತಿ॥ ೨

ಧೂಪ ದೀಪಂಗಳನ್ನು ವಿರಚಿಸುತ–
ಲೇ ಪರಮಾನ್ನವನು ಸೂಪಾದಿ ಓಗರ ಜಂ–
ಬೂಫಲ ಭಕ್ಷ್ಯವ ಶ್ರೀಪತಿ ಸಖಿಗೆ ಸ–
ಮಾರ್ಪಿಸಿ ಜಯವೆಂದು ॥ಆರತಿ॥ ೩

ಮೂರು ಪ್ರದಕ್ಷಿಣೆಯ ಭಕ್ತಿಯೊಳ್ ನಮ–
ಸ್ಕಾರವ ಪ್ರಾರ್ಥನೆಯ ಮಾರಾರಿಸುತಗೆ ಅ–
ಪಾರ ಮಹಿಮನಿಗೆ ಹಾರುವರೆಸೆಗುತೊ–
ಯ್ಯಾರದಿ ಜಯವೆಂದು ॥ಆರತಿ॥ ೪

ಮಂಗಳ ಶರಜನಿಗೇ ಗುಹಗೆ ಜಯ
ಮಂಗಲ ಸ್ಕಂಧನಿಗೇ ಮಂಗಲ ಪಾವಂಜೆ
ವಾಸ ಷಡ್ಮಿರನಿಗೆ ಮಂಗಲದಾಸರ
ಕಾವಗೆ ಜಯವೆಂದು ॥ಆರತಿ॥ ೫

## ೨೫೯

ತಾರಕ ದೈತ್ಯನು ಗಾರುಗೆಡಿಸೆ
ಸುರವಾರವು ಬೊಮ್ಮನ ಕೂಡೀ
ಶ್ರೀರಮಾಧವನ ಬಳಿ ಸೇರಿ
ದೂರಿಡಲಾತ ಮಾರಗಾಜ್ಞಾಪಿಸಿ ಕಳುಹೀ
ಘೋರ ತಪದೊಳಿದ್ದ ಮಾರಾರಿಯ

ಬಳಿಸೇರುತ ತನ್ನಯ ನಾರಾಚವೆಸೆಯಲು
ನಾರಿಯ ಮೋಹವು ತೋರೆ ಜನಿಸಿದ
ಕುಮಾರನಿಗಾರತಿಯ ಬೆಳಗಿರೇ ||ಶೋಭಾನೇ|| ೧

ಜನಿಸಿದೇಳನೆ ದಿನದಿ ವನಜಸಂಭವ
ಮುಖ್ಯ ಅನಿಮಿಷರೆಲ್ಲಾರೂ ಪಾದಾ
ವನಜಕಾನತರಾಗಿ ತನುಮನ
ಧನಗಳ ಸನುಮತದಿಂದೊಪ್ಪಿಸುತ್ತಾ-
ಘನಾ ಸೇನಾನಿ ಎಂಬನುಪಮ ಬಿರುದನು
ಇತ್ತು ಪೂಜಿಸಿ ದನುಜನ ಕೃತ್ಯವ
ಮನವರಿಕೆಯ ಮಾಡೆ ಅನುವರಕೆದ್ದ
ಶರಜನಿಗೆ ಆರತಿಯ ಬೆಳಗಿರೇ ||ಶೋಭಾವೇ|| ೨

ಅಸುರನ ಪುರಕೆ ನಾಲ್ದೆಸೆಯಿಂದ
ಮುತ್ತುತ ಪೆಸರಾಂತ ಧೀರರ ಘುರದೀ
ಪೆಸರಿಲ್ಲದಂತೆ ಕತ್ತರಿಸಲು ತಾರಕ ಪಲ್ಲ
ಮಸೆಯುತಲೈತರೆ ಕ್ಷಣದೀ
ಮಸೆದಿಹ ಬಾಣದಿಂದಸುರನ ತನುವನು-
ರಸೆಯೊಳೊರಗಿಸುತ ಪುಷ್ಪಕದಲಿ ಬಂದು
ಪಶುಪತಿ ಪದಕೆ ವಂದಿಸಿದ ಕುಮಾರಗೆ
ಕುಶಲದಾರತಿಯ ಬೆಳಗೀರೆ ||ಶೋಭಾನೇ|| ೩

ದನುಜ ಪದ್ಮನು ಸುರಪನ ಸತಿ
ಶಚಿದೇವಿಯನು ಮೋಹಿಸುವದನು ಕೇಳಿ
ಅನಿಮಿಷರೊಡೆಯ ಕಾನನದೊಳು ಸತಿಸಹ
ಮನದಿ ಧ್ಯಾನಿಸುತಿರುತಿರಲೂ
ಅನಿಮಿಷರೊಡನೆ ಪದ್ಮನಪುರ ಸೇರಲಾ
ತನ ಸುತ ಕೊಳುಗುಳಕನುವಾಗಿ
ಬರೆ ಹಿರಣ್ಯನ ಮಥಿಸುತ ಮೋಕ್ಷಯನು ಇತ್ತ
ಕಾರ್ತಿಕೇಯನಿಗೆ ಆರತಿ ಬೆಳಗಿರೇ ||ಶೋಭಾನೇ|| ೪

ಸುತನ ಮರಣ ಕಂಡು ಖಿಡಿತಿಯಿಂದ
ಬರೆ ದೈತ್ಯಪತಿಗ್ವಿಶ್ವರೂಪವ ತೋರೇ
ಮತಿಹೀನ ದೈತ್ಯನು ನುತಿಸದೆ ಇರುತಿರೆ
ಮಥಿಸಿದನವನನು ಕೂಡೇ
ನುತಿಸುತಿರುವ ದೇವತತಿಗಭಯವನಿತ್ತು
ಕ್ಷಿತಿಯೊಳಿರುವ ದಾಸತತಿಗಳಿಗನುದಿನ
ಹಿತಗೈಯೆ ಪಾವಂಜೆ ಕ್ಷಿತಿಯೊಳ್ ನಿಂತಿಹ
ರಮೆಪತಿ ಸುಖಗಾರತಿಯ ಬೆಳಗೀರೆ ॥ಶೋಭಾನೇ॥ ೫

## ೨೬೦

ಮಂಗಲಂ ಮಂಗಲಂ ಕುಮಾರಗೆ ಮಂಗಲಂ ಪ

ಮಾರಾರಿ ಪುತ್ರಗೆ ಧೀರ ಶರಜನಿಗೆ
ನಾರದಾದಿ ಮುನಿವಾರ ವಂದಿತಗೇ
ಚಾರುಚಂಪಕ ನಾಸ ನೀರಜನೇತ್ರ
ಮಯೂರ ವಾಹನ ಗುಣಸಾರ ಕುಮಾರಗೆ ೧

ಅಂಬುಜ ವದನಗೆ ಅಂಬರ ಮಣಿ
ಪ್ರತಿಬಿಂಬ ತೇಜನಿಗೇ ಶಂಬರಾರಿಯ ರೂಪ
ಕಂಬು ಕಂಧರ ಭಕ್ತರ್ಗಿಂಬ ಕೊಡುವ
ಸುಗುಣಾಂಬುಧಿ ಗುಹನಿಗೆ ೨

ಪಾವನ ಮೂರುತಿ ಪಾವಂಜೆ ವಾಸಗೆ
ಪಾವಕೋದ್ಭವವಲ್ಲಿ ದೇವಿಯರಸಗೇ
ಲಾವಣ್ಯ ನಿಧಿಗಮರಾವಳಿ ಪೂಜ್ಯಗೆ
ಕೋವಿದನಿಗೆ ದಾಸ ಜನರ ರಕ್ಷಕಗೇ ೩

## ಅ. ಗಣಪತಿ ಸರಸ್ವತಿಯರು

### ೨೬೧

ಶ್ರೀ ಗಣನಾಥನಿಗೆ । ಶಾರದಾಂಬಿಕೆಗೆ
ಶ್ರೀ ಗೌರಿ ಭೂದೇವಿ ಶ್ರೀದೇವಿಗೆ ।
ಶ್ರೀ ಗುರು ಮಹಾವಿಷ್ಣು ಬ್ರಹ್ಮರುದ್ರಾದ್ಯರಿಗೆ
ಸಿರಿಚರಣ ಪಂಕಜಗೆ ನಮಿಸಿ ನುತಿಸುವೆನು ೧

ಅಷ್ಟ ದಿಕ್ಪಾಲರಿಗೆ ಶಿಷ್ಯಮರುದ್ಗಣಗಳಿಗೆ
ಅಷ್ಟವಸು ಸಪ್ತಋಷಿ ನವಗ್ರಹಾದ್ಯರಿಗೆ ।
ಶ್ರೇಷ್ಠ ಹನುಮಂತನಿಗೆ ಕನಕಾದಿ ದಾಸರಿಗೆ
ಸೃಷ್ಟಿಯೊಳು ಕವಿಜನಕೆ ಕೈಮುಗಿವೆನು ೨

ವಿಪ್ರಕುಲ ಸಂಜಾತ ಮಯ್ಯೂರ ಮಡಿಪುರದೊ–
ಳಿಪ್ಪ ವೆಂಕಟರಾಯ ಗೋಳೇರ ಸುಕುಮಾರ ।
ಸರ್ಪಶಯನನ ದಾಸ ಗೋವಿಂದನೆಂಬವನು
ಜಲ್ಪಿಸಿಯೆ ವಿರಚಿಸಿದೆನೀ ಕೃತಿಯನು ೩

ಯತಿಗಣ ಪ್ರಾಸ ವಿಷಮಾಕ್ಷರಗಳೊಂದರಿಯೆ
ಕೃತ ದೋಷ ರಾಗ ಲಯ ಭೇದವನು ತಿಳಿಯೆ ।
ಪೃಥುವಿಯೊಳು ಕವಿಗಳಂತಗ್ಗಳನು ನಾನಲ್ಲ
ಅತಿಶಯದ ನ್ಯೂನತೆಯ ಬಲ್ಲ ಶ್ರೀನಲ್ಲ ೪

ತಪ್ಪು ಸಾವಿರವಿರಲು ತಿದ್ದಿ ಬಲ್ಲವರಿದನು
ಒಪ್ಪುವಂದದಿ ಜಗದಿ । ಮೆರೆಸಿ ವಾಚಕರು
ಸರ್ಪಶಯನನ ಕೃಪೆಗೆ ಪಾತ್ರರಾಗುತ ನೀವು
ಕ್ಷಿಪ್ರದಲಿ ಗೋವಿಂದದಾಸನನು ಪರಸಿ ಮನ್ನಿಸುದು ೫

## ೨೬೨

ನಂಬಿದವರಿಗೆ ಇಂಬುದೋರುವ ।
ಲಂಬೋದರ ಗಣನಾಯಕ ಪ

ಶಂಭು ಶಂಕರಸುತನೆ ಭಕ್ತಕುಟುಂಬಿ ವಿಘ್ನನಾಯಕ ಅ.ಪ

ಏಕದಂತ ವಿವೇಕದಾತನೆ । ಲೋಕನಾಥ ಪ್ರಖ್ಯಾತನೆ
ಶೋಕಹರ ಹೇರಂಬ ಗಜಮುಖ
ಕಾಕುಜನ ಸಂಹಾರಕನೆ ಜಯತು ಜಯತು ೧

ಕುಂಕುಮಾಂಕಿತ ದೇವದೇವನೆ । ಕಿಂಕರನ ನುತಿಪಾತ್ರನೆ
ಶಂಕರಿಯ ಸುಕುಮಾರ ಮಧುಪುರ
ಪಂಕಜಾದಳನೇತ್ರನೆ ಜಯತು ಜಯತು ೨

ವಿಘ್ನ ಘನ ಕಾಂತಾರಕ ನಲನೆ । ವಿಘ್ನ ಮೇಘಕೆ ಅನಿಲನೆ
ವಿಘ್ನಕರ ಯಾಮಿನಿಗೆ ಭಾಸ್ಕರ
ವಿಘ್ನ ಸಾಮಜ ಕೇಸರಿ ಜಯತು ಜಯತು ೩

ಗಂಧಚಂದನ ಪುಷ್ಪಫಲಗಳಿಂದ ನಿನ್ನನು ಪೂಜಿಸಿ
ವಂದಿಸುವೆ ನಿನ್ನಂಘ್ರಿ ಕಮಲಕೆ ಸಲಹೊ
ಸಲಹೊ ಗೋವಿಂದದಾಸನ ಜಯತು ಜಯತು ೪

## ೨೬೩

ಪಾಲಿಸು ಗಣನಾಥ ನೀ ಎನ್ನ ಮೇಲೆ ಕೃಪೆಯ ನಿರತ ಪ

ಸ್ಥೂಲ ಶರೀರ ವಿಶಾಲ ಲೋಚನ ಸುರಜಾಲ ವಂದಿತ
ಜಾಲ ವಂದಿತ ಗುಣಶೀಲ ಸಜ್ಜನಪಾಲ ಅ.ಪ

ಮೂಷಿಕವಾಹನನೆ ವಿಘ್ನೇಶ್ವರ ಪಾಶಾಂಕುಶಧರನೆ
ಈಶ ನಂದನ ನಿನ್ನ ದಾಸನೆನಿಸೊ ಎನ್ನ
ಆಸೆಯ ಸಲಿಸು ವಿಘ್ನೇಶ ವಿನಾಯಕ ೧

ಕಾಮಿತಫಲಪ್ರದನೇ ವಿನಾಯಕ ಸ್ವಾಮಿ ಶನೇಶ್ವರನೆ
ಸಾಮಜವದನನೇ ಶ್ಯಾಮಲವರ್ಣನೇ
ಕಾಮವರ್ಜಿತ ಗುಣಸ್ತೋಮ ವಂದಿತನೇ ೨

ಗಿರಿಜೆಯ ವರಸುತನೇ ಲಂಬೋದರ ಉರಗನ ಸುತ್ತಿಹನೇ
ಕರದಿ ಮೋದಕ ಹಸ್ತ ವರ ಏಕದಂತನೆ
ಶರಣು ನಿನಗೆ ಗೋಪಿಂದನ ಸಖನೆ ೩

## ೨೬೪

ಬಾರೋ ವಾರಣವದನಾ ತ್ರೈಲೋಕ್ಯ ಸಮ್ಮೋಹನ
ತೋರೋ ಕಾರುಣ್ಯ ಸದಾನಂದಾ ಪ

ಮಾರಹರನ ಪರಿವಾರಕಧೀಶನೆ
ನಾರಿ ಗಿರಿಜೆ ಸುಕುಮಾರನೆ ಧೀರನೆ ಅ.ಪ

ಪೊಡಮಡುವೆನು ನಿನ್ನಯಾ ಚರಣಕ್ಕೆ ದೇವಾ
ಎಡಬಿಡದೀಗಲೆನ್ನಯಾ
ತೊಡರ್ಕೆ ಅಡವಿಯ ಕಡಿಕಡಿದಡಸುತ
ಕಡುಬಡವಗೆ ತಡವಿಡದ್ವರ ಕೊಡುವಂತೆ ೧

ಝಗಝಗಿಸುವ ಪೀಠದಿ ಮಂಡಿಸಿಕೊಂಡು
ಸೊಗಸೊ ಸಾಗಿ ಊಟದೀ
ಬಗೆಬಗೆ ಭಕ್ಷವ ತೆಗೆತೆಗೆದು ಮೊಗೆವಂತೆ
ಮೃಗದೃಗಯುಗವರ ನಗೆಮೊಗ ಸುಗುಣನೆ ೨

ಫಣಿಶಾಯಿ ಗೋಪಿಂದನಾ ದಾಸರ ಪಂಥ್ಯ
ತ್ರಿನಯನಮೂರ್ತಿ ನಂದನಾ
ಕಣುವಣಿ ನೋಡುವೆ ಮಣಿಗಣ ಭೂಷಣ
ಝಣಝಣ ಕುಣಿಯುತ ಗುಣಮಣಿ ಗಣಪತಿ ೩

## ೨೬೫

ನಾಗರಾಜ ನರಸುರ ನಮಿತೇ ।
ಸಾಗರ ಕರುಣೀ ಸರಸ್ವತೀ ॥
ಕೋಗಿಲ ಗಾನವಿನೋದಿತೇ ಬೇಗನೆ
ವರಗಳ ಕೊಡು ಮಾತೇ ಪ

ಶೃಂಗೇರಿ ಪುರವರ ನಿಲಯೇ ।
ಮಂಗಲಚರಣೆ ಶಾರದೆಯೇ ।
ಭೃಂಗ ಕುಂತಲೆ ಭವ ಭಂಗ ನಿವಾರಿಣಿ ।
ರಂಗನ ಸುತನರ್ಧಾಂಗಿಯೆ ರಕ್ಷಿಸು ೧

ಪುಸ್ತಕ ಹಸ್ತ ಜಗದ್ಧರಿತೇ ಉತ್ತಮಳೆ
ಮಕುಟಾನ್ವಿತದಾತೇ ।
ಪೃಥ್ವಿಪಾಲ ಮನದರ್ಥಿಯ ಸಲಿಸುವ ।
ಸ್ವಸ್ತಿ ಶ್ರೀಮನ್ಮಥನತ್ತಿಗೆ ಶಾರದೆ ೨

ಕುಂದ ಮಂದಾರ ಪುಷ್ಪಗಳ ।
ಚಂದಣ ಕುಂಕುಮ ಗಂಧಂಗಳ
ಮಂದಗಮನೆ ಅರವಿಂದನಯನೆ ಗೋ
ವಿಂದನ ಸೊಸೆಗಾನಂದದೊಳರ್ಚಿಸಿ ೩

## ೨೬೬

### ಸರಸ್ವತಿಸ್ತುತಿ

ಪಾಹಿ ಸರಸ್ವತೇ ಪಾಲಿಸೆನ್ನ ಮಾತೆ ಪ

ಪಾಹಿ ಲೋಕದಾತೇ ಪಾಹಿ ಶೋಕಘಾತೆ
ಪಾಹಿ ಧರ್ಮ ಪ್ರೀತೆ । ಪಾಹಿ ಕರ್ಮರಹಿತೆ ೧

ಪಂಕಜೌಘಕೋಟಿ । ಸಂಕಾಶೆ ಪದ್ಮಾಕ್ಷಿ
ಕಿಂಕರನ್ನ ರಕ್ಷಿಸಂಕದಿ ನಿರೀಕ್ಷಿಸಿ ೨

ಕುಂದಸಮರದನೇ ಮಂದಗಜಗಮನೇ
ಚಂದದಿ ಗೋವಿಂದದಾಸನೊಂದ್ಯಚರಣೆ ३

## ೨೬೭

ಶಾರದಾಂಬೆಯೆ ನಾರಿ ಲಕುಮೀ
ಸಾರಸಾಕ್ಷಿ ಮಹೇಶ್ವರಿ
ಘೋರ ಮಹಿಷಿ ನಿಶುಂಭ ಮರ್ದಿನಿ
ಧೀರ ಚಂಡಮುಂಡಾರ್ದನಿ ಜಯತು ಜಯತೂ ಪ

ಜ್ವಾಲಿನೀ ಅಕ್ಷಾರ ಮಾಲಿನೀ
ನೀಲಕುಂತಳೆ ಭಾರ್ಗವೀ
ಶೂಲಿನೀ ಹರಿಲೋಲೆ ನೀ
ಗುಣಶೀಲೆ ಗಾಯನ ರಾಣಿ ಜಯತು ಜಯತೂ ೧

ವಾರಿಜಾಲಯೆ ವೀಣಾಪಾಣಿಯೇ
ಮಾರಹರನ ಅರ್ಧಾಂಗಿಯೇ
ಕ್ಷೀರಸಾಗರ ಕನ್ಯೆ ಗಿರಿಸುತೆ
ಕೀರವಾಣಿ ಸರಸ್ವತೀ ಜಯತು ಜಯತೂ ೨

ರಮೆಯೆ ರಕ್ಷಿಸು ಉಮೆಯೆ ಪಾಲಿಸು
ಕಮಲಸಂಭವನರಸಿಯೆ
ಅಮಿತ ಮಂಗಲೆ ಅಮರ ದೈವವೆ
ಕಮಲಮುಖಿ ವಾಗ್ದೇವಿಯೆ ಜಯತು ಜಯತೂ ३

ಕರವ ಮುಗಿವೆ ಸ್ಮರಿಸಿ ನಿನ್ನನು
ಶಿರವ ಚಾಚುವೆ ಚರಣಕೆ
ಕರುಣದಲಿ ಗೋವಿಂದದಾಸನ
ಪರಸಿ ರಕ್ಷಿಸಬೇಹುದು ಜಯತು ಜಯತೂ ೪

## ೨೬೮

ಶಾರದೆ ಜಗದ್ಭರಿತೆ ಸರಸ್ವತೆ ॥ ಸಾರ ಸದ್ಗುಣಚರಿತೆ
ವಾರಿಜೋದ್ಭವನ ಪಾದಾರವಿಂದಾರ್ಚಿತೆ ।
ತೋರೆ ದಯವ । ಕೀರವಾಣಿ ಕಲ್ಯಾಣಿಯೆ ॥
ಶುಭಕರೆ ಶುಭವದನೇ ಸರ್ವೇಶ್ವರಿ ।
ಪ್ರಭಾಕರ ಪ್ರಭಾವದನೆ ಪ

ಇಭರಾಜಗಮನೆ । ಸದ್ಬುದ್ಧಿಪ್ರದಾಯಿನಿ ।
ಅಭಯನೀಯುತಲೆನ್ನ । ಸಲಹು ಸ್ತ್ರೀಸಭಾಶೋಭೆ ೧

ತಾಯೆ ಮಯೂರ ವಾಹಿನೀ । ಜಯ ಜಯ ಜಗ–।
ನ್ಮಾಯೆ ಮೋಹನ ರೂಪಿಣೀ ॥
ತೋಯಜ ಕುಸುಮದಳಾಯತಲೋಚನೆ ।
ಕಾಯೇ ದಯದಿ ಭವ ಹೇಯವಿದಾರಿಣಿ ೨

ನೀತೆ ಪರಮಪುನೀತೆ । ಪಾಲಿಸು ಲೋಕ ।
ಮಾತೆ ಪಾವನ ಚರಿತೆ ।
ದಾತೆ ತ್ರಿಲೋಕ । ವಿಖ್ಯಾತೆ ಬ್ರಹ್ಮನ ಪ್ರೀತೆ ಆತ್ಮರಕ್ಷಿಣಿ ।
ಗೋವಿಂದದಾಸನ ಮಾತೆ ೩

## ೨೬೯

ಎನ್ನ ಪಾಲಿಸಯ್ಯಾ ಪನ್ನಗಾಭೂಷಣ ।
ನಿನ್ನ ನಂಬಿದೇನೋ । ನೀಲಕಂಧರನೇ ಪ

ಕಂಡೆ ನಿನ್ನನೀಗ । ರುಂಡಮಾಲಧಾರಿ ।
ದಂಡಧರನ ಮುರಿದ । ಮಾರ್ಕಂಡೇಯಪಾಲ ೧

ಮಾರವೈರಿ ನೀನೆ । ಪಾರ್ವತೀಯ ವರನೇ
ಸಾರಿ ನುತಿಪೆ ನಿನ್ನ ತ್ರಿಪುರಾರಿ ದೇವಾ ೨

ಚಂದ್ರಶೇಖರನೇ । ಗೋವಿಂದನ ಸಖನೆ ।
ನಂದಿವಾಹನನೆ । ಬಂದು ಮುಖವ ತೋರಿ ೩

## ೨೭೦

ಒಂದೇ ಕೂಗಳತೆ । ಕೈಲಾಸಕ್ಕೆ ।
ಒಂದೇ ಕೂಗಳತೆ ಪ

ಬಾಲ ಮಾರ್ಕಾಂಡೇಯ ಕಾಲಪಾಶದಿ ಸಿಕ್ಕಿ ।
ಗೋಳಿಟ್ಟು ಸ್ತುತಿಸಲಾ ನೀಲಕಂಧರನಾ ॥
ಶೂಲಪಾಣಿಯು ಕಲ್ಲ ಲಿಂಗದಿ ಮೈದೋರಿ ।
ಕಾಲನ ಷ ರಿದೆತ್ತಿ । ಬಾಲನ ಸಲಹಿದ ೧

ಶಿವನ ಅರ್ಧ ಪ್ರಹರದಿ ಒಲಿಸಿಕೊಳ್ಳುವೆನೆಂದು ।
ಪವನಾತ್ಮಜನು ಗದೆಯನಂಬರಕ್ಕೆಸೆದು ॥
ಭುವನದಿ ಸ್ತುತಿಸುತ್ತ ಶಿರ ಒಡ್ಡಿ ನಿಂದಿರೆ ।
ತವಕದಿಂದೈತಂದು ಶಿವನು ಭೀಮನ ಕಾಯ್ದ ೨

ಚರರನಟ್ಟಿದನೇ ರತ್ನಾಂಗದ ಶಿವನಿಗೆ ।
ಕರೆಯ ಪೋದನೇ । ಕನ್ಯನೆಂಬ ಚಂಡಾಲ ॥
ಬರದೋಲೆ ಕಳುಹಿಸಿ ಕೊಟ್ಟಾಳೆ ನರ್ಮದೆ ।
ಸ್ಮರಿಸಿದಾಕ್ಷಣ ಗೋವಿಂದನ ಸಖ ಬರುವರೇ ೩

## ೨೭೧

ಕಂಡೆ ಕಂಡೆ ಕೈಲಾಸ ನಿಲಯನ ।
ಕಂಡೆ ಪಾರ್ವತಿಯ ಪ್ರಿಯ ಗಂಡನಾ ॥
ಕಂಡೆ ಕಂಡೆ ಕಾಲಾಗ್ನಿವಿಲಯನ ।
ಕಂಡೆ ಸರ್ವರೋದ್ದಂಡನಾ ಪ

ಅಂಗಜಾಂಗವನು । ಭಂಗಗೈದ ಭವ ।
ಭಂಗ ಹರನ ಭಸ್ಮಾಂಗನಾ ॥
ಮಂಗಳಾಂಗ ಭೂ ।
ತಂಗೊಳೊಡೆಯ ಸುರ । ಗಂಗಾಧರನ ಮಹಾಲಿಂಗನಾ ೧

ಶಂಭು ಶಿವನ ಪಾ । ದಾಂಬುಜಯುಗಳವ ।
ನಂಬಿದೆನಂಬರ ಕೇಶನಾ ॥
ಡಂಬಹರನ ದಿ । ಗಂಬರ ಮೂರ್ತಿಯ ।
ಸಾಂಬ ಚಿದಂಬರ ವಾಸನಾ ೨

ಪಂಚ ತುಂಡ ತ್ರಿ । ಪಂಚನೇತ್ರನಾ ।
ಪಂಚಭೂತಕಧಿನಾಥನಾ ॥
ಪಂಚಲಿಂಗ ಪಂಚಾಕ್ಷರ ಪ್ರೀಯನ ।
ಪಂಚಮೂರ್ತಿಯೊಳು ಖ್ಯಾತನಾ ೩

ನಂದಿಸ್ವಾರಿ ಜಾ । ಲಂಧರಾಂತಕ ।
ಸುಂದರಾಂಗ ಶುಭ ಶೀಲನಾ ॥
ಅಂಧಕಾರಿ ಗೋವಿಂದನ ದಾಸನ ।
ವಂದ್ಯ ಚರಣ ವಿಶಾಲನಾ ೪

## ೨೭೨

ಕರುಣಿಸೆನಗೆ ಶಂಭೋ ಕರುಣಿಸಯ್ಯಾ
ಶರಣಾರಂದದಿ ನಿನ್ನ ಮನದಿರವರಿಯೆನು
ಕರವ ಜೋಡಿಸಿ ದೇವಾ ಚರಣಕೊಂದಿಪೆನು ಪ

ಕ್ಷೋಣಿಯೊಳ್ ಮಾರ್ಕಾಂಡೆಯಂತೆ ಪೂಜಿಸಲಾರೆ
ಮೀನಾಕ್ಷಿಯಂತೆ ಕಾದಿ ಪರಿಸಲಾನರಿಯೇ
ಬಾಣಾಸುರನಂತೆ ತಪಗೈಯ್ಯಲಾರೆ ನಾನು
ರಾವಣನಂತೆ ಸಾಮಗಾನವನರಿಯೇ ೧

ಶಿರದಿ ಚಂದಿರನಂತೆ ಶೋಭಿಸಲಾರೆ ಭಕ್ತಿ
ಸ್ಥಿರವರಿಯೆನು ಭೀಮಸೇನನಂತೆ
ಉರಗನಂದದಿ ಕೊರಳಾಭರಣವಾಗಿರಲಾರೆ
ಗಿರಿಜೆಯಂದದಿ ನೆರೆದು ಮುದ್ದಿಸಲರಿಯೆ ೨

ಮಂದಾಕಿನಿಯಂತೆ ಜಡೆಯಾಲಂಕರಿಸೆನು
ನಂದೀಶನಂತೆ ಪೊತ್ತು ತಿರುಗಾಡಲರಿಯೆ
ಇಂದ್ರನಂದನನಂತೆ ಭರದಿ ಮೆಚ್ಚಿಸಲಾರೆ
ಬಂದೆನ್ನ ಸಲಹೋ ಗೋವಿಂದನ ಸಖನೆ ೩

## ೨೭೩

ಕೈ ಮುಗಿದು ಬೇಡುವೆನು ಕೈಲಾಸವಾಸಾ ॥
ವಹಿಲದಲಿ ಸಲಹೆನ್ನ ಈಶ ಗಿರಿಜೇಶಾ ಪ

ಅಷ್ಟ ಭಾಗ್ಯವು ನೀನೆ । ಇಷ್ಟಮಿತ್ರನು ನೀನೆ ।
ಹುಟ್ಟಿಸಿದ ತಾಯ್ತಂದೆ । ವಿದ್ಯೆ ಗುರು ನೀನೆ ।
ಸೃಷ್ಟಿ ಮೂರಕೆ ನೀನೆ ಅಧ್ಯಕ್ಷನೆನಿಸಿರುವೆ ।
ರಕ್ಷಿಸೆನ್ನನು ಜಟಾಜೂಟ ನಿಟಿಲಾಕ್ಷ ೧

ಮಾಯಾ ಪಾಶದಿ ಸಿಕ್ಕಿ । ಕಾಯ ಸುಖವನು ಬಯಸಿ ।
ಆಯ ತಪ್ಪಿದೆ ಮುಂದುಪಾಯವೇನಿದಕೆ ।
ಜೀಯ ನೀನೆಂದೆಂಬ । ನ್ಯಾಯವರಿಯದೆ ಕೆಟ್ಟೆ ।
ಕಾಯೊ ದಯದಲಿ ಮೃತ್ಯು । ಬಾಯಿಗೊಪ್ಪಿಸದೆ ೨

ಘೋರತರ ಸಂಸಾರ ಸಾಗರದಿ ಮುಳುಮುಳುಗಿ ।
ಕ್ರೂರ ನಕ್ರನ ಬಾಯಿಗಾಹಾರವಾದೆ ।
ದಾರಿಕಾಣದೆ ಬಳಲಿ ಮಾರಹರ ನಿನ್ನಂಘ್ರಿ ।
ಸೇರಿದೆನು ಗೋವಿಂದದಾಸನನು ಸಲಹೋ ೩

## ೨೭೪

ಗೌರೀ ವರ ಶಿವ ನಮೋ ನಮೋ । ಶಿವ ।
ಗೌರೀವರ ಶಿವ ನಮೋ ನಮೋ ।
ಈಶ ಪರಾತ್ಪರ ದೋಷನಿವಾರ ।
ಕಾಶೀಪುರವರವಾಸ ವಿಶ್ವೇಶ್ವರ ೧

ಕರಿಚರ್ಮಾಂಬರ ಕರುಣಾಕರ ।
ಸ್ಮರಿಸಲು ಸರ್ವರ ದುರಿತ ನಿವಾರ ೨

ಭಸ್ಮಾಲೇಪನ ಶಶಿಶೇಖರ
ವೃಷಭವಾಹನ ಸ್ಮಶಾನ ಸಂಚಾರ ೩

ಸುರ ಗಂಗಾಧರ । ನರರುಂಡಮಾಲಾ ।
ಕರದಿ ತ್ರಿಶೂಲವು ಉರಗಕುಂಡಲ ೪

ಜಟಾಮಕುಟ ನೀಲಕಂಠೇಶ್ವರಾ ।
ಅಡವಿಯೊಳ್ ಕೈರಾತ ನಟನ ಶಂಕರ ೫

ಷಣ್ಮುಖ ಭೈರವ ಭೃಂಗಿ ಪ್ರಮಥ ।
ಗಣನಾಥ ವೀರಭದ್ರ । ನಂದಿವಂದಿತ ೬

ಮಂದರಧರ ಗೋವಿಂದನ ಸಖನೆ ।
ವಂದಿಪೆ ದಾಸನ ಪಾಲಿಸು ಶಿವನೆ ೭

## ೨೭೫

ಪಾಲಿಸು ಪರಮೇಶಾ ಪಾಪವಿನಾಶಾ
ಪಾಲಿಸು ಪಾರ್ವತೀಶಾ
ಫಾಲಲೋಚನ ಫಣಿಭೂಷಣ ನತಜನ
ಪಾಲನೆ ಪಾಪವಿಹಾರಣ ಕಾರಣ ಪ

ನಿತ್ಯ ನಿರ್ಮಲ ಚಿತ್ತನೀಕ್ಷಿಸೋ ಎನ್ನ
ನಿತ್ಯ ತೃಪ್ತನೆ ಖ್ಯಾತ ನಿತ್ಯನಂದನೆ ನೀಲ
ಕಂಧರ ಶಶಿಧರ ನಿರ್ಮಲ
ರಜತಾದ್ರಿ ನಿಲಯನೆ ವಿಲಯನೆ ೧

ಅಂಬಾ ವರದೇವ ಜಯ ಜಯ ವಿಶ್ವ ಕು–
ಟುಂಬಿಲ ಸದ್ಭಾವ
ಲಂಬೋದರ ಗುಹಜನಕ ಸದಾಶಿವ
ನಂಬಿದೆ ಸಲಹೊ ಪ್ರಸೀತ ಸತ್ಪಾತ್ರ ೨

ಆಗಮ ಶ್ರುತಿಸಾರ ಭಕ್ತರ ಭವ
ರೋಗ ಶೋಕ ವಿದೂರ
ಯೋಗಿಗಳ ಹೃದಯ ಸಂಚಾರನೆ ಭವಬಂಧ
ನೀಗಿಸು ಗೋವಿಂದ ದಾಸನ ಪೋಷನೆ ೩

## ೨೭೬

ಪಾಲಿಸು ಲೋಕನಾಯಕನೆ ಗುಣ
ಶೀಲ ಶಂಕರ ಗಂಗಾಧರನೆ
ಫಾಲಲೋಚನ ಘೋರ ಕಾಲಭಯ ವಿದೂರ
ನೀಲಕಂಠೇಶ್ವರನೇ ಭಕ್ತರ ಕಾವ
ಬಾಲ ಚಂದಿರಧರನೇ ಪ

ನಂಬಿದ ಮುನಿಬಾಲನ ಪೊರೆಯುವನೆ ನರರ
ರುಂಡಮಾಲೆಯ ಧರಿಸಿದ ಶೂಲಪಾಣಿಯೆ
ನಿನ್ನ ಮಹಿಮೆಯ ಪೇಳುವರೆ ಪಾತಾಳಲೋಕದ
[illegible] ನಾಲಗೆಯುಳ್ಳ ಸಹಸ್ರ ಕಪಾಲ
ಶೇಷಗೆಗಿಂತು ಸಾಧ್ಯವೇ ೧

ಉರಗ ಕುಂಡಲಧರ ರಜತಾದ್ರಿ ಗಿರಿವರ
ಕರಿ ಚರ್ಮಾಂಬರಧರನೇ ಮುಕ್ತಿಯನೀವ

ಪರಮೇಶ ಗುಣಕರನೇ ರಾಮನ ರಾಣಿ–
ಗಿರವ ತೋರಿಸಿದವನೇ
ಕಾಮನ ಕಣ್ಣ ಉರಿಯೊಳು ದಹಿಸಿದ
ಕರುಣನಿಧಿ ಕೈಲಾಸದಲೀ ಸ್ಥಿರದಿ ನೆಲಸಿದ
ನಿನ್ನ ಚರಣವ ಸುರರು ನರದಾನವರು ಭಜಿಸಲು
ವರವನಿತಾ ತೆರದೊಳೆನ್ನನು ೨

ಒಂದಿನ ಸುಖವಿಲ್ಲ ಬಂಧು ಬಾಂಧವರಿಲ್ಲ
ನಂದಿವಾಹನ ದೇವನೆ
ನಿನ್ನಯ ಪಾದಕೊಂದಿಸುವೆನು ಶಿವನೆ
ಎನ್ನೊಳು ಬಂದು ಪಾಲಿಸು ಪರಮೇಶನೆ
ಭೀಮನಿಗಂದು ವರವಿತ್ತು ಮೆರೆಸಿದೆ
ಇಂದ್ರಸುತನಿಗೆ ವನದಿ ನೀನತಿ
ಚಂದದಲಿ ಶರ ಒಂದ ಪಾಲಿಸಿ
ದಂದು ಕುರುಕುಲ ವೃಂದವನು ಗೋವಿಂದ
ಸಾರಥಿಯಾಗಿ ಕೊಂದನು ಚಂದ್ರಧರನೇ ೩

## ೨೭೭

ಪಾಲಿಸೈ ಪರಮೇಶ್ವರ । ಕ–।
ಪಾಲ ಲೋಚನ ಶಂಕರಾ ॥
ನೀಲ ಕಂಧರ ಶಶಿಧರಾ ತ್ರಿ–।
ಶೂಲಪಾಣಿ ಮಹೇಶ್ವರ ೧

ದಂಡಧರ ಶಿರಖಂಡನಾ । ಬ್ರ –।
ಹ್ಮಾಂಡಪತಿ ಪಂಚತುಂಡನಾ ॥
ಖಂಡ ಪರಶು ಪ್ರಚಂಡನಾ । ಈಗ ।
ಕಂಡೆ ನಾ ರುಂಡಮಾಲನಾ ೨

ಉರಗ ಕುಂಡಲಧಾರನೇ । ಭವ ।
ದುರಿತ ಘೋರ ವಿಹಾರನೇ ॥

ಶರಧಿ ಸಮ ಗಂಭೀರನೇ । ನಿನ –।
ಗೆರಗುವೆನು ಪರಮೇಶನೇ ३

ದೂತನಾಥ ತ್ರಿಲೋಚನಾ । ಪುರು – ।
ಹೂತವಂದ್ಯಾ ಸುಖ್ಯಾತನಾ ॥
ಆರ್ತರಕ್ಷಕ ದೇವನಾ । ಬಲು ।
ಪ್ರೀತಿಯೊಳು ನಂಬಿರ್ದೆನಾ ೪

ಚಂದ್ರಕೋಟಿ ಪ್ರಕಾಶನೇ । ಪೂ –।
ರ್ಣೇಂದು ಮುಖಿ ಗಿರಿಜೇಶನೆ ॥
ಅಂಧಕಾಸುರ ನಾಶನೇ । ಗೋ– ।
ವಿಂದ ದಾಸನ ಪೋಷನೇ ॥ಪಾಲಿಸೈ॥ ೫

## ೨೭೮

ಪಾಹಿಮಾಂ ಪರಮೇಶ ಪುರಹರ ಪಾಹಿ ಪನ್ನಗಭೂಷಣಾ ।
ಪಾಹಿಮಾಂ ಗಿರಿಜೇಶ ಸುರವರ ಪಾಹಿ ಕ್ಷನ್ನಘನಾಶನಾ ೧

ಪಾಲಯಂಫಾಲಾಕ್ಷ ಸಜ್ಜನಪಾಲ ಶಂಭು ಮಹೇಶ್ವರಾ ।
ಪಾಲಯಂ ಪಂಚಾಸ್ಯ ದುರ್ಜನಕಾಲ ಅಂಬಮನೋಹರಾ ೨

ಮಾಯಮಂ ಬೆರಸೀರ್ಪುದೆನ್ನಯ ಕಾಯದೊಳ್ ಶಶಿಶೇಖರಾ ।
ಪಾಯಮಂ ಇದಕರಿಯೆ ನಿನ್ನಯ ಸಹಾಯ ಕೊಡು
ವಿಷಕಂಧರಾ ३

ನಂದಿಯನೇರುತ್ತ ಭುವನಾನಂದದಲಿ ಸಂಚರಿಪನೇ ।
ಬಂಧಮಂ ಬಿಡಿಸೆಂಬೆ ಶಿವ ಗೋವಿಂದದಾಸನ
ಪೊರೆವೆನೆ ॥ಪಾಹಿಮಾಂ॥ ೪

## ೨೭೯

ಫಾಲಲೋಚನೆ ನನ್ನ ಪಾಲಿಸೆಂದಿಗು ಎನ್ನ
ಪಾಹಿ ಪಾರ್ವತಿ ರಮಣ ಪಾವನ ಚರಣ
ಪಾಪನಾತ್ಮಕ ಘನ್ನ ಪಾಪ ನಿವಾರಣ
ಪಾಹಿ ಪನ್ನಗಭೂಷಣ ಪಂಚಾನನ ಪ

ಅಂಬುಜೋದ್ಭವನು ತಾ ಅಮರಪೂಜಿತ ವಂದ್ಯ
ಅಮಿತ ಮಂಗಲ ರೂಪನೆ ಆಶ್ರಿತದಾತ
ಅಂಬರ ಕೇಶಿ ಚಿದಂಬರವಾಸನೆ
ಅಗಣಿತ ಗುಣ ಮಹಿಮ ಅಂಗಜ ಭಂಗ ೧

ನಿಗಮಗೋಚರ ನೀನೆ ನೀಲಕಂಧರ ನೀನೆ
ನಿರತ ನಂಬಿದೆ ನಿನ್ನನ್ನೆ ನಿಶ್ಚಲನೆ
ನಿತ್ಯಾನಂದನು ನೀನೆ ನಿತ್ಯ ತೃಪ್ತನು ನೀನೆ
ನಿತ್ಯ ನಿರ್ಮಲ ರೂಪನೆ ೨

ತ್ರಿಪುರ ಸಂಹಾರನೆ ತ್ರಿಜಗ ಸಂಚಾರನೆ
ತ್ರಿಯಂಬಕನೆ ಶಿವನೆ ತ್ರಿನೇತ್ರನೆ
ತ್ರಿಮೂರ್ತಿಗಳ ಖ್ಯಾತ ತ್ರಿಶೂಲಧಾರನೆ
ತ್ರಿಗುಣಾತ್ಮಕ ಗೋವಿಂದನಾ ದಾಸನವಂದ್ಯ ೩

## ೨೮೦

ಬಾ ಬಾರೋ ಬೇಗ ಬಾರೋ ಶಿವಶಂಕರ ಪ

ಬಾರೋ ಶಿವಶಂಕರಾ ಬಾರೋ ಶಶಿಶೇಖರಾ ಅ.ಪ

ಘೋರದುರಿತ ಪಾರ ಶುಭಾಕಾರ ದಯಾಸಾಗರ
ದಯಾಸಾಗರ ಶೂರ ಗಿರಿಜೇಶ್ವರಾ ೧

ನೀಲಲೋಹಿತಾಲಿಸೆಂದು ಬಾಲನಾ ವಾಗ್ವೊಲವನು
ಬಾಲನಾ ವಾಗ್ವೊಲವನೂ ಕಾಲನೆಮ್ಮನೆಳೆವನೂ ಬಾ ಬಾ ೨

ರಜತಗಿರಿವಾಸ ಜಗದೀಶ ಗೋವಿಂದದಾಸನಾ
ಈಶ ಗೋವಿಂದದಾಸನಾ ಪೋಷ ಫಣೀಂದು ಪಣಾ ೩

## ೨೮೧

ಯಾವ ಭಯವು ನಮಗೆ ।
ಶಂಕರ ದೇವನೊಲಿದು ಕಡೆಗೆ ಪ

ಸಾವಧಾನದಿ ಸರ್ವಭಕ್ತ ಜನರ ಕಾವ ।
ದೇವ ದೇವೇಶ ಸರ್ವೇಶ ನೀನೊಲಿದರೆ ಅಪ

ದುರಿತದ ಭಯವೇನಲೇ । ಶಂಕರ ನಿನ್ನ ।
ಸ್ಮರಿಸಲು ದೂರವಲೇ ।
ಮರಣದ ಭಯವೆನೆ । ಅಂತಕಾಂತಕ ನೀನು ॥
ಉರಗನ ಭಯವೆನೆ । ಗರಳಕಂಧರನೂ ೧

ಚೋರರ ಭಯವೇನೂ । ದಧಿಘೃತ ।
ಚೋರ ನಿನ್ನಯ ಸಖನೂ ॥
ನಾರೀ ಚೋರನ ದೇವ । ಧೀರಕ್ಕೈರಾತನೀ ।
ಘೋರ ರಕ್ಕಸರೆನೆ । ತ್ರಿಪುರಸಂಹಾರ ೨

ಮೃಗ ಪಕ್ಷಿ ಭಯವೇನಲೇ । ಸತಿ ಸುತ ಸಖ ।
ಖಗ ಮೃಗವೇರ್ದರಲೇ ।
ಜಗದೊಡತಿಯು ಲಕ್ಷ್ಮೀಗಗ್ರಜನೆನಿಸಿಹೆ ॥
ಭಗಪೀಠನು ಧನ । ಮಾನಾಭಿಮಾನಕೇ ೩

ವಸನಕ್ಕೆ ಚರ್ಮಾಂಬರನೂ ।
ಸಂಸಾರವೆಂಬ ವ್ಯಸನಕೆ ದಿಗಂಬರನೂ ॥

ತೃಷೆಗೆ ಗಂಗಾಧರ । ಅಶನಕ್ಕೆ ಬಿಕ್ಷುಕನೀ ।
ಅಂಗ ಶೃಂಗಾರಕೆ । ಭಸ್ಮಲೇಪನನೂ ೪

ಪೊಗಳಲಳವೇ ನಿನ್ನಾ । ಮಹೇಶ್ವರ ।
ಜಗದಿ ಭಕ್ತರ ಸಂಪನ್ನಾ ॥
ಭೃಗುಲಾಂಛನಧರ ಗೋವಿಂದದಾಸನ ।
ಹಗಲಿರುಳೆನ್ನದೆ ಪೊರೆಯೋ ಮಹಾದೇವ ೫

## ೨೮೨

ಲೇಸ ಪಾಲಿಸು ಜಗದೀಶನೆ ದಯದಿ ।
ದೋಷರಹಿತ ಪರಮೇಶನೆ ಮುದದಿ ಪ

ದಾಸ ಜನರ ಮನದಾಸೆಯ ಸಲಿಸುವ ।
ಸಾಸಿರ ನಾಮ ಸರ್ವೇಶ ಶ್ರೀಶಂಕರ ಅ.ಪ

ಕಾಮ ವ್ಯಾಮೋಹ ಮದಾಂಧಕಾರವು ಬಂದು
ಪ್ರೇಮದಿ ನಿನ್ನನು ಭಜಿಸಲು ಬಿಡದೂ ।
ಕಾಮಹರನೆ ಕಾಯೋ ಕಾಮಿತಾರ್ಥವನಿತ್ತು ।
ಪ್ರೇಮ ಗಿರಿಜಾರಮಣ ।
ಸೋಮಶೇಖರ ನಿನ್ನ ಲೇಸ ಪಾಲಿಸು ೧

ಫಾಲಲೋಚನ ಭವ । ಭಾರ ನಿವಾರಣ ।
ಶೂಲಪಾಣಿಯೆ ಮುನಿ ಜಾಲ ಸಂರಕ್ಷಣ ।
ಮಹಾಲಿಂಗೇಶನೆ । ಭಕ್ತಪಾಲಕನೆಂಬುವ ।
ಮೂಲ ಚರಿತ್ರವ ಕೇಳಿ ಬಂದೆನು ದೇವಾ ೨

ಹಿಂದೆ ಮಾರ್ಕಾಂಡೇಯ ಮುನಿವರ ನಿನ್ನನು ।
ಚಂದದಿ ಪೂಜಿಸಿ ಒಲಿಸಲಾ ಯಮನೂ ।
ಬಂದು ಪಾಶವ ಕೊರಳ ಸಂದಿನೋಳ್ ಸೇರಿಸ– ।
ಲಂದು ಮೈದೋರಿ ಗೋವಿಂದಸಖ ನೀ ಕಾಯ್ದೆ ೩

## ೨೮೩

ವೀರಭದ್ರೇಶ್ವರನೆ ಪಾಲಿಸು ನಮಸ್ಕಾರವ ಗೈಯುವೆನೆ ಪ

ಘೋರ ಶರೀರನೆ ಧೀರನೆ ಶೂರನೆ
ಕ್ರೂರ ಖಡುಗಧಾರಿ ತುರಗ ಸವಾರಿಯೆ ಅ.ಪ

ರುದ್ರ ರೌದ್ರಾವತಾರ ಚಿತೆಯೊಳಂದು
ಉದ್ಭವಿಸಿದ ವೀರ–
ಭದ್ರ ಶರೀರ ಕೆರಳ್ದ ಲೋಚನಾಕಾರ
ಊರ್ಧ್ವ ದೇಶಾನ್ವಿತ ಸಮುದ್ರ ಸಾಹಸಿಯೆ ೧

ಮಣಿಮಯ ಭೂಷಣನೇ ತೋರುವೆ
ಘೋರ ಫಣಿ ಫಣಿ ನಾದವನೇ
ಕುಣಿಯುವ ಕೂಗುವ ಭೂತಗಣದ ಸಂದಣಿ ಸೇರಿ
ತ್ರಿನಯನಾಜ್ಞೆಯ ತಾಳ್ದು ಧರಣಿಗೆ ನಡೆತಂದ ೨

ದಕ್ಷಾಧ್ವರ ಹರನೇ ಕ್ರೋಧದಿ ಕ್ರೂರ
ದಕ್ಷನ ಮುರಿದವನೇ
ಸೃಷ್ಟಿ ಪಾಲಕ ಭಗನಕ್ಷಿಯ ಕೀಳಿಸಿ
ದುಷ್ಟ ಪೊಷನದಂತ .... ಸೃಷ್ಟಿಗುರುಳಿಸಿದಾ ೩

ಪಾದೇಮಠದ ಪುರದೀ ನೆಲಸಿದೆ ಬಂದು
ಸಾಧು ಜನರ ಪೊರೆದೆ
ಆದಿಮೂರುತಿ ಗೋವಿಂದನ ದಾಸನ
ಆಧರಿಸೈ ಕರುಣೋದಯ ಮೂರುತಿ ೪

## ೨೮೪

ಶಂಕರ ಶಂಭು ಮಹೇಶ ದಿಗಂಬರ ।
ಕಿಂಕರನುತಿಪಾತ್ರಾ ॥ ಸತ್ಪಾತ್ರಾ ॥

ಶಂಕರ ಅಂಬಾ ಮನೋಹರ ಶುಭಕರ
ವೆಂಕಟಪತಿಮಿತ್ರಾ । ವಿಚಿತ್ರಾ ೧

ನಿತ್ಯಾನಂದ ನಿರಾಮಯ ನಿರುಪಮ ।
ಮೃತ್ಯುಂಜಯ ಮೂರ್ತಿ ॥ ಸುಮೂರ್ತಿ ॥
ನಿತ್ಯತೃಪ್ತ ನಿರಾಶ್ರಯ ನಿರ್ಮಲ ।
ಸತ್ಯಂ ಜಯಕೀರ್ತಿ । ಸುಕೀರ್ತಿ ೨

ಹಿಮಕರ ಶೈಲ ನಿವಾಸ ಸುರಾಸುರ ।
ನಮಿತ ಶೋಕಹಾರೀ ॥ಉದಾರಿ॥
ಪ್ರಮಥಾಧಿಪ ಪರಮೇಶ ಪರಾತ್ಪರ ।
ಡಮರು ಬಾಲಧಾರಿ । ಪುರಾರಿ ೩

ಚಂದಿರಧರ ಅಘವೃಂದ ವಿನಾಶನ ।
ವಂದಿಸುವೆನು ದೇವಾ ॥ ಮಹದೇವಾ ॥
ಮಂದರಧರ ಗೋವಿಂದನ ದಾಸಗೆ ।
ಚಂದದಿ ವರವೀವಾ । ಸಂಜೀವಾ ೪

## ೨೮೫

ಶಂಭೋ ಶಂಕರ ಶೈಮಿನಿ ಪತಿಹರ ।
ಅಂಬಾವರನೆ ತ್ರಿಯಂಬಕ ಪಾಹೀ ॥
ಲಂಬೋದರ ಗುಹಜನಕ ಸದಾಶಿವ ।
ಸಾಂಬ ಮಹೇಶ ದಿಗಂಬರ ಪಾಹೀ ೧

ನೀಲಗ್ರೀವ ಬಿಲೇಶಯ ಭೂಷಣ ।
ಫಾಲಾನಮನ ತ್ರಿಶೂಲಿಯೇ ಪಾಹಿ ॥
ಕಾಲಾಕಾಲ ಕಪಾಲಧರನೆ ಗಣ– ।
ಜಾಲ ನಮಿತ ಗುಣಶೀಲನೆ ಪಾಹೀ ೨

ಮಂದಾಕಿನಿ ಧರ ಸುಂದರ ಶುಭಕರ ।
ಚಂದಿರಾ ಶೇಖರ । ಪಶುಪತೇ ಪಾಹೀ ॥
ಅಂಧಕ ರಿಪು ಗೋವಿಂದದಾಸನ ಪ್ರಿಯ ।
ನಂದಿವಾಹನ ನಿನಗೊಂದಿಪೆ ಪಾಹೀ ೩

## ೨೮೬

ಶಂಭೋ ಶಿವ ಶಂಕರಾ । ಮಹೇಶ್ವರ ॥
ಶಂಭೋ । ಶಿವ ಶಂಕರ ಪ

ಶಂಭು ಮಹೇಶ್ವರ । ಅಂಬಾಮನೋಹರ
ನಂಬಿದವರ ಕಾಯ್ವ । ಸಾಂಬ ದಿಗಂಬರ ೧

ನೀಲಕಂಧರ ವರ । ಬಾಲಚಂದಿರಧರ ॥
ಫಾಲಲೋಚನ ರುಂಡಮಾಲಾಕಾಲನಕಾಲ ॥
ಅಂಧಕಾಸುರ ಹರ । ಮಂದಾಕಿನಿಧರ ॥
ನಂದಿ ಸವಾರ ಗೋವಿಂದ ದಾಸವಂದ್ಯ ೨

## ೨೮೭

ಶರಣು ಮಂಜುನಾಥಾ । ಪಾಲಿಸು ॥ ಶರಣ ಜನರ ಪ್ರೀತಾ ॥
ಮರೆಯದೆ ನಿನ್ನಯ ಚರಣವ ನಂಬಿದ ।
ತರಳನ ಮೇಲ್ ದಯವಿರಿಸೈ ಜಯ ಜಯ ೧

ಧರ್ಮಾಧರ್ಮವನೂ ಶೋಧಿಪ । ಧರ್ಮದೇವ ನೀನು ॥
ಧರ್ಮ ಸುಕರ್ಮದ ಮರ್ಮವನರಿಯುತಾ ॥
ಧರ್ಮಸ್ಥಳದಲಿ ನೆಲಸಿದೆ ಜಯ ಜಯ ೨

ಕಪ್ಪ ಕಾಣಿಕೆಗಳನೂ । ದಿನ ದಿನ ತಪ್ಪದೆ ತರಿಸುವನೂ ॥
ಸರ್ಪಧರನೆ ನಿನ್ನಪ್ಪಣೆಯಿಂದಣ್ಣಪ್ಪನು ನರರನು –
ಒಪ್ಪಿಸಿ ಜಯ ಜಯ ೩

ದುಷ್ಟ ಜನರು ಬರಿದೇ । ಕೊಡುತಿಹ । ಕಷ್ಟವ ನಿನಗೊರೆದೇ ।
ಸೃಷ್ಟಿಪಾಲ ಯನ್ನ ರಕ್ಷಿಸಬೇಹುದು ।
ಕೆಟ್ಟೆನಯ್ಯಾ ನಿಟಿಲಾಕ್ಷನೆ ಜಯ ಜಯ ೪

ಚಂದ್ರಧರನೆ ಕಾಯೋ । ಕರುಣಾ–॥
ನಂದ ವರವನೀಯೋ
ಮಂದರಧರ ಗೋ।ವಿಂದದಾಸನನಿಂದು ।
ಚಂದದಿ ಪಾಲಿಸು । ವಂದಿಪೆ ಜಯ ಜಯ ೫

## ೨೮೮

ಶಿವ ಶಂಭೋ ಶಂಕರಾ । ಶಿವ ಸೋಮಶೇಖರಾ ।
ಶಿವನೆ ಗಂಗಾಧರ । ಶಿವ ಗೌರೀವರ ।
ಶಿವ ಚರ್ಮಾಂಬರ । ಶಿವ ಭವ ಭಯಹರ ೧

ಶಿವ ನೀಲಕಂಧರಾ । ಶಿವಕಾಲಾ ಸಂಹರಾ ।
ಶಿವನೇ ಜಟಾಧರ । ಶಿವ ರಜತೇಶ್ವರ ।
ಶಿವ ಶೂಲಾಧರ । ಶಿವನಿಗೆ ಶಿರ ಸರ ೨

ಶಿವ ಭಸ್ಮಾಲೇಪನಾ । ಶಿವ ವೃಷಭ ವಾಹನಾ ।
ಶಿವ ಫಣಿಭೂಷಣ ಶಿವಗೆ ತ್ರಿಲೋಚನ ।
ಶಿವ ಗೋವಿಂದನ । ಶಿವ ದಾಸರ ಪ್ರಿಯಾ ೩

## ೨೮೯

ಸ್ಥಾಣು ಮಹೇಶ್ವರ ತ್ರಿನಯನ ॥ಶಂಕರ॥
ಮಾಣದೆ ಸಲಹೋ ರುದ್ರಾಣಿ ಮನೋಹರ ಪ

ಪೂರ್ಣ ಕೃಪೆಯೊಳ್ ನಿನ್ನ । ಶರಣನೆಂದೆನಿಸೆನ್ನ ಅ

ಬಾಣನಿಗೊಲಿದಾತಣ್ಣದಿರನಿಶೇಖರ ।
ಭೂತನಾಥನೆ ಭವ । ಭೀತಿವಿನಾಶನೆ ।
ಪಾತಕಹರಸುರ । ವ್ರಾತಾನಮಿತನೆ ಅ

ಭೂತಳದೊಳಗೆ ಸರ್ವಾರ್ಥರಕ್ಷಕನೆಂದು ।
ಖ್ಯಾತಿಯ ತಳೆದ ಕಾತ್ಯಾಯನಿ ರಮಣಾ ೧

ರುದ್ರಚಮಕಗಳಿಂದಲಭಿಷೇಕವಗೈದು ।
ಶ್ರದ್ಧೆಯೊಳರ್ಚಿಸಲಾರೇ । ಪತ್ರೆಯ ಕೊಯ್ದು ।
ರುದ್ರಾಕ್ಷಿಯು ಭಸ್ಮಲೇಪನ ಧರಿಸುತ ।
ಪ್ರದೋಷದ ವ್ರತವರಿಯೆನ್ನುದ್ಧರಿಸೊ ೨

ಸುಗುಣ ಶರಧಿ ಲಿಂಗಪೂಜೆ ವಿನೋದಿತ ।
ಮೃಗದ ನೆವದಿ ಪಾರ್ಥಗೊಲಿದ ಕೈರಾತ ।
ಜಗದೀಶ್ವರನೆ ಗೋವಿಂದನ ಸಖ ನಿನ್ನ ।
ಮೊಗವ ತೋರಿಸು ದಾಸಗೊಲಿದು ನೀ ದಯದಿ ೩

## ೨೯೦

ಪೊರೆಯೊ ಶಂಕರಾ । ಕರುಣಾ ಸಾಗರ ।
ದುರಿತ ಸಂಹರ । ಶಿವೆ ಮನೋಹರ ಪ

ಕರಿ ಚರ್ಮಾಂಬರ । ಪೊರೆ ದಿಗಂಬರ ॥
ಗರಳಕಂಧರ । ಚಂದ್ರಶೇಖರ ೧

ನಿಟಿಲ ನೇತ್ರನೆ । ಜಟಾಧಾರನೆ ।
ನಟ ಮಹೇಶನೇ । ಸ್ಮರಿಪೆ ನಿನ್ನನೆ ೨

ವೃಷಭವಾಹನಾ । ಭಸ್ಮಲೇಪನ ।
ಪಶುಪತೀಶನಾ । ನುತಿಸೋ ಅನುದಿನ ೩

ಉರಗ ಕುಂಡಲ । ನರ ರುಂಡಮಾಲ ।
ಕರದೊಳ್ ತ್ರಿಶೂಲ । ಕೈಲಾಸ ಗಿರಿಪಾಲ ೪

ಅಂಧಕ ಗಜಾಸುರರೆಂದೆಂಬ ದುರುಳರ ।
ಹೊಂದಿಸಿ ತ್ರಿಪುರರ । ಜಗದಿ ಮೆರೆದನೀಶ್ವರ ೫

ದೇವ ದೇವೇಶನಾ । ಸೇವಿಸುತಿರೆ ಮನ ।
ಕಾಯ್ವನನುದಿನ । ಗೋವಿಂದದಾಸನ ೬

## ೨೯೧

ಪಾಹಿ ಪಾರ್ವತೇ । ಪಾಲಿಸೆನ್ನ ಮಾತೇ ಪ

ಪಾಹಿ ಲೋಕಭರಿತೇ । ಪಾಹಿ ಸುಗುಣ ಚರಿತೆ ॥
ಪಾಹಿ ಸುಂದರ ಖ್ಯಾತೆ । ಪಾಹಿ ಶಂಭು ಪ್ರೀತೆ ೧

ದೇವಿ ನಿನ್ನ ಪಾದ । ಸೇವೆಮಾಳ್ಪ ಮೋದ– ।
ನೀವುದೆನಗೆ ಸದಾ । ಮನ್ನಿಳೆ [?] ೨

ನಾರದಾದಿ ವಂದ್ಯೆ ವಾರಿಜಾ ಸುಗಂಧೆ
ಗೋವಿಂದದಾಸನ । ಪಾಲಿಸಂಬಾದೇವಿ ೩.

## ೨೯೨

ಪಾರ್ವತಿ ಜಗದ್ಭರಿತೇ ಮಹೇಶ್ವರಿ ।
ಶರ್ವನಂಗನೆ ಖ್ಯಾತೆ ಪ

ಸರ್ವ ಸ್ವತಂತ್ರೆ ಶರ್ವಾಣಿ ಕಾಳಾಹಿವೇಣಿ ।
ಸರ್ವಜನರ ಮದ । ಗರ್ವ ನಿವಾರಿಣಿ ಅ.ಪ

ಸೃಷ್ಟಿಪಾಲಿನಿ ಗೌರೀ ಸರ್ವೇಶ್ವರಿ ।
ದುಷ್ಟಮರ್ದನ ಕಾರಿ ।
ಇಷ್ಟದಾಯಕಿ ಭವಕಷ್ಟ ನಿವಾರಿಣಿ
ಶಿಷ್ಟಪಾಲಿನಿ ಬೆಟ್ಟದ ಕಲಿಗೆ ಭವಾನಿಯೆ ೧

ಅಘನಾಶಿನಿ ದೇವೀ ಕಾತ್ಯಾಯಿನಿ ।
ಸುಗುಣರ ಸಂಜೀವಿ ।
ನಗೆಮೊಗವನು ತೋರಿ । ಸುಗುಣನೆಂದಿನಿಸೆನ್ನ ।
ಅಗಲಬೇಡವೋ ತಾಯೇ ಮುಗಿವೆನು ಕರವಾ ೨

ಪರಮ ಪಾವನೆ ನಿನ್ನಾ । ಭಕ್ತಿಯೊಳೀಗಾ ।
ಸ್ಮರಿಸಲರಿಯೆ ಮುನ್ನಾ । ತರಳ ಷಣ್ಮುಖನಂತೆ ।
ಪರಸಿ ರಕ್ಷಿಸೆ ಎನ್ನ । ಭರದಿ ಗೋವಿಂದನ
ದಾಸನಿಗೊಲಿದು ॥ಪಾರ್ವತಿ॥ ೩

## ೨೯೩

ಸುರತಟನೀಧರನರಸೀ । ಪೊರೆ ಪಾರ್ವತಿ ದೇವಿಯೇ ।
ಕರುಣಾಕರೇ ದುರಿತಹರೇ । ಶರಣರ ಸಂಜೀವಿಯೆ ೧

ಕಂಕಣಕರೆ ಕುಂಕುಮಧರೆ । ಪಂಕಜದಳ ನೇತ್ರೆಯೆ ।
ಶಂಕರಿ ಭವಬಿಂಕಹರೇ । ಕಿಂಕರನುತಿ ಪಾತ್ರೆಯೇ ೨

ಚಂಡಿಯೆ ಚಾಮುಂಡಿಯೇ । ಪ್ರಚಂಡಿಯೆ ಓಂಕಾರಿಯೆ ।
ಚಂಡನ ಖಳಮುಂಡನ ಶಿರಖಂಡನೆ ಹ್ರೀಂಕಾರಿಯೇ ೩

ಜ್ವಾಲಿನಿ ಮಹಮಾಲಿನಿ ದಯೇ । ಶೀಲೆ ನೀ ಶರ್ವಾಣಿಯೆ ।
ಕಾಳಿನಿ ಮಹಾ ಕಾಳಿನಿ ರಣಶೂಲಿನೀ ರುದ್ರಾಣಿಯೆ ೪

ಸುಂದರಿ ಗುಣಮಂಜರಿ ಪೂರ್ಣೇಂದು ಸಂಕಾಶಿಯೇ ।
ಚಂದದಿ ಗೋವಿಂದನ ದಾಸವಂದಿತೆ ಅಘನಾಶಿಯೆ ೫

## ೨೯೪

ಏನು ಧನ್ಯಳೊ ಗಿರಿಜೆ ಎಂಥ ಮಾನ್ಯಳೋ ಪ

ಸ್ಥಾಣುವ ಮೂರ್ತಿ ಪಾದಸೇವೆ
ತಾನೆ ನಿರತ ಮಾಡುತಿಹಳೊ ಅ.ಪ

ಭೂತಗಣದ ಯೂಥವಿರಲು
ಸೂತಗಣನಾಥಾದ್ಯರಿರಲು
ಭೂತಪತಿಯ ಚರಣ ತೊಳೆದು
ತೀರ್ಥಕೊಡುತ ಬರುವಳ್ ಸಭೆಗೆ ೧

ನಾರದರು ದಿಕ್ಪಾಲರಿರಲು
ವಾರಿಜಾಸನ ವಿಷ್ಣುವಿರಲು
ಮಾರಹರನಿಗಾರತಿ ಎತ್ತಿ
ತಾನೆ ಸಭೆಗೆ ತೋರಿಸುವಳು ೨

ವಸುಗಳ್ ಸಪ್ತ ಋಷಿಗಳಿರಲು
ಅಸುರ ಶಿಕ್ಷರು ನುತಿಸುತಿರಲು
ಪಶುಪತಿಯ ಲೇಪಿಸಿದ ಭಸ್ಮ
ಗೋವಿಂದಾದ್ಯರಿಗೆ ಪ್ರಸಾದ ಕೊಡುವಳ್ ೩

## ೨೯೫

ಶರಣು ಶರಣು ಶರ್ವಾಣಿಯೆ ಈಕ್ಷಿಸು
ಶರಣು ಶರ್ವನ ರಾಣಿ ಕಲ್ಯಾಣೀ
ಶರಣು ಶರಣು ಸರ್ವೇಶ್ವರಿ ರಕ್ಷಿಸು
ಶರಣ ಜನರ ಶ್ರೇಣಿ ಫಣಿವೇಣಿ ಪ

ಹಿಮಕರ ಶೈಲ ಕುಮಾರಿ ಸುರಾಸುರ
ನಮಿತೆ ಉಮಾದೇವಿ ಮಹದೇವಿ

ಪ್ರಮಥಾಧಿಪೆ ಕೌಮಾರಿ ಪರಾತ್ಪರೆ
ವಿಮಲೆ ಕೋಮಲಾಂಗಿ ಶ್ವೇತಾಂಗಿ ೧

ವೈರಿ ಕಳೌಘ ವಿಹಾರಿಣಿ ಪೂರಿಣಿ
ಗೌರಿ ಸೋದರಿ ನೀನೆ ಪ್ರವೀಣೆ
ಸ್ವೈರಣೆ ಸುರ್ಜಿತೆ ತೋರುವ ಕಾರಣೆ
ಗೌರೀ ಗಗನವಾಣೀ ಶುಕವಾಣಿ ೨

ಮಂದಸ್ಮಿತ ಮುಖ ಚಂದ್ರಕೋಟಿ
ಸಂಕಾಶೆ ವಿಶ್ವರೂಪೆ ಜಿತಪಾಪೆ
ಸುಂದರಾಂಗಿ ಗೋವಿಂದದಾಸನ
ಹೃನ್ಮಂದಿರ ಸುಮವಾಸೆ ಸಂತೋಷೆ ೩

## ೨೯೬

ಜಯತು ಜಯತು ಶ್ರೀ ಗಂಗಾದೇವಿಯೆ
ಜಯತು ಪಂಕಜ ಗಂಧಿಯೇ
ಬಹು ಜಯತು ಶ್ವೇತಾಂಗ ರೂಪೆಯೆ
ಜಯತು ವಕ್ರ ಸವಾರಿಯೆ ಜಯತು ಜಯತೂ ೧

ಪಾಹಿ ಶ್ರೀಹರಿ ಪಾದನಂದನೆ
ಪಾಹಿ ಶಿವ ಶಿರವಾಸಿನಿ
ಪಾಹಿ ಶ್ರೀಜಹ್ನುಮುನಿ ಹೃದಯ ಶೋಭಿತೆ
ಪಾಹಿ ಧಾರುಣಿ ಪಾಲಿತೆ ಪಾಹಿ ಪಾಹಿ ೨

ಶರಣು ಭಗೀರಥ ಕುಲ ಉದ್ಧಾರಳೆ
ಶರಣು ವರುಣನ ಮಾನಿನಿ
ಶರಣು ಗೋವಿಂದನ ದಾಸನೊಡತಿ
ಶರಣು ಸರ್ವ ಅಘನಾಶಿನಿ ೩

## ೨೯೭

ಕಂಡೆನು ಪಾರ್ವತಿಯಾ । ಮೈಸೂರ ।
ಚಾಮುಂಡೇಶ್ವರಿಯಾ ಪ

ಕಂಡೆನು ಕರುಣದಿ ಭಕ್ತರ ಪಾಲಿಪ ।
ಚಂಡಿಕರಾಳಿಯ ಪುಂಡರೀಕಾಕ್ಷಿಯ ಅ

ಸುತ್ತಲು ಜ್ಯೋತಿಗಳ । ಹೊಳೆಯುವ ।
ಮುತ್ತಿನ ಕಾಂತಿಗಳೂ ಚ

ಕೆತ್ತಿದ ನವಮಣಿರತ್ನದಿ ಶೋಭಿಪ ।
ಉತ್ತಮ ಕನಕಾಭರಣ ಭವಾನಿಯ ೧

ಸಹಸ್ರಾಯುಧಭರಿತೇ । ನೀಕ್ಷಿಸೆ ।
ಸಹಸ್ರ ಹಸ್ತದಾತೇ ।
ಸಹಸ್ರರೂಪದಿ ಜಗವನು ಪಾಲಿಪ ।
ಸಹಸ್ರನಾಮದ್ವಯ ಸಹಸ್ರಲೋಚನೆಯ ೨

ಸಂಭ್ರಮದಲಿ ಚಂಡಾಮುಂಡರು ।
ಡೊಂಬಿಯೊಳ್ ಪ್ರಚಂಡಾ– ।
ರೆಂಬಾ ದೈತ್ಯಕದಂಬವ ಖಂಡಿಸಿ ।
ಕುಂಭಿನಿಗಿಳುಹಿದ ಶಾಂಭವೆ ಶಕ್ತಿಯ ೩

ರಾಜ ಕುಲಕೆ ದೀಪಾ । ಮೈಸೂರ್ ।
ರಾಜ ಕೃಷ್ಣ ಭೂಪಾ ।
ರಾಜನು ದಿನ ದಿನ ಪೂಜಿಸಿ ನಮಿಸುವ ।
ರಾಜ ರಾಜ ಗಿರಿರಾಜ ಕುಮಾರಿಯ ೪

ಚಂದ್ರಕೋಟಿವದನೇ । ಶೋಭಿಪ ।
ನಂದಕುಂದರದನೇ ।

ಮಂದಗಮನೆ ಗೋವಿಂದನ ಪೂಜಿಪ
ಚಂದಿರಧರನರ್ಧಾಂಗಿಯ ಚರಣವ ||ಕಂಡೆನು|| ೫

## ೨೯೮

## ಇ. ಶ್ರೀಹರಿ ಲಕ್ಷ್ಮಿಯರು

ಅಂಗಳದೊಳಗಾಡೋ ರಂಗ ಪರ
ಹೆಂಗಳ ಮನೆಗ್ಹೋಗ ಬ್ಯಾಡೋ ನೀಲಾಂಗ ಪ

ದಧಿ ಘೃತ ಚೋರನೆನ್ನುವರು ನಿನ್ನ
ಬೆದರಿಸಿ ಜರೆವರು ಪದುಮನೇತ್ರೆಯರು
ವಿಧವಿಧದಲಿ ಬಾಧಿಸುವರು ಕೊರಳ
ಪದಕದ ಸರವನ್ನು ಸೆಳೆದುಕೊಳ್ಳುವರು ೧

ಕಿರುಕುಳ ....ನಿನ್ನ ಮನ
ಕರಕರಿಸುವದೆನಗಿನಿತು ಕೇಳಣ್ಣ
ಕರುಗಳ ಬಿಡ ಹೇಳಿ ಮುನ್ನಾ ಬಲು
ಹಗರಣ ಗೈಯ್ಯುವರೆನ್ನಾ ಸಂಪನ್ನಾ ೨

ನುಡಿಯ ಲಾಲಿಸು ಮುದ್ದು ಕಂದಾ ನಿನ-
ಗಿಡುವೆನಕ್ಷತೆ ವಸ್ತ್ರಾಭರಣ ಸುಗಂಧಾ
ಕೊಡುವೆನು ದಧಿ ಘೃತದಿಂದಾ ಕ್ಯಾದ
ಕಡಬು ಕಜ್ಜಾಯ ಅತಿರಸವಾ ಗೋವಿಂದಾ ೩

## ೨೯೯

ಅಗ್ರಪೂಜೆಯ ಮಾಡಿದಾ ಧರ್ಮಜ ತಾನು
ಅಗ್ರಪೂಜೆಯ ಮಾಡಿದಾ ಪ

ರಾಜರಾಜರಗೂಡಿ ರಾಜಸೂಯದಿ ಧರ್ಮ–
ರಾಜನು ಹರಿಗೆ ರಾಜರ ಸಭೆಯೊಳು ಅ.ಪ

ಶುದ್ಧಾಚಮನ ಸಂಕಲ್ಪದಿ ಪಾದ ತೊಳೆದಿತ್ತ
ಸದ್ಭಕ್ತಿಯಲಿ ಗಂಧಾಕ್ಷತೆ ವೇದವೇದ್ಯಗೆ ೧

ವಸನಾಭರಣ ದಿವ್ಯ ಕುಸುಮ ಧೂಪವು ದೀಪ
ತೃಷೆ ನೈವೇದ್ಯವನಿತ್ತು ಕ್ಲೇಶನಾಶನಿಗಂದು ೨

ಕ್ರಮುಕವರ್ಪಿಸಿ ನೀಲಾಂಜನವೆತ್ತಿ ಧ್ಯಾನಿಸಿ
ಸುಮವಿತ್ತು ಬಲವಂದು ಚಕ್ರವಿಕ್ರಮಗೆ ೩

ಪೊಡಮಟ್ಟರ್ಘ್ಯವ ಬಿಟ್ಟು ಒಡನೆ ಯಜ್ಞಾಂತದಿ
ಬಿಡೆ ಬ್ರಹ್ಮಾರ್ಪಣ ಗೋವಿಂದನ ಪಾದದ್ವಂದ್ವಕೆ ೪

## ೩೦೦

ಈತನೀಗ ಶ್ರೀನಿವಾಸನೂ ಶ್ರೀರಂಗನೂ
ಈತನೀಗ ಶ್ರೀನಿವಾಸನೂ ಪ

ಈತನೀಗ ಶ್ರೀನಿವಾಸ ಈತ ಸಕಲಾ ಲೋಕಕೀಶ
ಈತ ಭೂತಪತಿಯ ಪ್ರೀತ ಈತ ಲಕ್ಷ್ಮೀಕಾಂತ ಖ್ಯಾತ ಅ.ಪ

ಕೌಸಲ್ಯಾತ್ಮಜಾತನೆನಿಸಿದ ಶ್ರೀ ರಾಮಚಂದ್ರ
ಕೌಶಿಕನೊಳ್ ವಿದ್ಯ ಪಠಿಸಿದಾ ವೈಶ್ವಾನರನ
ಸಾಕ್ಷಿಯಿಂದ ವಸುಧೆಸುತೆಯ ಒಲಿಸಿ ತಂದ
ಕೀಶಬಲನ ಕೂಡಿ ಬಂದು ಆ ದಶಾಸ್ಯನನ್ನ ಗೆಲಿದಾ ೧

ದೇವಕೀಯ ತನಯನೆನಿಸುತಾ ಶ್ರೀಕೃಷ್ಣವನದಿ
ಗೋವುಗಳನು ಮೇಸಿ ಚಲಿಸುತಾ
ಹಾವಿನ್ಹೆಡೆಯ ತುಳಿದು ನಲಿದು

ಗೋವರ್ಧನವ ಸೆಳೆದು ಬಡಿದು ಮಾವ
ಕಂಸನ್ನ ಗೆಲಿದು ದೇವಿ ರುಕ್ಮಿಣಿಯನು ತಂದ ೨

ಬಕುಳದೇವಿ ದತ್ತ ಪುತ್ರನೂ ಶ್ರೀ ವೆಂಕಟೇಶ
ಸುಖದಿ ತಿರುಪತಿಯೊಳು ನಿಂತನೂ
ಯುಕುತಿಯಿಂದ ಪದ್ಮಾವತಿಯ ಸಕಲ
ವೈಭವದಲಿ ವರಿಸಿ ಭಕುತರನ್ನ ಪೊರೆವ
ಗೋವಿಂದದಾಸನೊಡೆಯನಿವನೂ ೩

## ೩೦೧

ಎಂಥಾ ಕಾಲವು ಬಂತು ಯಾತಕೀ ಭ್ರಾಂತು
ಪಿಂತೆ ಮಾಡಿದ ಕರ್ಮ ತೀರ್ಚಬೇಕಾಯ್ತು ಪ

ಸಂತೋಷದಲಿ ಶ್ರೀಹರಿಯ ಧ್ಯಾನಿಸುತಿರೆ
ಕಂತುಪಿತನು ಕಾಯಕರುಣ ಸಂಜೀವಾ ಅ.ಪ

ವಿಪ್ರಕುಲದೊಳುದಿಸಿ ಸುಧಾಮನು
ತಾಪತ್ರಯವನುಭವಿಸಿ
ಸರ್ಪಶಯನ ಕಾಯೆಂದೊಪ್ಪಿಸಿದವಲಕ್ಕಿ
ಅರ್ಪಿಸಿದರೆ ತಿಂದು ವರವಿತ್ತ ಶ್ರೀಕೃಷ್ಣ ೧

ಶರಣರ ಕುಲತಿಲಕ ಪ್ರಹ್ಲಾದನು
ಶಿರಿಪತಿ ಪ್ರಿಯ ಭಜಕ
ಸರಿಯಲ್ಲೆನುತ ದೈತ್ಯ ಮಗನನು ಬಾಧಿಸೆ
ನರಹರಿಯ ರೂಪದಿ ತರಳನ ಕಾಯ್ದ ೨

ಮಂದರಗಿರಿಧರನೂ ಧ್ರುವನಿಗೆಷ್ಟು
ಚಂದದ ವರವನಿತ್ತನೂ
ಒಂದು ದಿನ ವ್ಯೂಹ ಸುತೃಷೆಗಳಿಲ್ಲದ ಲೋಕ
ವಂದ ಸೃಜಿಸಿ ಗೋವಿಂದನೆ ಪೊರೆದಾ ೩

## ೩೦೨

ಕಂಡೀರೆ ನೀವೆಲ್ಲರೂ ಶ್ರೀಕೃಷ್ಣನ ಕಂಡೀರೆ ಪ

ಕಂಡೀರೆ ಪಾಂಡುರಂಗನನೂ ಕಳಕೊಂಡಿರೆ
ಪಾಪ ಸರ್ವವನೂ ಅಂಡಜವಾಹನನಾಗಿ
ಸಂಚರಿಸುವ ಪುಂಡರೀಕಾಕ್ಷ
ಬ್ರಹ್ಮಾಂಡ ನಾಯಕನನ್ನೂ ೧

ಎಂಟನೆ ಅವತಾರಿಯೆನಿಸಿ ದೇವಕಿ ಎಂಟನೇ
ಗರ್ಭದಿ ಜನಿಸಿ ಎಂಟನೆ ಮಾಸ ಶ್ರಾವಣ
ಕೃಷ್ಣಾಷ್ಟಮಿ ದಿನ ನಟ್ಟಿರುಳಿನಲಿ
ಸೃಷ್ಟಿಗಿಳಿದ ಶ್ರೀಕೃಷ್ಣನ ೨

ಮಧುರಾ ಪಟ್ಟಣದಿ ಮೈದೋರಿ ಬಹು
ವಿಧವಾಗಿ ಗೋಕುಲದೊಳಗಾ
ದಧಿ ಘೃತ ಚೋರಕನೆಂದು ಯಶೋದೆಗೆ
ಪದುಮಾಕ್ಷಿಯರು ಬಂದು ದೂರುವ ಕೃಷ್ಣನ ೩

ದನುಜೆ ಪೂತನೆಯಸುಗೊಂಡು ತನ್ನ ಜನನಿ
ಗೋಪಿಗೆ ಬಾಯೊಳ್ ತೋರ್ದ ಬ್ರಹ್ಮಾಂಡ
ವನಜಾಕ್ಷಿಯರ ಕೂಡಿ ಯಮುನಾ ತೀರದೊಳಾಡಿ
ವನಿತೆಯರುಡುವ ಶೀರೆಗಳೊಯ್ದ ಕೃಷ್ಣನೇ ೪

ಗೋವಳರರಸನೆಂದೆನಿಸಿ ಶಿರಿಗೋವರ್ಧನವೆತ್ತಿ
ಗೋವ್ಗಳ ಮೇಸಿ ಪಾವಕನು
ಕಾಳಿಮರ್ದನ ಗೈದು ಮಾವ ಕಂಸನ ಗೆಲ್ದ
ಮಧುರೆಯೊಳ್ ಕೃಷ್ಣನಾ ೫

ದ್ವಾರಕಾಪುರವೊಂದ ರಚಿಸಿ ಬಲ
ವೀರರಾಮನ ದೊರೆರಾಯನೆಂದೆನಿಸಿ

ನಾರಿಯರ್ ಹದಿನಾರು ಸಾವಿರ ವಡಗೂಡಿ
ಮಾರಕೇಳಿಯೊಳ್ ಮುದ್ದು ತೋರುವ ಕೃಷ್ಣನ ೬

ಶರದ ಸೇತುವಿಗೆ ಮೈಯ್ಯಾಂತ ಉಟ್ಟ
ಶೆರಗೀಗೆ ವರವ ದ್ರೌಪದಿಗೊಲಿದಿತ್ತ
ನರನ ಸಾರಥಿಯಾಗಿ ಕುರುನೃಪರನು ಗೆಲ್ದು
ಧರೆಯ ಪಟ್ಟವ ಧರ್ಮಜನಿಗಿತ್ತ ಕೃಷ್ಣನೆ ೭

ದುಷ್ಟ ನಿಗ್ರಹನೆಂಬ ಬಿರುದೂ ಭಕ್ತ
ರಕ್ಷಕನೆಂದು ಮೂರ್ಲೋಕವದೆಂದೂ
ಸೃಷ್ಟಿಯೊಳ್ ನರಜನರು ನಮಿಸಿ ಪೂಜಿಸಲೆಂದು
ಬಿಟ್ಟರು ದ್ವಾರಕಾಪುರವ ರಾಮಕೃಷ್ಣರು ೮

ಹಡಗಿನ ಮೇಲೇರಿ ಬಂದೂ ನಮ್ಮ
ಉಡುಪಿ ಅನಂತೇಶನಿದಿರಾಗಿ ನಿಂದೂ
ಕಡು ಕೃಪೆಯೊಳ್ ಭಕ್ತ ಕನಕನಿಗೊಲಿದ
ವೊಡೆಯ ಗೋವಿಂದ ಗೋಪಾಲಕೃಷ್ಣನ ೯

## ೩೦೩

ಕರವ ಮುಗಿವೇ ಕಮಲನಯನ
ಕರುಣದಿಂದಲಿ ಪಾಲಿಸೊ
ಕರಿವರದ ಶ್ರೀ ಕಮಲನಾಭ
ಕರೆದು ಎನ್ನನು ಮನ್ನಿಸೊ ೧

ಸ್ಮರಿಸಲರಿಯೇ ಸಿರಿಯ ರಮಣ
ಪರಮಪಾವನ ಪಾದವಾ
ಸ್ಮರನ ಜನಕ ಶರಧಿ ಶಯನ
ಇರಿಸು ಎನ್ನೊಳು ಮೋಹವಾ ೨

ಬಂಧು ಬಳಗ ಭಾಗ್ಯ ಭೋಗ್ಯ-
ದಿಂದ ಸುಖವ ಕಾಣೆನೇ
ದಂದಶೋಕ ಶಮನನೇ ಗೋವಿಂದ
ದಾಸನ ಪ್ರಾಣನೇ ೩

## ೩೦೪

ಕರವೊಡ್ಡಿ ಬೇಡುವೆನು ಕಮಲದಳನೇತ್ರ
ಕರುಣದಲಿ ಸಲಹೆನ್ನ ಕಾಮಹರ ಮಿತ್ರ ಪ

ಕಾಯದಲಿ ಬಲವಿಲ್ಲ ಕಂಗಳಿಗೆ ಸುಖವಿಲ್ಲ
ಕೈಯ್ಯೊಳಗೆ ಹಣವಿಲ್ಲ ಬಾಯಬಲವಿಲ್ಲ
ಕಾಯವಿದು ನೀನಿಟ್ಟ ಮಾಯಪಾಶಕೆ ಸಿಕ್ಕಿ
ಹೇಯವಾದುದು ಸಲಹೋ ಹೇ ಲಕ್ಷ್ಮೀರಮಣ ೧

ಕಾಲನಾಳುಗಳೆಮ್ಮ ಕಾಲಕೈಗಳ ಕಟ್ಟಿ
ಕಾಲದಂಡದಿ ಬಡಿದು ಕಾಲನೆಡೆಗೈದೂ
ಕಾಲಮೇಘದ ತೆರದಿ ಕಾಲನಂತೆ ಘರ್ಜಿಸುವ
ಕಾಲದಲಿ ಕಾಯ್ವವರ ಕಾಣೆ ನಾಳಿನಲೀ ೨

ಕರಿರಾಜನನು ಕಾಯ್ದೆ ಕಂಬದಲಿ ಮೈತೋರ್ದೆ
ಖರ ದೂಷಣ ನಿನ್ನ ಕರದಿ ಶಿರ ವರಿದೀ
ಕರುಣದಿಂದಲಿ ದ್ರೌಪದಿಯ ಸೆರಗಿಗಕ್ಷಯವಿತ್ತೆ
ಕರವಿಡಿದು ಸಲಹೆನ್ನ ಕಲುಶ ಸಂಹಾರಾ ೩

ಕಂದನಪರಾಧವನು ತಂದೆ ಕ್ಷಮಿಸುವ ತೆರದಿ
ಕಂದು ಕುಂದುಗಳೆನ್ನೊಳಿರಲು ನೀ ಕ್ಷಮಿಸಿ
ಕಂದನಂದದಿ ನೋಡಿ ಕಂದರ್ಪ ಜನಕನೆ
ಚಂದದಲಿ ಸಲಹೊ ಗೋವಿಂದದಾಸನನೂ ೪

## ೩೦೫

ಕರುಣಾಕರ ನಿನ್ನ । ಕರವೊಡ್ಡಿ ಬೇಡುವೆ ॥
ಕರುಣಿಸು ವರವನ್ನು । ಖರ ಸಂಹಾರ ೧

ಕರಿರಾಜನು ನಿನ್ನ । ಕರಗುತ ಭಜಿಸಲು ॥
ಖಗ ವಾಹನನಾಗಿ । ಕರುಣದೀ ಪೊರೆದೆ ೨

ಕಡುದಾರಿದ್ರನು । ಕಷ್ಟದಿ ಸ್ಮರಿಸಲು ॥
ಕರುಣದಿ ಸುಧಾಮಗೆ । ಕರೆದಿತ್ತೆ ವರವ ೩

ಕಾಲನ ದೂತರು । ಕಾಡುವ ವೇಳ್ಯದಿ ॥
ಕಂದನ ಕರೆಯೆಗೋ । ವಿಂದನೆ ಪೊರದೇ ೪

## ೩೦೬

ಕಷ್ಟದಿ ಕಾಲವ ಕಳೆವೆನು ದೇವಾ ।
ಪಕ್ಷಿವಾಹನ ಕಾಯೋ ಕರುಣ ಸಂಜೀವಾ ಪ

ಕೃಷ್ಣಮೂರುತಿ ಫಲುಗುಣನಿಗೆ ಭಾವ ।
ಸೃಷ್ಟಿಗೊಡೆಯ ಭಕ್ತಜನರನು ಪೊರೆವಾ ॥
ಉಟ್ಟ ಸೀರೆಯನು ಕುರು ದುಷ್ಟನು ಸೆಳೆಯಲು ।
ರಕ್ಷಿಸೆನ್ನುತ ಮೊರೆಯಿಟ್ಟ ದ್ರೌಪದಿಗೆ ॥
ಅಕ್ಷಯವರವಿತ್ತು ಪಕ್ಷಿವಾಹನ ಕಾಯ್ದೆ ।
ಸೃಷ್ಟಿಗೊಡೆಯ ಶ್ರೀಕೃಷ್ಣಾವತಾರ ೧

ದಾನವಾಂತಕ ಭಕ್ತ ದೀನದಯಾಕರ ।
ಮಾನವ ಶರೀರ ಮನುಮಥನಯ್ಯ ॥
ಭಾನುನಂದನ ಫಣಿ ಬಾಣವನೆಸೆಯಲು ।
ಜಾಣತನದಿ ನರನ ಪ್ರಾಣವನುಳುಹಿದೆ ೨

ನಂದಗೋಪನ ಮುದ್ದು ಕಂದನ ಚರಣಕ್ಕೆ ।
ವಂದಿಸಿ ಕರಗಳಾನಂದದಿ ಮುಗಿವೆ ॥
ಇಂದಿರೆಯರಸ ಗೋವಿಂದ ಜನಾರ್ದನ ।
ಮಂದರ ಧರ ಅರವಿಂದ ನಯನ ದೇವಾ ೩

## ೩೦೭

ಕೃಷ್ಣನ ನೆನೆವನೆ ಅಜ್ಞಾನಿ । ಸ್ವಾಮಿ ।
ಕೃಷ್ಣನ ಮರೆವನೆ ಸುಜ್ಞಾನೀ ಪ

ಕೃಷ್ಣನ ಅನುದಿನ ಸ್ಮರಣೆಗೈವನೆ । ದುಷ್ಟ ।
ಕೃಷ್ಣನ ಪರಿಪರಿ ಜರೆವನೆ ಶ್ರೇಷ್ಠ ಅ.ಪ

ಕೃಷ್ಣನ ಸ್ಮರಿಸೀಗ ಬದುಕಿದರುಂಟೇ ।
ಕೃಷ್ಣನ ನಂಬೀಗ ಜನಿಸಿದರುಂಟೇ ॥
ಕೃಷ್ಣ ಸೇವೆಯ ನಿತ್ಯ ಮಾಡುವನೆ ತುಂಟ ।
ಕೃಷ್ಣನಾಜ್ಞೆಗೆ ತಪ್ಪಿ ನಡೆವನೆ ಬಂಟ ೧

ದುರುಳರ ಕಂಡು ತಾ ಪೊರೆವನೆ । ಕೃಷ್ಣ ।
ಶರಣರ ನೋಡೀಗ ಮುರಿವನೇ ಕೃಷ್ಣ ॥
ಮೊರೆಯಿಟ್ಟು ಕರೆದರೆ ಬಾರನೆ ಕೃಷ್ಣ ।
ಕರುಣದಿ ಇಷ್ಟಾರ್ಥ ಕೊಡನೇ ಶ್ರೀಕೃಷ್ಣ ೨

ಧನ್ಯನೆ ಕೃಷ್ಣನ ನೆನೆವನೆ ಪಾಪಿ ।
ಮೌನದಿ ಕೃಷ್ಣ ಎಂಬನೇ ಮೂಗ ಕೋಪಿ ॥
ಮಾನ್ಯನೇ ಕೃಷ್ಣನ ನೋಡದ ಕುರೂಪಿ ।
ಮುನ್ನ ಗೋವಿಂದದಾಸರಿಗೆಲ್ಲ ಗೋಪಿ ೩

## ೩೦೮

ಕೃಷ್ಣನಾಮಾಮೃತ ರುಚಿಕರವೆಲ್ಲವು
ಶ್ರೇಷ್ಠ ಭಕ್ತರಿಗಲ್ಲದೇ
ದುಷ್ಟ ಮಾನವ ಮತಿಹೀನಗೆ
ಪೇಳಲು ಇಷ್ಟವಾಗಲು ಬಲ್ಲುದೇ ಪ

ಗುಡಶೈಲದಲಿ ಲಿಂಬೆ ಬೀಜ ಪ್ರತಿಷ್ಠಿಸೆ
ಫಲವು ಮಧುರವಹುದೆ ಗುಡುಗು
ಮೋಡಕೆ ಮಯೂರವು ಕುಣಿದಂತೆ
ಕುಕ್ಕುಟ ನೋಡಿ ಕುಣಿವುದೆ ಸುಡುವಗ್ನಿಯಲಿ
ಬೀಜಬಿತ್ತಿ ನೀರೆರೆದರೇ ಗಿಡವಾಗಿ ಶೋಭಿಪುದೇ
ಪೊಡವಿಯೊಳಗೆ ಲಕ್ಷ್ಮೀಯೊಡೆಯನ
ಚರಿತೆಯ ಮೂಢ ಮಾನವ ಬಲ್ಲನೇ ೧

ವೀಣೆಯ ನುಡಿಸುತ್ತ ಗಾಯನ ಹಾಡಲು
ಕೋಣಗೆ ಹಿತವಹುದೆ ಸಾಣೆಕಲ್ಲನು
ಬಿಸಿನೀರಿನೊಳಿಟ್ಟರೆ ಮೇಣದಂತಾಗುವುದೇ
ಜಾಣತನದಿ ವೇದ ಓದಿದ ಹೊಲೆಯನು
ಬ್ರಾಹ್ಮಣನೆನಿಸುವನೆ ಕ್ಷೋಣಿಯೊಳಗೆ
ವಾಸುದೇವನ ಚರಿತೆಯ ಹೀನಮತಿಯು ಬಲ್ಲನೆ ೨

ಕೋಗಿಲೆ ಸಾಕಿದ ಕಾಗೆಯ ಮರಿ ತನ್ನ ರಾಗದಿ
ಮೋಹಿಪುದೇ ನಾಗರಹಾವಿಗೆ ಹಾಲೆರೆದರೆ ನಿತ್ಯ
ವಿಷವ ನೀಗಿಸಿಕೊಂಬುದೇ ಭೋಗದಾಸೆಯ
ಸ್ತ್ರೀಗೆ ವಿಟನ ಮೇಲಲ್ಲದೇ ಯೋಗಿಯೊಳ್
ಹಿತವಹುದೇ ಸಾಗರಶಯನ ಗೋವಿಂದನ
ಮಹಿಮೆಯ ಭೋಗಾಸಕ್ತನು ಬಲ್ಲನೇ ೩

## ೩೦೯

ಕೃಷ್ಣ ನೀನೆ ರಕ್ಷಿಸೆನ್ನ ।
ಪಕ್ಷಿಗಮನ । ಲಕ್ಷ್ಮೀರಮಣ ॥
ಸೃಷ್ಟಿಗೊಡೆಯಾ ಜಿಷ್ಣುಪ್ರೀಯ ।
ದುಷ್ಟ ಹನನಾ ಶಿಷ್ಟ ಸ್ಮರಣಾ ೧

ಯಮಿಕುಲಾಳಿ । ಹೃದಯನಿಲಯಾ
ಕಮಲನಯನಾ ವಿಮಲಚರಣಾ ॥
ಸುಮನಸಾದೀ । ನಮಿತ ಪಾದಂ
ಕುಮುದ ಸಖನಾ ಸಮಸುವದನಾ ೨

ತಂದೆ ತಾಯೀ । ಯಂದ ಸಲಹೋ
ಇಂದಿರೇಶಾ ಸುಂದರಾಸ್ಯ ॥
ವಂದಿಸುವೆ ಗೋವಿಂದ ನಿನಗೆ ।
ಸಿಂಧುವಾಸಾ ಬಂಧನಾಶಾ ॥ಕೃಷ್ಣ॥

## ೩೧೦

ಕೃಷ್ಣ ರಕ್ಷಿಸೆನ್ನ ಜಯ ಜಯ
ಪಕ್ಷಿರಾಜಗಮನಾ
ದುಷ್ಟಹನನ ಜಲಜಾಕ್ಷ ಜನಾರ್ದನ
ಶಿಷ್ಟ ಜನರ ಮನದಿಷ್ಟ ಪ್ರದಾಯಕ ಪ

ಗೋಕುಲದೊಳು ನೆಲಸಿ ದೈತ್ಯರ–
ನೇಕರನು ಮಥಿಸಿ
ಲೋಕದ ಜನರಿಗೆ ರೀತಿಯ ತೋರುತ–
ನೇಕರ ಮನೆ ಮನೆ ಬೆಣ್ಣೆಯ ಭುಜಿಸಿದ ೧

ದ್ವಾರಕೆಯೊಳು ನಿಂತೆ ಕೌರವ
ವೀರಗಾಯುಧವಿತ್ತೆ

ಸಾರಥಿಯಾಗುತೆ ಧಾರುಣಿ ಗೆಲಿಸಿದೆ
ಧೀರನು ನೀ ಗೋವಿಂದನೆ ದಾಸನೆ ೨

## ೩೧೧

ಕೋಪವಿದೇಕೆ ಗೋಪಾಲಕ । ರೂಪ ಮನದಿ ।
ಕಾಪಾಡು ನೀ ಕೃಪೆಯೊಳ್ ತಾಪಸರ । ಪಾಪಾರಿಯೆ ಪ

ಚದುರೆಯರ್ ವಿಧ ವಿಧ ದೂರುವದನಾಲಿಸುತ ।
ದಧಿಘೃತ ಕದ್ದನೆಂದು ಬೈದಳೇ ಯಶೋದೆ ನಿನ್ನ ೧

ನಾರಿಯರ ಸೀರೆಯ ಕದ್ದು । ಏರಿದಾ ಮರವನೆಂದು ।
ದೂರುವುದ ಕೇಳಿ ಪಿತ । ಕ್ರೂರತ್ವವ ತೋರಿದನೇ ॥ಕೋಪ॥ ೨

ಚಂದದಿಂದ ಬಂದು ಎನ । ಗಿಂದು ದಯತೋರಿಸಯ್ಯಾ ।
ಸುಂದರಾಂಗ ಮೂರ್ತಿ ಗೋವಿಂದ ದಾಸರ್ವಂದಿತನೆ ೩

## ೩೧೨

ಕೋಲ ತರುವೆ ತಾಳೋ ನಿನಗೆ ಬಾಲ ಕೃಷ್ಣನೇ ।
ಪೇಳಿದ ಮಾತನು ಕೇಳು ಶೂಲಿ ಮಿತ್ರನೇ ಪ

ನಾರಿ ಜನರ ದೂರ ಕೇಳಿ ಗಾರುಗೊಂಡೆನೇ ॥ಕೃಷ್ಣ॥
ಸೀರೆಗಳ್ಳನೆಂದು ಹೆಸರನಿಟ್ಟುಕೊಂಡೆನೇ ೧

ಸುದತಿಯರನು ಮೋಸಗೈವ ಹದನವರಿತೆನೇ ॥ಕೃಷ್ಣ॥
ದಧಿ ಘೃತ ಚೋರನೆಂದು ಮೊದಲೆ ಕೇಳೆನೇ ೨

ಕಂಡು ಸಹಿಸಲೆಂತು ನಿನ್ನ ಭಂಡತನವನೇ ॥ಕೃಷ್ಣ॥
ಕಂಡ ಹೆಂಗಳ ಮೇಲೆ ಬಿದ್ದು ಪುಂಡು ಮಾಳ್ಪನೇ ೩

ಅಂದು ಎನ್ನ ಉದರದಲ್ಲಿ ಬಂದು ಜನಿಸ್ಯಾನೇ ॥ಕೃಷ್ಣ॥
ಸುಂದರ ಗೋವಿಂದನೆಂಬ ನಾಮಧರಿಸ್ಯಾನೇ ೪

## ೩೧೩

ಗುಟ್ಟಿ ಪೇಳಿದಳೊಂದು ಗುಣು ಗುಣು ಗುಣು ಎಂದು ।
ಗಟ್ಟಿ ಪೇಳಿದರತ್ತೆ ಬೈಯ್ಯುವಳೆಂದು ಪ

ಪಚ್ಚೆ ಮಂಚದಿ ಬಂದು ಮಲಗಿಕೊಳ್ಳೆಂದು ।
ನಟ್ಟಿರುಳಲಿ ಬಹೆ ಕೃಷ್ಣ ಕೇಳೆಂದು ಅ.ಪ

ಹದಿನಾರು ಸಾವಿರ ಸುದತಿಯರನು ಸೇರಿ ।
ಮದನ ಕೇಳಿದೊಳೆನ್ನ ಮರೆತೆಯ ಶೌರಿ ।
ಮದುವೆಯಾದವನೂರೊಳಿಲ್ಲ ಬಿಕಾರಿ ।
ಮದನ ತಾಪದಿ ಬೆಂದು ಬಳಲಿ ಬಾಯಾರಿ ೧

ಗುರುಕುಚವನು ನೋಡು ಹರುಷ ಮಾತಾಡು ।
ಮರುಗ ಮಲ್ಲಿಗೆ ಜಾಜಿ ಸರವ ತಂದೀಡೊ ।
ಕರುಪುರ ವೀಳ್ಯವ ಸವಿದು ನೀ ನೋಡು ।
ಪರಿಪರಿಯಲಿ ನಿನ್ನ ಕೃಪೆಯನೀಡಾಡು ೨

ಚಂದ್ರಗಾವಿಯ ಸೀರೆ ನೆರಿ ಹಿಡಿದುಟ್ಟು ।
ಚಂದದಿ ಕುಪ್ಪಸ ತೊಟ್ಟು ಜಡೆಬಿಟ್ಟು ।
ಚಂದನ ಕುಂಕುಮ ಕಸ್ತೂರಿ ಬೊಟ್ಟು ।
ಮಂದರ ಧರ ಗೋವಿಂದಗೆ ಚುಂಬನ ಕೊಟ್ಟು ೩

## ೩೧೪

ಗೋಕುಲ ಕೃಷ್ಣ ಗೋಪಿಸ್ತ್ರೀಯರ ಕೂಡೆ ॥
ಲೋಕ ಮೋಹನ ಲೀಲೆ ತೋರಿದನಲ್ಲಿ ॥

ಆ ಕನ್ಯೆಯರಿಗೆಲ್ಲ ಬೇಕಾದರೂಪ ತೋರಿ ॥
ಸಾಕಾರಿಯಾಗಿರೆ ಬಳಿಕೊಂದು ದಿವಸ ೧

ಸೀರೆ ಕುಪ್ಪಸ ತೊಟ್ಟು । ಹಾರ ಕಡಗವಿಟ್ಟು ।
ನಾರಿಯೊಬ್ಬಳು ಕ್ಷೀರ ಮಾರುತ್ತ ಬರಲೂ ॥
ಕೇರಿ ಕೇರಿಗಳಲ್ಲಿ ಚರಿಸುತ್ತಲಿರೆ ಕಂಡು ।
ವಾರಿಜಾಕ್ಷನು ನಡೆತಂದು ತಾ ನಗುತ್ತ ೨

ನೀಲಕುಂತಳೆ ಗುಣಶೀಲೆ ಚಂದಿರಮುಖಿ ।
ಹಾಲ ಸುಂಕವ ಕೊಟ್ಟು ಪೋ । ಗವ್ವ ಚದುರೆ ॥
ಕೇಳಿ ಮಾನಿನಿ ಕ್ರೋಧ ತಾಳಿ ಕೃಷ್ಣನ ಕೂಡೆ ।
ಹಾಲ ಸುಂಕದ ಕಟ್ಟೆ ಯಾವುದಯ್ಯ ನಿನಗೆ ೩

ಎಂದು ನಿಂದಿಸಿ ಹಿಂದೆ ತಿರುಗಿ ಪೋಗಲು । ಕಂಡು ।
ನಂದಕಂದನು ತಾ । ಸೆರಗ ಪಿಡಿದು ತಾ ನಿಲಿಸೆ ॥
ಚಂದಿರಮುಖಿ ತಾನು ಸೆಣಸಿ ಕೃಷ್ಣನೊಳ್ ಸೋತು
ಕಂದಿ ಕುಂದುತ ಕೈಯ ಮುಗಿದು ಪೇಳಿದಳು ೪

ತಂದೆ ಸೆರಗ ಬಿಡು ಕಂದ ಸೆರಗ ಬಿಡು ।
ಇಂದೆನ್ನ ಗುರುವರ್ಯ । ಸೆರಗ ಬಿಡಯ್ಯ ॥
ತಂದೆಯು ನಾನಲ್ಲ । ಕಂದನಾನಲ್ಲವೊ । ನಿನ್ನ ।
ತಂದೆಗಳಿಯನೆಂದು ಭಾವಿಸೆ ತರುಣಿ ೫

ಮಾವ ಸೆರಗ ಬಿಡು । ಭಾವ ಸೆರಗ ಬಿಡು ।
ಸೇವಕಿ ನಿನಗೆ ನಾ ಸೆರಗ ಬಿಡಯ್ಯ ॥
ಮಾವನಲ್ಲವೊ । ಕೇಳೆ ಭಾವನಲ್ಲವೊ । ನಿನ್ನ ॥
ಮಾವನ ಮಗನು ನಾ ಕಾಣೆಂದ ಕೃಷ್ಣಾ ೬

ವಿಧ ವಿಧದಲಿ ಮಾತನಾಡುತಾ ಕೃಷ್ಣ ।
ಮದನ ತಾಪವ ಹೆಚ್ಚಿಸಿದನು ಮಾನಿನಿಗೆ ।

ಪದುಮಾಕ್ಷಿ ಭ್ರಮೆಗೊಂಡು ಮದನ ತಾಪದಿ ನೊಂದು ।
ಮದನ ತಾತನನಪ್ಪಿ । ಮುದ್ದಿಸೆ ಕಂಡು ೭

ತಾಳು ತಾಳೆಲೆ ಸಖಿ ತಾಯಿ ತಂಗಿಗೆ ಸಮ ।
ಕೇಳು ಜಗದಿ ಪರದಾರಾಂಶ ಜನಕೆ ॥
ಲೋಲ ಲೋಚನ ಎನ್ನ ಗೋಳು ಗುಡಿಸದೀಗ ।
ಆಳು ನಿನ್ನಯ ಜನನಿಗೆ ಸೊಸೆ ಎಂದು ದಯದಿ ೮

ಇಂತೆಂದು ಕೃಷ್ಣನ ಎದೆಗೆ ಕುಚವನಿತ್ತು ।
ಸಂತೋಷದಿಂದಲಪ್ಪೀ ಸ್ಮರಿಸುತ್ತಲಿರಲು
ಕಂತುಜನಕೆ ಗೋವಿಂದಗೆ ದಾಸರೋಳೆಂತು ।
ಕೃಪೆಯೋ । ನಾರಿಗೊಲಿದಿಷ್ಟ ಸಲಿಸೆ ಗೋಕುಲ ೯

## ೩೧೫

ಗೋಪಾಲ ಶ್ರೀಕೃಷ್ಣ ಮೂರುತಿ ನೀನೇ
ಕಾಪಾಡೆನ್ನನು ಜಿಷ್ಣು ಸಾರಥಿ ಪ

ತಾಪತ್ರಯದೊಳ್ ನೊಂದೆ ತಪಗೈಯ್ಯಲರಿಯೆನು ನೀ
ಕೃಪೆಯೊಳನುದಿನ ರೂಪ ತೋರಿಸು ದೇವಾ ಅ.ಪ

ದೇವಕಿಯುದರದಿ ಜನಿಸಿ ಗೋಪಿ
ದೇವಿಗೆ ತನಯನೆಂದೆನಿಸಿ
ಜೀವ ಘಾತಕೆ ಬಂದ ಪೂತನಿಯಸು ಹೀರಿ
ಗೋವುಗಳನು ಮೇಸಿದೆ ೧

ದೈತ್ಯರ ಕೊಂದು ಗೋವರ್ಧನವೆತ್ತಿದೇ
ಕಾಮದಿ ಬಂದ ಬಾಲಕಿಯರನು ಕೂಡಿದೇ
ಹಾವಿನ ಹೆಡೆಯ ಮೇಲೆ ನಲಿದು ಬಿಲ್ ಹಬ್ಬದಿ
ಮಾವ ಕಂಸನ ಮುರಿದು ಕರುಣದಿ
ತಾಯಿ ತಂದೆಯ ಸೆರೆಯ ಬಿಡಿಸಿದೆ ೨

ಶರಧಿ ಮಧ್ಯದಿ ಮನೆಮಾಡಿದೇ ಅಲ್ಲಿ
ಭರದಿಂದಷ್ಟಮ ಸ್ತ್ರೀಯರಲಿ ಕೂಡಿದೇ
ನರಮುರಶಾದ್ಯರ ಮುರಿದು ಷೋಡಶ ಸಹಸ್ರ
ತರುಣಿಯರೊಡಗೂಡಿದೇ ಪಾರಿಜಾತ
ತರುವ ನೀನೊಲಿದು ತಂದೆ ಪಾಂಡವರೊಳು
ಭರಿತ ಕೃಪೆಯ ತೋರಿದೆ
ಧುರದಿ ಮಾಗಧ ಚೈದ್ಯ ಧರಣಿಪಾಲರ ಗೆಲ್ದು
ತರುಣಿ ದ್ರೌಪದಿಗ್ವರವ ಪಾಲಿಸಿ
ನರಗೆ ಸಾರಥಿಯಾದೆ ಶ್ರೀಹರೀ ೩

ಸಂಧಾನವೆಸಗಿ ಪಾಂಡವರ ಕರ –
ದಿಂದ ಕೊಲ್ಲಿಸಿದೆ ಕೌರವರ
ಚಂದ ಧರ್ಮರಾಯಗೆ ಪಟ್ಟ ಕಟ್ಟಿಸೀ
ನಿಂದಶ್ವಮೇಧಗೈಸಿ ನೀ ಸುರಗಣ
ವೃಂದ ಸಂತಸ ಬಡಿಸಿ ಯಾದವಕುಲ ಮುಗಿಲದಿಂದಲಿ
ಸುಂದರಾಂಗವ ಬಿಟ್ಟು ಕ್ಷೀರಸಿಂಧುವಿಗೈದೆ
ಚಂದದಲಿ ಗೋವಿಂದದಾಸನೆ
ಬಂದು ಮಂಗಲ ಮುಖವ ತೋರಿಸೋ ೪

## ೩೧೬

ಗೋವಿಂದ ಗೋವಿಂದ ಗೋವಿಂದಾ । ನಮೋ॥
ಗೋವಿಂದ ಗೋವಿಂದ ಗೋವಿಂದಾ ಪ

ಗೋವಿಂದ ಗೋಪೀಕಂದ । ಗೋವಿಂದನತಿಚಂದ ।
ಗೋವಿಂದ ಗುಣವೃಂದ । ಗೋವಿಂದ ಸಚ್ಚಿದಾನಂದ ೧

ಗೋವಿಂದ ಸದಾನಂದ । ಗೋವಿಂದ ಪರಮಾನಂದ ।
ಗೋವಿಂದ ನಲಿದುಬಂದ । ಗೋವಿಂದ ಇಂದ್ರವಂದ್ಯ ೨

ಗೋವಿಂದ ಯಾದವೇಂದ್ರ । ಗೋವಿಂದ ದಯಾಸಾಂದ್ರ ।
ಗೋವಿಂದ ಕುಲಚಂದ್ರ । ಗೋವಿಂದ ದಾಸನಿಂದ್ರ ೩

## ೩೧೭

ಚಂಚಲಾಕ್ಷಿ ಕೇಳ್ ಪಂಚಬಾಣನ ।
ಮಿಂಚಿನಂಥ ಶರ ತಾಳಲಾರೆ ನಾನು ।
ಕಂಚುಕಿಯನು ನಿನಗೊಂಚಿಸದೀವೆನು ।
ಕೊಂಚ ಮುಖ ತೋರಿನ್ನು ಚಂಚಲಾಕ್ಷಿ ೧

ಜಾಣೆ ನಿನ್ನನು ಕಾಣೆದೆನ್ನಯ ।
ಪ್ರಾಣನಿಲ್ಲದೇನೇ ॥
ತ್ರಾಣ ಗುಂದಿತು ಪ್ರಾಣನಾಯಕಿ ।
ಕಾಣೆ ನಿನ್ನ ಗಂಡನಾಣೆ ॥ ೨

ಪಟ್ಟೆ ಸೀರೆಯನ್ನುಟ್ಟುಕೊಳ್ಳೆ ನಿನ್ನ ।
ತೊಟ್ಟಿಕೊಳ್ವೆ ಬಾರೆ ॥
ಗಟ್ಟಿಗೆ ನಿನ್ನಯ ಗುಟ್ಟನರಿತೆನು ।
ಗಟ್ಟಿ ಬಳೆಯ ಕೊಡುವೆ ನೀರೆ ೩

ಮಂದಗಾಮಿನಿ ಸುಂದರಾಂಗಿಯೆ ।
ಬಂದು ಎನ್ನ ಕೂಡೆ ॥
ಚಂದದಿಂದ ಗೋವಿಂದನೊಡನೇ ಬೇ ।
ಗೊಂದು ಮಾತನಾಡೇ ॥ಹ॥ ೪

## ೩೧೮

ಚಿಂತೆ ಯಾತಕೋ । ಮನವೇ ।
ಶಾಂತನಾಗಿರೋ ದಿನವೇ ಶಾಂತನಾಗಿರೋ
ಕಂತುಪಿತನ ಧ್ಯಾನ ಮಾಡು ಮುಂತೆ
ಸುಖವ ತೋರಿ ಕೊಡುವ ಪ

ವಿಕ್ರಮದ ರಥದಿ ಭಕ್ತ– ।
ನಕ್ಕರೆಯ ಸಲಿಸಲೆಂದು ।
ಚಕ್ರವಿನುತನಾಗಿ ಕುಳಿತು ।
ಶಕ್ರಸುತನಕಾಯ್ದುದರಿತು ೧

ಬಾಲನು ಪ್ರಹ್ಲಾದ ತನ್ನ ।
ಪಾಲಿಸೆಂದು ಹರಿಯ ಧ್ಯಾನ ।
ಲೀಲೆಯಿಂದ ಮಾಡುತಿರಲು ।
ಶ್ರೀಲಲಾಮ ಕಾಯ್ದ ಕೇಳು ೨

ಇಂದ್ರಸುತನ ಸುತಭಿಮನ್ಯು ।
ಅಂದು ಚಕ್ರಬಿಂಬವನ್ನು ।
ಬಂದು ಮುರಿದು ಕಾದುತಿರೆ
ಗೋವಿಂದ ಮುನಿದರಳಿದ ಬೇರೆ ೩

## ೩೧೯

ಜಯತು ಜಯತು ಜಯತು ಜಯಾ । ಜಯತುಮಾಧವಾ ।
ಜಯತು ಜಯತು ಜಯತು । ಜಯಾ । ಜಯತು ಕೇಶವಾ ೧

ಶ್ರೀಶವಿಠಲ ವಾಸುದೇವಾ । ಕ್ಲೇಶನಾಶನಾ ॥
ಭಾಸುರಾಂಗ ದೋಷರಹಿತ । ಈಶವಂದನಾ ೨

ಉದಧಿಶಯನ ಪದುಮನಯನ । ಜಯಯದೂವರಾ ।
ಮದನಜನಕ ಮಧುರ ವಚನ । ಪೊರೆಗದಾಧರ ೩

ಗರುಡಗಮನ ಉರಗಶಯನ । ನರಕಸೂದನ ।
ಸುರರಿಗೊಡೆಯ ಧರಣಿ ಪಾಲ ದುರಿತ ಛೇದನಾ ೪

ಇಂದಿರೇಶ ಸುಂದರಾಸ್ಯ । ಮಂದರಾಧರಾ ।
ವಂದಿಸುವೆನು ಚಂದದಿ ಗೋವಿಂದ ಮುರಹರಾ ೫

## ೩೨೦

ತಲ್ಲಣಗೊಳ್ಳಬೇಡಾ ಶ್ರೀಹರಿ ಎಲ್ಲಿಹನೆನಬೇಡಾ ಪ

ಕಲ್ಲ ಕಂಬದಿ ಮೈದೋರಲು ನರಹರಿ
ಪ್ರಹ್ಲಾದನು ತಾಪತ್ರಯ ಬರೆದನೇ ಅ.ಪ

ತರಳ ಧ್ರುವನು ವನದೀ ಸ್ವಾಮಿಗೆ
ಚರರನು ಕಳುಹಿದನೇ
ಕರಿರಾಜನು ತಾನ್ ಕರೆಯಲು ಪೋದನೆ
ಹರಿಗೆ ರುಕ್ಮಾಂಗದ ವೀಳ್ಯವಿತ್ತಿಹನೇ ೧

ಅಂಬರೀಷನು ಹರಿಗೆ ದ್ರವ್ಯವ
ತುಂಬಿ ಕಳುಹಿಸಿದನೇ
ಅಂಬುಜನಾಭನು ಅಹಲ್ಯೆಗೆ ತಾತನೆ
ಅಂಬರದಿಂ ಶೀರೆ ಇಳಿವುದೇ ದ್ರುಪದೆಗೆ ೨

ಅಣು ಮಹತ್ತೆನಿಸಿರುವಾ ಶ್ರೀಹರಿ
ಬಣಗು ಜನರ ಮುರಿವಾ
ಗಣನೆಯಿಲ್ಲದೆ ಪ್ರಾಣಿಗಳನು ಸಲಹುವ
ತ್ರಿನಯನ ಸಖನುತಾ ಮಣಿವರ ಮರೆವನೆ ೩

ಅನ್ಯ ಚಿಂತೆಗಳನ್ನು ಬಿಟ್ಟು
ಪನ್ನಗಶಯನನೂ
ಘನ್ನ ಭಕ್ತಿಯೊಳುರೆ ಇನ್ನಾದರೂ ನೆನೆ
ಮನ್ನಿಸದಿರೆ ಗೋವಿಂದನು ದಾಸರ ೪

## ೩೨೧

ತೂಗಿದಳೆಶೋದಾದೇವಿ ಬಾಲಕನಾ
ಸಾಗರ ಶಯನನ ಜೋಗುಳ ಹಾಡಿ ಪ

ಪುಟ್ಟಿದ್ದನ್ನೊಂದನೆ ದಿವಸ ಶ್ರೀಕೃಷ್ಣನಾ
ತೊಟ್ಟಿಲೊಳಗಿಟ್ಟು ಸಂತೋಷದಿ ಮಗನ ಅ.ಪ

ಜೋಜೋ ಸುಗುಣಶೀಲ ಗೋಪಾಲ
ಜೋಜೋ ಯದುಕುಲ ಬಾಲ ಶ್ರೀಲೋಲನೆ ಎನುತಾ ೧

ರಂಗ ಕೃಪಾಂಗ ಶ್ರೀರಂಗನೆ ಜೋಜೋ
ಅಂಗಜ ಪಿತ ನರಸಿಂಗನೆ ಜೋ ಎಂದು ೨

ನಂದನ ಕಂದನೆ ಜೋಜೋ ಗೋವಿಂದಾ
ಮಂದರ ಗಿರಿಧರ ಜೋಜೋ ಎಂದೆನುತಾ ೩

## ೩೨೨

### (ಗ್ರಾಮ ಭಾಷೆಯಲ್ಲಿ)

ದಂಗೈನಿ ಗೋಪಮ್ಮ ನಿಮ್ಮ ಮಗನೊಂಚುಮನಿಗೆ ।
ಹಂಗರೀಸು ಬುದ್ಧಿ ಹೇಳುಗಾಗ್ದ ಕೃಷ್ಣೈಯ್ಯಂಗೆ ॥
ವಂಗಲ್ಲೀ । ಕೇಣ್ಗತಾಯೆ । ಹೇಳ್ಕುತೀನಿಂಪಾದ್ದಂಗೆಂ ।
ರಂಗಯ್ಯಾನ ಲೂಟಿ ತಡ್ಕಂಬುಕಾತ್ತಿಲ್ಯೇ ನಮ್ ಕೈಯ್ಯಂಗೇ ಪ

ಮೋಳ್ ಬೆಕ್ಕಿನಾಂಗ ಬಂದು ನಮ್ಮ ನೆಂಗಿದ್ದೆಲ್ಲಾ ।
ಹಾಲ್ ಮೊಸರ್ ಕುಡ್ಕ ಹ್ವಾರ್ । ಕೊರ್ಲಾಣಿ ಸುಳ್ಳಲ್ಲಾ ॥
ಮಾಳ್ಗಿಲದ್ ತುಪ್ಪ ನೊಂದ್ ಚಿಪ್ಪಾರ್ ಬೆಚ್ಚಿಲ್ಲೇ ।
ಅಳ್ಗಿಲಿದ್ ಬೆಣ್ಣೆ ಬರ್ಚಿ । ಬಾಯ್ಮೇಲ್ ಹ್ಯಾಕ ಹೋರಲೆ ೧

ಗೊಲ್ಲರೆಣ್ಗಳ್ ಮನಿಯಂಗಿ ವೃದ್ । ಗುಲ್ಲೆ ಗುಲ್ಲ್ ತಾಯಿ ।
ಎಲ್ ಗಂಟಿಂ ಕೇಂಡ್ರು ಬರು ಹೈಲೇ ಹೈಲ್ ।
ಮುಲ್ಲಿಂದ್ ಮುಲ್ಲಿ । ಗ್ ವಾಂಜಿಲಾಡುದೆಂತ್ ಚಲ್ಲೇಚಲ್ಲ್ ॥
ಮೆಲ್ಲಂಕ್ಯಾಂಡ್ರ ಹೇಳುದ್ ಪೂರ ಸುಳ್ಳೇ ಸುಳ್ ೨

ಶಣ್ಣರಂತ್ರಿ ನಿಮ್ ಮಗ ಪೂತನೀನ್ ಹ್ಯಾಂಕೊಂದ್ರು ॥
ಶಂಣ್ ಕಾಲಂಗೆ ತೊಳ್ದಿ । ಕಿದಡ್ ಗಾಡಿನ್ಯಾಂಗೆ ಮುರದ್ ।

ಮಣ್ ತಿಂದ್ ಬಾಯಾಂಗೆಲ್ಲ । ಲೋಕನ್ಯಾಂಗೆ ತೋರ್‍ಸ್ರಿ।
ಕಣ್ ಮಾಯಾಕ ಮಾಡಿ । ಹಾರ್‍ಸರೆ ತೃಣಾವರ್ತನ ತೀರ್‍ಸರ್ ೩

ಜಿಡ್ಡಿ ಒರ್‍ಲಿಗ ಕಟ್ರಕಾಣಿ । ಅಡ್ಡೆ ಹ್ಯಾಕ ಎಳ್ದ್ರ ।
ದಡ್ ದಡ್ ಮತ್ತಿಮರು । ಎಯ್ಡ್ ಮುರ್ದುಕೆಡ್ದು ।
ಕಡ್ಡಿ ದೊಣ್ಣೆ ಹಿಡ್ಕ ಆಡೋ ಮಕ್ಕಳಂತ್ರಿ ಕಾಂತ್ ।
ಗಡ್ಡ ಹಣ್ಣಾದ್ಯತಿಗಳ್‌ವ್ರಿಗಡ್ಡ ಬದ್ದಿಕಿ ಹೋತ್‌ರಿ ೪

ಸಿಟ್ ಗಂಡಳ್‌ಂದ್ ನನ್ನ ತೊಟ್‌ಕಾ ಮುತ್ ಕೊಟ್ರು ।
ಹೊಟ್ಟೆ ಮೇಲ್ ಹೊಟ್ಟೆ ಬೆಚ್ಚಿ । ಲೊಟ್ಟಿಂಗ್ ಪಟ್ಟಂಗ್ ಕುಟ್ರು ।
ಕೆಟ್ಟಾರ್ ಬೈದನನ ಗಂಡ । ಕೇಂದ್ರೆ ವಿರಾಣ ಬೆಚ್ಚೆ ।
ಸಿಸ್ಟಿಪತಿ ಗೋವಿಂದ್ ಮೂರ್ತಿ ದಾಸರ್‌ಗೆಲ್ಲಾ ಶ್ರೇಷ್ಟ್ ೫

## ೩೨೩

ದಮ್ಮಯ್ಯ ಸೆರಗ ಬಿಡೊ । ಶ್ರೀಕೃಷ್ಣಯ್ಯ । ಕರಮುಗಿವೆ ।
ಸಮ್ಮತವಲ್ಲಿದು ನಿನಗೆ । ನಿನ್ನಮ್ಮನೊಳ್ ಪೇಳುವೆ ಹೀಗೆ ॥
ಧರ್ಮವೆ ಪತಿವ್ರತ ಕರ್ಮಕೆ ಎನ್ನಯ ।
ಅಮ್ಮನು ಕೇಳಿದರ್ ಸುಮ್ಮನೆ ಇರುವಳೆ ೧

ಸುಮನಸರು । ತೋಷಿಪರೆ ।
ನಿನ್ನ ರಮಣಿಯು ತಾನ್ ಕೋಪಿಸಳೇ ॥
ಸಮವೆಂದೂ ಪೇಳುವನೇ । ಎನ್ನ ರಮಣನಿದ ತಾಳುವನೇ ।
ಭ್ರಮಿತ ಕೋಪದಿ ಎನ್ನ । ಯಮನೆಡೆಗಟ್ಟನೇ ।
ಸಮಯವಲ್ಲಿದು ಕೇಳ್ । ಕಮಲದಳಾಕ್ಷನೆ ೨

ಇಂದೆನ್ನ ಕುಲವೆರಡೂ ।
ತಾವ್ ಹೊಂದದೆ ದುರ್ಗತಿ ಜರದೂ ।
ನಿಂದೆಗೆ ನಾ ಗುರಿಯಾಗಿ ।
ಯಮಬಂಧಕೇ ಸಿಲುಕನೆ ಪೋಗಿ ।

ಇಂದೆನ್ನಯ ವ್ರತ ಕುಂದದ ತೆರದಲೀ
ಚಂದದಿ ಪೊರೆ ಗೋವಿಂದದಾಸನ ಪ್ರಿಯಾ ೩

## ೩೨೪

ನಮೋ ಮಾಧವಾ । ಸುಜನ ಬಾಂಧವಾ ।
ನಮೋ ಕುಮುದನಯನಾ ಪ

ಸುಮನಸಾದಿ ಮುನಿನಿಕರ ನಮಿತಪದ ।
ಪದ್ಮಚಕ್ರಧಾರೀ ಶ್ರೀ ಶೌರೀ ॥ನಮೋ ೧

ರಂಗವಿಠಲ ನೀಲಾಂಗ ಜಯತು ನರಸಿಂಗ ಸುಜನ ಸಂಗಾ ॥
ಅಂಗಜಪಿತ ಕಾಳಿಂಗ ಮಥನ
ಸಂಗೀತ ಗಾನಲೋಲಾ ಗೋಪಾಲ ॥ನಮೋ॥ ೨

ಇಂದಿರೇಶ ಅರ । ವಿಂದ ಹೃದಯ ಆ– ।
ನಂದ ಚಂದ್ರವದನಾ ॥
ಸಿಂಧುಶಯನ ಭವ । ಬಂಧ
ಹರಣ ಗೋವಿಂದದಾಸನ ಪ್ರೇಮೀ.......॥ ನಮೋ ॥ ೩

## ೩೨೫

ನಲ್ಲ ಕೃಷ್ಣನ ಬರಹೇಳಿಂದುಮುಖಿಯೇ
ನಿಲ್ಲದೇ ಕರೆತಾರೆ ಪೋಗಿಂದು ಸಖಿಯೇ ಪ

ಗುಲ್ಲು ಮಾಡದೇ ನೀನು ಗುಟ್ಟಾಗಿ ಪೇಳಿನ್ನು
ಸುಳ್ಳಲ್ಲ ಕಬ್ಬಿಲ್ಲನುರುಬೆ ಸೈರಿಸಲಾರೆ ಅ.ಪ

ತೊಂದರೆ ಏನಿಂದು ಪರ್ವ ದಿವಸವಲ್ಲ
ಸುಂದರ ಮೇಷ ಸಂಕ್ರಾಂತಿ ಏನಲ್ಲಾ ॥

ಹಿಂದು ಮತದ ಎಳ್ಳಮಾವಾಸೆಯಲ್ಲಾ
ಚಂದಿರ ಮುಖಿ ಯುಗಾದಿಯ ಪಾಡ್ಯವಲ್ಲಾ ೧

ಭಾನು ಬಿದಿಗೆ ಅಕ್ಷತ್ತದಿಗೆ ಏನಲ್ಲಾ
ವಿನಾಯಕನ ಚೌತಿ ನಾಗರಪಂಚಮಿಯಲ್ಲಾ ॥
ಸಾನುರಾಗದ ಚಂಪಾ ಷಷ್ಠಿ ರಥಸಪ್ತಮಿ
ಗೋಕುಲಾಷ್ಟಮಿಯಲ್ಲಾ ಮಹಾ ನವಮಿಯಲ್ಲ ೨

ಎತ್ತಿದ ದಶಮಿ ಪ್ರಥಮ್ಯೆಕಾದಶಿಯಲ್ಲಾ
ಉತ್ಥಾನ ದ್ವಾದಶಿ ಶನಿತ್ರಯೋದಶಿಯಲ್ಲಾ ॥
ಉತ್ತಮನಂತ ವ್ರತ ನೂಲಹುಣ್ಣಿಮೆಯಲ್ಲಾ
ಚಿತ್ತಜನಾಟಕ್ಕೆ ಗೋವಿಂದ ಬರಲಿಲ್ಲಾ ೩

## ೩೨೬

ನಿನ್ನ ನೋಡಿ ಧನ್ಯನಾದೆನೊ ಶ್ರೀಕೃಷ್ಣ ದಯದಿ
ಮನ್ನಿಸಯ್ಯ ಮರೆಯ ಹೊಕ್ಕೆನು ಪ

ಅನ್ನಪಾನದಿಂದ ಬೆಳೆದ ತನುವು ಸ್ಥಿರವಿದೆಂದು ನಂಬಿ
ಮುನ್ನ ಮತಿಹೀನನಾಗಿ ನಿನ್ನ ಸ್ಮರಣೆ ಮರೆತೆ ಅ.ಪ

ಮಾಯ ಪಾಶದಲಿ ಸಿಲುಕಿದೆ
ಯನ್ನನಗಲಿ ಅಳಿದ ತಾಯಿ
ತಂದೆಯರಿಗೆ ಮರುಗಿದೇ ಪ್ರಿಯ
ಮಡದಿ ಪರಸ್ತ್ರೀಯರಲಿ ಮೋಹವೆರಸಿ
ಮರುಳನಾದೆ ಕಾಯ ಸುಖವನೆಣಿಸಿ
ಸರ್ವೇ ನ್ಯಾಯ ತಪ್ಪಿ ನಡೆದೆ ಕೃಷ್ಣಾ ೧

ಹಲವು ಜನ್ಮವೆತ್ತಿ ತೊಳಲಿದೇ ತರಳನೆನಿಸಿ
ಹಲವು ಜಾತಿ ಮೊಲೆಯ ಭುಜಿಸಿದೆ

ಹಲವು ದೇಶಗಳನು ಸುತ್ತಿ ಹಲವು
ಕ್ರೂರಕೃತ್ಯ ಗೈದೆ ತಲೆಯ ಹಿಂದೆ
ಇರುವ ಮೃತ್ಯು ನೆಲೆಯನರಿಯದಿರ್ದೆ ಕೃಷ್ಣಾ ೨

ಆಶಾಪಾಶಗಳಲಿ ಸರ್ವ ದೋಷ ಮೋಸವೆಣಿಸದಾದೆ
ಲೇಸ ಕಾಣೆ ಮುಂದೆ ಯಮನ ಪಾಶಕರ್ಹನಾದೆ ಕೃಷ್ಣಾ ೩

ಅರಿಗಳಾರು ಮಂದಿ ದೇಹದಿ ನೆಲಸಿರ್ದು ಎನ್ನ
ಮರುಳುಗೊಳಿಸೆ ಇಂದ್ರಿಯ ಸಹಾಯದಿ
ನರವು ಮಾಂಸ ಅಸ್ಥಿಯಿಂದ ವಿರಚಿಸಿದ ದೇಹವಿದನು
ಪರಿಪರಿಯ ಶೃಂಗರಿಸುತ ಸ್ಮರನ ತೆರದಿ ಮೆರೆದೆ ಕೃಷ್ಣಾ ೪

ಒಂದು ದಿನವು ಸುಖವ ಕಾಣೆನೂ ಈ ಜೀವನ
ಸಂಬಂಧಿಗಳ್ಯಾರೆಂಬುದನರಿಯೆನೂ
ಬಂಧು ನೀನೇ ಸರ್ವಪ್ರದನು ಮುಂದೆ ಜನುಮವೆತ್ತದಂತೆ
ಬಂದು ಎನ್ನ ಸಲಹೋ ಗೋವಿಂದದಾಸನೊಡೆಯ ಕೃಷ್ಣಾ ೫

## ೩೨೭

ನಿನ್ನ ನೋಡಿ ಧನ್ಯನಾದೆನೋ ಓ ಲಕ್ಷ್ಮೀರಮಣಾ
ಮನ್ನಿಸೆನ್ನ ಮರೆಯ ಹೊಕ್ಕೆನೊ ಪನ್ನಗೇಂದ್ರ
ಶಯನ ನಿನ್ನ ಪಾದ ನಂಬಿದೆನ್ನ ಮನ್ನಿಸದೆ
ಮರೆವರೇನೋ ಘನ್ನ ಓ ಶ್ರೀ ಕೃಷ್ಣಮೂರ್ತಿ ಪ

ಲಾಲಿಸೆನ್ನ ಮಾತನೊಂದನೂ
ಶ್ರೀಕೃಷ್ಣಮೂರ್ತಿ ಪಾಲಿಸೆನ್ನ
ಪ್ರೀತಿಯಿಂದಿನ್ನೂ ಬಾಲಬುದ್ಧಿಯಿಂದ ಗೈದ
ಹಾಳುಕೃತ್ಯವನ್ನು ಮರೆತು ಕಾಲನೊಶಕೆ
ಕೊಡಿಸದೆನ್ನ ಪಾಲಿಸಯ್ಯ ಲಕ್ಷ್ಮೀರಮಣ ೧

ಒಡೆಯ ನೀನೆಂದೆಂಬುದರಿಯದೆ
ಓ ಲಕ್ಷ್ಮೀರಮಣ ಮಡುವ
ಧುಮುಕಿದಾನೆಯಂತಾದೆ
ಒಡಲ ಸುಖವೆ ಬಯಸಿಗ್ಯೆವ
ಪಿಡಿದ ಮಡದಿ ಮಕ್ಕಳೆಂಬ
ಕಡು ಮಮತೆಯಿಂದ ನಿನ್ನ
ಅಡಿಯ ಭಜಿಸದಾದೆ ಕೃಷ್ಣಾ ೨

ಮೋಸಹೋಽನಿನಿತು ತಿಳಿಯದೇ ಶ್ರೀಕೃಷ್ಣಮೂರ್ತಿ
ಗಾಸಿಯಾದೆ ಮಾಯಾಕೊಳಗಾದೆ
ಆಸೆ ಪಾಶಗಳಲಿ ಸಿಕ್ಕಿ ಈಸು ಸುಖವನಿನಿತು ಕಾಣೆ
ಕೇಶವಾ ಗೋವಿಂದ ನಿನ್ನ ದಾಸನೆನಿಸೆ ಲಕ್ಷ್ಮೀರಮಣ ೩

## ೩೨೮

ನಿನ್ನನು ನಂಬಿದೆನು ನಾ ಸುಂದರ ಗೋವಿಂದನೇ । ಪನ್ನಗಾಶಯನ
ಗೋಪಿ ಕಂದನೇ । ಮುಕುಂದನೆ
ದುಷ್ಟರ ಶಿಕ್ಷಿಪ ಘೋರ ಕಾಲನೆ । ರಣಶೂರನೆ ।
ಶಿಷ್ಟರ ರಕ್ಷಿಪ ಭಕ್ತಪಾಲನೆ ಗುಣಶೀಲನೇ ಪ

ಹೊಳೆವ ಮತ್ಸ್ಯಾವತಾರನೆನ್ನಿಸಿ
ಇಳೆಯ ಭಾರವ ಕಳೆದನೆ ॥
ಜಲದಿ ವಾಸವ ಮಾಡಿಕೊಂಡು ।
ಜಲದಿನಾಲ್ದೆಸೆ ನಲಿದನೆ ೧

ಧರೆಯ ಬೆನ್ನಲಿ ಪೊತ್ತು ನೆಲಸಿದ
ಕೂರ್ಮನೆ । ಸ್ಮೃತಿ ಧರ್ಮನೇ ॥
ಶರದ ಸೇತುವೆ ಧರಿಸಿ ನಿಂದಾ ।
ಮರ್ಮವರಿತೇ । ಸುಶರ್ಮನೆ ೨

ರಸತಳದಿ ಕೆಸರೊಳಗೆ ಹೊರಳುವ
ಹಂದಿಯೇ । ಭೂಮಿ ತಂದಿಯೇ ॥
ಬಸುರ ಬಗಿದಾ ಹೇಮನೇತ್ರನ
ಕೊಂದೆಯೇ ಮಮ ತಂದೆಯೇ ೩

ಕಂಬದಲಿ ಮೈದೋರಿ ತರಳನ ।
ಪೊರೆದನೇ ನರಸಿಂಹನೇ
ಕುಂಭಿನಿಯ ಬಾಧಿಸಲು ದುರುಳನ ।
ಕರುಳನೇ ಹರಿದೆಳದನೇ ೪

ಭೂಮಿಯಲಿ ಮೂರಡಿಯ
ದಾನವ ಕೊಟ್ಟಾನೇ ಬಲಿ ಕೆಟ್ಟಾನೇ
ವಾಮನನು ಎರಡಡಿಯ ತೀರಿಸಿ ।
ಮೆಟ್ಟುತಲಿ ವರ ಕೊಟ್ಟನೇ ೫

ಕೊರಳ ಕುತ್ತಿಯೆ ಮಾಲೆಮಾಡುತ್ತಾ
ಹೆತ್ತವಳ ಕತ್ತರಿಸಿದೆ ॥
ಧರಣಿಪರ ಶಿರವದೆ ಭಾರ್ಗವ ।
ಸತ್ಯ ಭೂಮಿಯ ಸುತ್ತಿದೆ ೬

ವನದಿ ರಾಮನ ಸತಿಯ
ರಾವಣ ಕದ್ದನೇ ವಿಷ ಮೆದ್ದನೇ ॥
ವನದಿ ಕಪಿಗಳ ಕೂಡಿ ದೈತ್ಯರ
ಕೊಂದನೆ ಸೀತೆಯ ತಂದನೇ ೭

ಸರಸಿಯಲಿ ಮೊರೆಯಿಡುವ ಗಜವ ।
ಕಾಯ್ದನೇ ಯಾದವನೇ ॥
ಧುರದಿ ಕಾಳಿಯ ಶಿರದಿ ನಲಿದ ।
ದೇವನೇ ಮಾಧವನೇ ೮

ಬತ್ತಲೆಯ ಬೌದ್ಧಾವತಾರನೆ ।
ಮೃತ್ಯು ತೆಕ್ಕಲ ಹೊಕ್ಕನೇ ॥
ಸತ್ಯ ಧರ್ಮವನರಿಯದಧರ್ಮರ ।
ಸೊಕ್ಕ ಮುರಿವನೆ ಪಕ್ಕನೆ ೯,೧೦

ಕಲಿಯುಗದ ಕಡುಪಾಪಿ ನರರನು ।
ಕಡುಗದಿಂದಲಿ ಕಡಿದನೇ ॥
ಕಾಲ ಭೈರವನಂತೆ ಕಲ್ಕ್ಯನು ।
ಕಿಡಿಯನುಗುಳುತ ಸುಡುವನೇ ೧೧

ದಾಸಜನರನು ಪೊರೆವ
ಶ್ರೀನಿವಾಸನೇ । ಜಗದೀಶನೇ ।
ಶೇಷಶಯನನೆಂದೆನಿಪ ।
ಗೋವಿಂದನೇ । ಗುಣವೃಂದನೇ ೧೨

## ೩೨೯

ನೀನೇ ಗತಿ ಮಾಧವಾ ದೇವರದೇವ
ನೀನೇ ಗತಿಯು ನಮ್ಮ ಮಾನಾಭಿಮಾನವ
ಹಾನಿಗೊಳಿಸದನುಮಾನವಿಲ್ಲದೆ ಕಾಯೋ ಪ

ಸಾಕಾರ ಸೌಭಾಗ್ಯವೂ ಸರ್ವವೂ ಸರ್ವ
ಶೋಕಕ್ಕೆ ಕಾರಣವೂ
ಬೇಕಾದ ಕಡುರಸ ಶಾಕಪಾಕದ ರೂಪಿ
ಶ್ರೀಕೃಷ್ಣ ನಿನ್ನಯ ನಾಮದಿಂದಧಿಕನೆ ೧

ಸಕಲ ಸಂಭ್ರಮವು ನೀನೇ ನಿನ್ನನು ಎನ್ನ
ಸಖನೆಂದು ನಂಬಿದೆನು
ಸಕಲ ಚರಾಚರ ಪ್ರಾಣಿಗಳಿಗೆ ಸರ್ವ
ಸುಖದುಃಖವುಣಿಸುವ ಸಕಲ ತಂತ್ರನೇ ೨

ಆದಿಮೂರುತಿಯು ನೀನೇ ಧರ್ಮಾಧರ್ಮ
ಶೋಧಿಸುವವನು ನೀನೇ
ವೇದಗಮ್ಯನೆ ಯೆನ್ನ ಖೇದಮೋದವ ನಿನ್ನಲ್ಲಿ
ಪಾದಕರ್ಪಿಸಿದೆ ಗೋವಿಂದದಾಸನೆ ಕಾಯೊ ೩

## ೩೩೦

ನೀನೆ ರಕ್ಷಿಸೋ ಎನ್ನ ಓ ಶ್ರೀನಿವಾಸ
ದಾನವಾಂತಕ ದೀನಪಾಲ ಲಕ್ಷ್ಮೀಶಾ ಪ

ಮೌನಿ ಹೃದಯಾ ಸುಮವಾಸಾ ಸರ್ವೇಶಾ
ಮೌನದಿಂದಿರಲೇನೋ ಕಾಣೆ ವಿಶೇಷಾ
ಮೌನ ಮಂತ್ರವು ಸ್ನಾನಾ ಧ್ಯಾನಾವನರಿಯೆ
ದೈನ್ಯ ಭಕ್ತಿಯೊಳ್ ಬೇಡಿಕೊಂಬೆ ಶ್ರೀಹರಿಯೆ ೧

ಲೋಕನಾಥನೆ ಜವ ಶೋಕವಿಹಾರಾ
ಏಕರೂಪನೆ ಸರ್ವ ಲೋಕ ಸಂಚಾರಾ
ನಾಕ ಸುಖವ ನಾನು ಬಯಸುವನಲ್ಲ
ಬೇಕಾದ ಸೌಭಾಗ್ಯವೆನಗಿತ್ತೆ ಎಲ್ಲಾ ೨

ಮಂದರೋದ್ಧರ ಅರವಿಂದ ಲೋಚನನೇ
ಇಂದಿರೆಯರಸ ಮುಕುಂದ ಮಾಧವನೇ
ವಂದಿಸೂವೆನು ದಂದಶೂಕ ಶಯನನೇ
ಸುಂದರಮೂರ್ತಿ ಗೋವಿಂದದಾಸನನೇ ೩

## ೩೩೧

ಪರಿಪರಿಯಲಿ ವರ್ಣಿಸುವೆ ಕಳಾನಿಧಿಯಾ
ನರಜನರು ಅರಿತವನ ಸ್ಮರಿಸಿರಯ್ಯಾ ಪ

ಕಾಲುಗಳು ಹದಿನೆಂಟು ತೋಳುಗಳು
ಹತ್ತು ಕಣ್ಣಾಲಿಗಳು ಇಪ್ಪತ್ತ ಒಂದು
ಸಾಲಾಗಿ ರಂಜಿಸುವ ಶಿರಸಂಗಳೀರೈದು
ಮೇಲಾದ ಫಣಿಂಗಳಾರ ಹನ್ನೆರಡು
ನೀಳವಾಗಿಯೆ ಹೊಳೆವ ಕೋರೆದಾಡೆಗಳೆರಡು
ಗಾಳಿಯನು ಭೇದಿಸುವ ಬಾಲ ನಾಲ್ಕು
ಪೇಳಲೇನಿದನು ಕೇಳ್ ನಾಲಿಗೆಗಳ್ಹನ್ನೊಂದು
ಮೂಲೋಕದೊಡೆಯನ ಪೀಠದಲಿ
ರಂಜಿಸುವ ದೇಹವೇಳು ೧

ಧರಣಿಯೊಳಗಿನ ಪರಿವಾರದವರಿಗೆಲ್ಲ
ಪರಸ್ಪರನೆ ವೈರತ್ವ ಬೆಳೆಸಿಕೊಂಡಿಹುದೂ
ಉರಗ ಮೂಷಕನಿಂಗೆ ಕರಿಮುಖಗೆ ಕೇಸರಿಗೆ
ಗಿರಿಜೆ ಭಾಗೀರಥಿಗೆ ಉರಿನಯನ ಚಂದ್ರನಿಗೆ
ಎತ್ತು ವ್ಯಾಘ್ರನ ತೊಗಲಗೆ ಮರೆಯ ಹೊಕ್ಕರೆ ಕಾಯ್ವ
ನರಕೇಸರಿಯ ತೆರದಿ ಕರುಣಾಳು ಭಕ್ತವತ್ಸಲ ದೇವನಾ ೨

ಬಲಿದಾಗ್ನಿ ಸಖ ಸರ್ವ ನಿಳಯದೀವಿಗೆ ವೈರಿ
ಹಲವು ನಾಸಿಕದ ಸಂಚಾರಿಯಾ ಹಾರದಲಿ
ಬೆಳೆದ ದೇಹದ ಮೇಲೆ ಮಲಗಿ ನಿದ್ರೆಯ
ಗೈವ ನಳಿನ ನಿಳಯಳ ರಮಣ ಜಲಜಾಕ್ಷ
ಗೋವಿಂದನನುಜೆಯರಸ ಹಲವು
ಮಾತೇನು ಕೇಳ್ ತಲೆ ಮೇಲೊಂದು
ಕೊಂಬಿನ ಋಷಿಯ ಪಿತನ ಚರಣಕೆ
ಕೈಯ್ಯ ಮುಗಿದು ತಲೆಬಾಗಿ ೩

## ೩೩೨

ಪಾಲಗಡಲ ಶಯನಾ । ಪಂಕಜನಯನ ।
ಪಾಲಗಡಲ ಶಯನಾ ಪ

ಫಾಲನೇತ್ರ ಪರಿ । ಶೋಭಿಪ ಭಕ್ತ । ವಿಶಾಲ ಕರುಣ ಗುಣ ।
ಶೀಲಸಮ್ಮೋಹನ ೧

ನೀಲಮೇಘ ನಿಭಾಂಗನೆ । ನಿರ್ಮಲಚಿತ್ತ ।
ಶೂಲಪಾಣಿಯ ಸಖನೆ ।
ಬಾಲತನದಿ ಗೋಪಬಾಲಕಿಯರ ಮನ ।
ದಾಲವ ಸಲಿಸಿದ ಶ್ರೀಲೋಲನೆ ಪೊರೆ ೨

ಕೋಟೀ ಸಂಖ್ಯೆಯೊಳ್ ದೈತ್ಯರ ।
ಘಾತಿಸಿ ನರ । ನಾಟಕದಲೀ ಭಕ್ತರ–
ಆಟಪಾಟ ಸಂತೋಷದ ಕೂಟದಿ ।
ನಾಟಕವೆನಿಸಿದೆ । ಹರಿ ಗೋವಿಂದನೆ ॥ಪಾಲ॥ ೩

## ೩೩೩

ಪಾಲಿಸು ಭಕ್ತವತ್ಸಲನೇ ನಿನ್ನ
ಬಾಲಕನಂತೆನ್ನ ಸಲಹೋ ಶ್ರೀವರನೇ ಪ

ಬಾಲ ಪ್ರಹ್ಲಾದ ಧ್ರುವನು ಚಂದ್ರಹಾಸ
ಮೇಲಾದ ಮುಚುಕುಂದನಂತೆನ್ನ ಸತತ ಅ.ಪ

ಸುರರು ನಾರದರು ಕಿನ್ನರರು ಮುನಿ
ವರರು ವಸಿಷ್ಠ ವಾಲ್ಮೀಕಿ ಗೌತಮರು
ಗರುಡ ಗಂಧರ್ವ ಗಾಯಕ ಯಕ್ಷ ವಾಸುಕಿ
ತರಣಿ ನಂದನ ಆಂಜನೇಯ ಜಾಂಬವರಂತೆ ೧

ನಳ ನಹುಷ ಸಗರಂಬರೀಷ ನಿನ್ನ ಒಲಿಸಿ
ಭಗೀರಥ ಬಲಿಯು ನಾಕೇಶ ಸಲಹೆಂದು ಹರಿಶ್ಚಂದ್ರ
ರುಕ್ಮಾಂಗದ ವಿಭೀಷಣಗೊಲಿದ
ಧರ್ಮಜ ಪಾರ್ಥ ಕರಿರಾಜನಂತೆ ೨

ಚರಣದಿ ಅಹಲ್ಯೆಯನು ಕಾಯ್ದೆ ನೀನು
ಪೊರೆದೆ ಶಬರಿಯನ್ನು ಕುಬುಜೆಯನೆನದೆ
ಹರುಷದಿ ಎರಡೆಂಟು ಸಾವಿರ ತರುಣಿಯರೊಡಗೂಡಿ
ಸೆರಗಿಗೆ ವರವಿತ್ತೆ ದ್ರುಪದನಂದನೆಗೆ ೩

ಸಿಂಧುಶಯನ ನಿನ್ನ ಕರುಣ ಎನ–
ಗೆಂದಿಗೆ ತೋರುವೆ ಶ್ರೀಲಕ್ಷ್ಮೀರಮಣ
ಮಂದರಧರ ಅರವಿಂದವದನ ಹರಿ
ನಂದನ ಕಂದ ಗೋವಿಂದನೆ ದಯದಿ ೪

## ೩೩೪

ಪಾಲಿಸು ಲೋಕಾ । ಪಾಲ ಶ್ರೀಲೋಲಾ ।
ಪಾಲಯಾಚ್ಯುತ ವನಮಾಲ ಗೋಪಾಲಾ ಪ

ಅಗಣಿತ ಮಹಿಮಾ । ಆಶ್ರಿತದಾತಾ ।
ಆಘಹರ ನಗಧರ । ಆತ್ಮಾಭಿರಾಮಾ ೧

ಶಾಂತ ಸ್ವರೂಪಾ । ನಿಶ್ಚಿಂತ ನಿರಾಮಯ ।
ಅಂತ್ಯರಹಿತ । ರಮಾಕಾಂತ ಪ್ರಖ್ಯಾತಾ ೨

ನಂದನ ನಂದಾ । ನಂದ ಮುಕುಂದಾ ।
ಸುಂದರ ಮೂರ್ತಿ । ಗೋವಿಂದದಾಸನ ವಂದ್ಯ ೩

## ೩೩೫

ಪೊರೆ ದಯದಿ ಮಾಧವಾ ಕರುಣದಿ ಶ್ರೀಕೇಶವಾ ಪ

ಉರಗವಿಷ್ಟರ ಸುರಶ್ರೇಷ್ಠ ಸುಧಾಕರ ದುರಿತಹರಾ ಅ.ಪ

ಕರುಣಾಕರ ಸರಸಿಜಾಕ್ಷ ದಾಮೋದರ
ಸುರತಟಿನೀ ತಾತನೆ ಕರುಣದಿ ಶ್ರೀನಾಥನೇ
ತರಳ ಪ್ರಹ್ಲಾದನ ಪೊರೆದ ನರಸಿಂಹನೇ
ಸ್ಮರಿಸುವೆನೇ ನರವರನೆ ಗರುಡಗಮನ ಶಂಭುಪ್ರಿಯ ೧

ಮಂದರೋದ್ಧಾರನೆ ಸಿಂಧು ಗಂಭೀರನೇ
ನಂದನಂದನ ಮುಖಚಂದ್ರ ಪ್ರಕಾಶನೇ
ವಂದಿಪೆನೇ ಸುಂದರನೇ
ಸಿಂಧುಶಯನ ಗೋವಿಂದನೇ ೨

## ೩೩೬

ಬಂದೆವಯ್ಯ ಶ್ರೀಕೃಷ್ಣಮೂರ್ತಿ ನಿನ್ನ ಸುಂದರ
ಚರಣಾರವಿಂದ ನೋಡುವುದಕ್ಕೆ ಬಂದೆ ಪ

ಮಂದರೋದ್ಧರ ಅರವಿಂದ ನೇತ್ರಗೆ ನಮ್ಮೊ-
ಳಿಂದು ಕೃಪೆಯ ತೋರಿ ಸಲಹೋ ಸಚ್ಚಿದಾನಂದ ಅ.ಪ

ಭಾವಸಂವತ್ಸರ ಪೌಷ ಬಹುಳಮವಾಸೆ
ಮಹಾ ದೃಢದಿ ಸಮುದ್ರವ ಸ್ನಾನಗೈದು
ಆ ವಡಭಾಂಡೇಶ್ವರದಿಂದ ಬಲರಾಮ
ದೇವರ ಕಂಡು ನಾವೆರಗಿ ಕೈಮುಗಿದೀಗ ಬಂದೆ ೧

ಮಧ್ವಸರೋವರವೆಂಬ ತೀರ್ಥದಿ ಮಿಂದು
ಶ್ರದ್ಧೆ ಭಕ್ತಿಯೊಳ್ ನಿನ್ನ ಕಂಡು ಬಲಬಂದು
ಬದ್ಧಾಂಜಲಿಯ ನೀಡಿ ಸ್ಮರಿಸಿ ವಂದನೆಗೈದು
ಉದ್ಧರಿಸೆಂದು ವರವ ಬೇಡುವದನೀಗ ಬಂದೆ ೨

ಅಷ್ಟಾವಧಾನ ಸೇವೆಯೊಳು ನಿನ್ನನು ಯತಿ
ಶ್ರೇಷ್ಠರು ಪೂಜಿಸಿ ವರವ ನೀಡಿ ಕೊಟ್ಟ

ಮಂತ್ರಾಕ್ಷತೆ ತೀರ್ಥ ಪ್ರಸಾದವ ಪಡೆದು
ನಮ್ಮಯ ಭವಕಷ್ಟ ನೀಗುವುದಕ್ಕೆ ಬಂದೆ ೩

## ೩೩೭

ಬಾ ಬಾ ಬಾ ಬಾರೋ ಕೃಷ್ಣ
ಬಾರೋ ಮುಖವ ತೋರೋ ಪ

ಬಾರೋ ಮುಖವ ತೋರೋ
ಸರಸಾಮೃತ ಬೀರೋ ಬಾ ಬಾ ಬಾ ೧

ಸಾ ಸಾ ಸಾ ಸಾಕೋ ನಿನಗೀ
ಲೋಕಮಾಯ ಮೋಹನಾ ।
ಲೋಕಮಾಯ ಮೋಹನಾ ।
ಶೋಕನೇಕ ನಾಶನಾ ೨

ಕೋ ಕೋ ಕೋ ಕೊಡಿಸೊ
ನಮ್ಮ ಉಡುವ ಶೀರೆಕುಪ್ಪಸಾ ।
ಉಡುವ ಶೀರೆ ಕುಪ್ಪಸಾ ।
ಮಡದಿಯರಿಗೆ ಒಪ್ಪಿಸಾ ೩

ಅಲ್ಲ ಲ್ಲ ಲ್ಲ ಲ್ಲದಿದನೆಲ್ಲ
ಗೋಪಿವಲ್ಲಭನೊಳ್ । ಎಲ್ಲ
ಗೋಪಿ ವಲ್ಲಭನೊಳ್ ।
ಸೊಲ್ಲಿಸುವೆವು ನಿಲ್ಲದೇ ೪

ನಂದಂದನ ನಂದ ಗೋಪಿ ।
ಕಂದನೇ ಮುಕುಂದನೆ ।
ಕಂದನೇ ಮುಕುಂದನೇ ।
ಸುಂದರಾ ಗೋವಿಂದನೇ ೫

## ೩೩೮

ಬಾ ಬಾರೋ ಬಾರೋ ಬೇಗ ಬಾರೊ ಮುರವೈರಿ ।
ಬಾರೋ ಮುರವೈರಿ ।
ಬಾರೋ ಮುರವೈರಿ ತೋರೋ ದಯವ ಶೌರೀ ಪ

ನೀನಲ್ಲದಲ್ಲದೆಮ್ಮ ಇನ್ಯಾರು ಇನ್ನು ಪೊರೆವರು ।
ಯಾರು ಇನ್ನು ಪೊರೆವರೂ । ಯಾರು ನಮ್ಮ ಕರೆವರೂ ೧

ಕಾಯದೊಳು ಮಾಯ ತುಂಬಿ । ಪ್ರಾಯ ಮದಗರ್ವದೀ ।
ಪ್ರಾಯಮದಗರ್ವದೀ । ಹೇಯವಾದೆ ಸರ್ವದೀ ೨

ಬಂಧುಗಳು ಬಾಂಧವರೆಂದೆಂದು । ಮನ ಬಂದದಿ ।
ಎಂದು ಮನ ಬಂದದೀ । ನೊಂದೆನು ಗೋವಿಂದನೇ ೩

## ೩೩೯

ಬಾರೋ ಬಾ ಮನೆಗೇ ರಂಗಯ್ಯ ನೀ ।
ತೋರೋ ಮುಖವೆನಗೆ ಪ

ಘೋರ ಶರೀರ ಸುಂ । ದರ ಸೂಕ್ಷ್ಮಾಕಾರನೆ ।
ಕ್ರೂರ ದಯಾಕರ ಧೀರ ಉದಾರಿಯೆ ಅ.ಪ

ನೀಲಮೇಘ ಶ್ಯಾಮ ನಿರ್ಮಲವನ । ಮಾಲ ಪೂರ್ಣಕಾಮ ।
ಕಾಲ ಭಯ ವಿದೂರ । ಫಾಳನೇತ್ರನ ಮಿತ್ರ ।
ಪಾಲಾಬ್ಧಿವಾಸ ಶ್ರೀಲೋಲ ಗೋಪಾಲನೇ ೧

ಶೇಷಶಯನ ದೇವಾ । ಭಕ್ತರ ಭವ ।
ದೋಷಹರ ಸಂಜೀವಾ ।
ನಾಶರಹಿತ ಸರ್ವ । ಆಶವಿನಾಶನ ।
ಭಾಸುರಾಂಗನೆ ಜಗ । ದೀಶ ಕೇಶವಮೂರ್ತಿ ೨

ಕಾಲೊಳಂದುಗೆಯೂ । ಪೀತಾಂಬರ ।
ಶಾಲುಮುದ್ರಿಕೆಯೂ । ತೋಳ ಸರಿಗೆ ಬಳೆ ।
ವೈಜಯಂತಿಯ ಮಾಲೇ ಮೇಲಾದ
ರತ್ನಕಿರೀಟಕುಂಡಲಧಾರೀ । ಗರುಡನ ಏರಿ ೩

ಶಂಕೆಯಿಲ್ಲದ ಭಕ್ತರೂ । ನಿನ್ನಯ ಸದ್ಯ–
ಶಾಂಕದಿ ಸೇವಿಪರೂ । ಶಂಖಚಕ್ರಗದಾ ।
ಪದ್ಮವ ಧರಿಸಿದ । ಪಂಕಜನೇತ್ರವೈ– ।
ಕುಂಠ ವೆಂಕಟಪತೇ ೪

ಧಾರುಣಿ ಭಾರವನೇ । ಇಳುಹಲವ ।
ತಾರಗಳೆತ್ತುವನೆ । ಚಾರು ಭುಜಾನ್ವಿತ ।
ಕೌಸ್ತುಭ ಮಣಿಹಾರ । ವಾರಿಜನಾಥ
ಗೋವಿಂದದಾಸನಿಗೊಲಿದು ೫

## ೩೪೦

ಬಾರೋ ಮನೆಗೆ ಮಾಧವಾ । ದೇವರ ದೇವ ।
ಬಾರೋ ಮನೆಗೆ ಮಾಧವಾ ಪ

ಬಾರೋ ಮನೆಗೆ ದಯಾ । ತೋರೋ ಎನಗೆ ಜೀಯಾ ।
ವಾರಿಜನಯನಾ ಓ । ಕ್ಷೀರಾಬ್ಧಿ ಶಯನನೇ ॥ಬಾರೋ॥ ೧

ವೇದ ಗೋಚರ ನಿನ್ನಾ । ಪಾದ ನಂಬಿದ ಎನ್ನಾ ।
ಆದರಿಸೈ ಕರುಣೋದಯ ಮೂರುತೀ ॥ಬಾರೋ॥ ೨

ಸಿಂಧುವಸನದೀಶಾ । ಸುಂದರಾಂಗ ವಿಲಾಸ ।
ಇಂದಿರೆಯರಸ ಗೋ । ವಿಂದದಾಸನ ನಂದಾ ॥ಬಾರೋ॥ ೩

## ೩೪೧

ಬಾರೋ ಬಾರೋ ಭಯನಿವಾರಣ ಕೃಷ್ಣ ।
ಬಾರೋ ಬಾರೋ ದಯಸಾಗರನೇ ದೇವಾ ಪ

ನಳಿನೋದರ ಮೋಹನ ಕಾಮಿತರೂಪ ।
ನಳಿನ ದಳಾಯತ ನಯನ ಗೋವಳರಾಯ ೧

ನಿತ್ಯಾನಂದ ನೀಲಾಂಗ ನಿರ್ಮಲಚಿತ್ತ ।
ಧಾತ್ರಿಜಾಂತಕ ವಾಸುದೇವ ದೇವಕಿ ಪುತ್ರ ೨

ನಂದಾನಂದ ಮುಕುಂದ ಸುಂದರ ಕಾಯ ।
ಇಂದಿರೆಯರಸ ಗೋವಿಂದದಾಸನ ಪ್ರೀಯ ೩

## ೩೪೨

ಬುದ್ಧಿಯ ಪೇಳೇ ಗೋಪಮ್ಮ ನಿನ್ನ
ಮುದ್ದು ಮಗನ ಲೂಟಿ ಘನವಾದುದಮ್ಮ ಪ

ಸದ್ದು ಇಲ್ಲದ ಹಾಗೆ ಬಂದಾನೆ
ಕದ್ದು ಬೆಣ್ಣೆಯನೆಲ್ಲ ತಿಂದಾನೆ
ಎದ್ದೊಮ್ಮೆ ನೋಡಿ ನಾ ಗದ್ದಲ ಮಾಡಲು
ಸದ್ದು ಮಾಡದೆ ಕೃಷ್ಣ ಹದ್ದನೇರುತ ಪೋದ ೧

ಜಲಜ ಗಂಧಿನಿಯರು ಕೂಡೀ ನಾವು
ಜಲದೊಳಾಡುವುದನ್ನು ನೋಡೀ
ಜಲಜನಾಭನು ಮರದ ತಲೆಯ ಮೇಲ್ಕಟ್ಟಿದ
ಸುಲಿದಿಟ್ಟ ಸೀರೆಯ ಬಲರಾಮನನುಜ ೨

ಹಾಲ ಮಾರಲು ಪೋದ ಮಗಳಾ ಕಂಡು
ಮೇಲೆ ಬೀಳುತ ಮಾಡೆ ಜಗಳಾ

ಶಾಲೆಯ ಸುಲಿದು ಬತ್ತಲೆ ನಿಲ್ಲಿಸಿದನು
ಮೂರ್ಲೋಕದೊಡೆಯ ಶ್ರೀಲೋಲಗೋವಿಂದ ೩

## ೩೪೩

ಬೇಡುವೆ ನಿನ್ನನು ಜೋಡಿಸಿ ಕರಗಳ ।
ಕೂಡಲೆ ವರಗಳ । ನೀಡುವದೀಶನೆ ಪ

ನಂದನ ಕಂದ ಮುಕುಂದ ಮುರಾರೆ ।
ಸುಂದರ ಶುಭಕರ । ಮಂದರೋದ್ಧಾರ ೧

ಶಂಕರ ಹಿತನೇ ಪಂಕಜನಾಭನೇ ।
ವೆಂಕಟರಮಣನೆ । ಶಂಖಚಕ್ರಧರನೇ ೨

ಸುರನರ ಕಿನ್ನರ । ತುಂಬುರ ನಾರದರ್ ।
ಪರಿಪರಿಯಲಿ ನಿನ್ನ । ಸ್ಮರಿಸುತಲಿಹರೂ ೩

ಅಸುರರ ಬಾಧೆಯೊಳ್ । ಸುರರೆಲ್ಲ ಭಜಿಸಲು ।
ಕುಶಲದಿ ಭಕ್ತರ । ಪೊರೆದೆ । ಗೋವಿಂದನೇ ೪

## ೩೪೪

ಬೇಡುವೆ ವರಗಳ । ಜೋಡಿಸಿ ಕರಗಳ ।
ನೀಡು । ಕೃಪೆಯೊಳ ಮಾಡದೆ ಮುನಿಸುಗಳ ॥ಗೋಪಾಲ॥
ಬೇಡನು ಮರಗಳ ನೋಡುತ ತಪಗಳ ಮಾಡಲು ವರಗಳ ।
ನೀಡಿದೆ ಕರುಣದೊಳ್ ॥ಶ್ರೀ ಲೋಲ॥ ೧

ಜಪವನು ಮಾಡಲಾರೆ । ತಪವನು ಮಾಡಲಾರೆ ।
ಉಪವಾಸ ಮಾಡಲಾರೆ ॥
ಶಪಥವ ಮಾಡಲಾರೆನು ॥ ನಿನ್ನೊಳು ನಾನೂ ॥

ದ್ರುಪಜೆಯುಟ್ಟ ಸೀರೆ । ಕುಪಿತಾತ್ಮ ಸೆಳೆವರೆ ।
ಉಪಕರಿಸಿದನ್ಯಾರೆ ॥ ನಿಪುಣ ನೀ ದಯವ ತೋರೆ ॥ಮುರಾರೆ ೨

ಹಲು ನರ ಜನ್ಮವೆತ್ತೀ । ಹಲುಗಾವಲೊಳು ಸುತ್ತೀ ।
ಹಲು ಗೋವರ್ಧನವೆತ್ತಿ । ಹಲುಗೈದೆ ಸುರಶಕ್ತೀ ॥
ಗೊಲ್ಲರೊಳ್ ಅರ್ಥೀ ॥ ಕಲುಷವ ಬಿಡಿಸುತ್ತಿ ।
ಫಲ್ಗುಣ ಸಾರಥಿ । ಸಲಹೆನ್ನ ಮನದರ್ಥಿ ।
ಚೆಲುವ ಗೋವಿಂದ ಮೂರುತಿ । ದಾಸರೊಳ್ ಪ್ರೀತಿ ೩

## ೩೪೫

ಮರವನೇರಿ ಮಡುವದು ಮುಂದಾ ಶ್ರೀ ಕೃಷ್ಣ ಕಾಳಿ
ಶಿರವನೇರಿ ತಾಂಡವವಾಡಿದಾ
ಸ್ಮರಿಸಲವನ ತರುಣಿಯರಿಗೆ ವರವ ಪ್ರಾಣವಿರಿಸಿ ಕೊಟ್ಟು
ಶಿರದಿ ಚರಣ ಗುರುತನಿರಿಸಿ ಪೊರೆದ ಕಾಳಿಂಗನನು ಕೃಷ್ಣ ೧

ರಜತಗಿರಿಗೆ ಸದೃಶವೆನಿಸಿದ ಶ್ರೀಕೃಷ್ಣ ಯಮ–
ಳಾರ್ಜುನವೆಂಬ ಮರವ ಕೆಡಹಿದ
ಅಜಗರನ ನಿಜ ಉರಕೆ ಬಿಜಯಂಗೈದು ಸುಜನೋದ್ಧಾರಿ
ಭಜಿಸೆ ಗೋವ್ರಜವ ಕಾಯ್ದು ಅಜಗರನ ಸೀಳಿ ಕೃಷ್ಣ ೨

ಚಂದ್ರಮುಖಿಯರುಡುವ ಶೀರೆಯ ಶ್ರೀಕೃಷ್ಣನು ಮರದಿ
ಬಂಧಿಸಿಟ್ಟು ಮಾನಗಳೆವೆಯಾ
ನಂದನನ್ನು ಬಂದು ತುಡುಕಿದಂದು ಫಣಿಯ ಹೊಂದಿಸಿದೆ
ನಂದಗೋಪಿ ಕಂದ ಗೋವಿಂದದಾಸವಂದ್ಯ ೩

## ೩೪೬

ಮರೆತನೇನೇ ರಂಗ ಸ್ತ್ರೀಯರ
ಸುರತದ ಸುಖಸಂಗ ಪ

ಪರಿಪರಿ ವಿಧದಲಿ ಸರಸವನಾಡುತ
ಗುರುಕುಚ ಎದೆಗಿರಿಸಿ ಮುದ್ದಿಸುವುದ ಅ.ಪ

ಗೋವರ್ಧನವೆತ್ತಿ ವನದೊಳು
ಗೋವ್ಗಳೊಡನೆ ಸುತ್ತಿ
ಹಾವನು ಭಂಗಿಸಿ ಮಾವನ ಮರ್ದಿಸಿ
ಕಾಯದಿ ಘನತರ ನೋವಾಗಿದೆಯೆಂದು ೧

ಭಕ್ತ ಜನರಿಗೊಲಿದು ದೈತ್ಯರ
ಶಕ್ತಿಯಿಂದಲಿ ಗೆಲಿದು
ಭಕ್ತರಂದದಿ ವೀರಕ್ತಿಯ ತಳೆದನೆ
ನಕ್ತ ನಡತೆಗೆನ್ನ ಶಕ್ತಿ ಕುಂದಿಹುದೆಂದೂ ೨

ಎಣಿಕೆಯಿಲ್ಲದ ನಾರೀ ಜನರೊಳು
ಸೆಣಸಿ ರಮಿಸಿದ ಶೌರಿ
ದಣಿದು ಮನದಿ ಗೋವಿಂದನ ದಾಸರ
ಮನೆಯ ಸೇರ್ದನೆ ಮನುಮಥನನು ಜರೆಯುತ ೩

## ೩೪೭

ಮಾರ್ತಾಂಡ ಕುಲದೀಶ ದಶರಥನುದರದಿ
ಪುತ್ರನಾಗಿಯೆ ಜನಿಸಿ ರಾಘವ ವಿಶ್ವಾಮಿತ್ರರೆಜ್ಞವ
ಪಾಲಿಸಿ ತಾಟಕೀ ಮುಖ್ಯ ಧೂರ್ತ ದೈತ್ಯರ ಮಥಿಸಿ
ಅಹಲ್ಯದೇವಿಯ ಪಾಲಿಸಿ ಅರ್ಥಿಯಲಿ ವಿಥಿಲೇಖೆಗೆ
ಗಮಿಸುತ ಪೃಥ್ವಿಜಾತೆಯನೊಲಿಸಿ ಮಾರ್ಗದಿ ಕಾರ್ತವೀರ್ಯಾಂತಕನ
ಭಂಗಿಸಿ ತ್ವರಿತದಿಂದಯೋಧ್ಯೆಗೈಸಿದ ರಾಮಸೀತೆಗೆ ಮುತ್ತಿನಾರತೀಯ
ಬೆಳಗೀರೆ ಶೋಭಾನೆ ೧

ಮಲತಾಯಿ ಕೈಕೆಯ ಮಾತಿಗೋಸುಗ ಪೋಗಿ ನೆಲಸಿದನಾರಣ್ಯದಿ
ಪೋಗಿ ಮೃಗ ರಾಮ ತರಲು

ಪೋಗಲು ಭರದಿ ಸೀತೆಯ ರಾವಣೇಶನೊಯ್ಯಲು
ಮಾಯದೀ ರಾಮಲಕ್ಷ್ಮಣರ ವನದಿ ಚಲಿಸುತಲಿ
ಕಪಿವರರ ಸ್ನೇಹದಿ ಜಲಧಿ ಬಂಧಿಸಿ ರಾವಣಾದ್ಯರ
ಗೆಲಿದು ಶರಣಗೆ ಪಟ್ಟಗಟ್ಟುತ ಲಲನೆಸಹ ನಡೆತಂದಯೋಧ್ಯೆಗೆ
ರಾಮಸೀತೆಗೆ ಹರಳಿನಾರತೀಯಾ ಬೆಳಗೀರೇ ಶೋಭಾನೆ ೨

ಚಂದದಿ ಧರಣಿಯ ಪಾಲಿಸುತಿರೆ ರಾಮನೊಂದಪವಾದವ ಕೇಳಿ
ಸೀತೆಯ ಘೋರಾರಣ್ಯದಿ ಬಿಡಲು ಪೇಳಿ ಗರ್ಭಿಣಿ ಸೀತೆ
ಬಂದ್ವಾಲ್ಮೀಕಿಯರೊಳು ಬಾಳಿ ಪಡೆದು ಲವಕುಶರನಲ್ಲಿ
ಚಂದದಲಿ ಪಾಲಿಸುತಿರೆ ಗೋವಿಂದನೆಜ್ಞಾಶ್ವವನು ಬಂಧಿಸಿ
ಬಂದು ಕಲಹದಿ ನಿಜವನರಿತಾ ನಂದನರ ಕರೆತಂದಯೋಧ್ಯೆಗೆ
ರಾಮಸೀತೆಗೆ ಕುಂದಣದಾರತೀಯಾ ಬೆಳಗೀರೆ ಶೋಭಾನೆ ೩

## ೩೪೮

ಯಾದವ ಯದುಕುಲ ಬಾಲನೆ ಬಾರೋ
ಮಾಧವ ಮದನಗೋಪಾಲನೆ ಬಾರೋ ಪ

ಸಾಧುಗಳೊಡೆಯ ಯಶೋದೆ ನಂದನೆ ಬಾರೋ
ಶ್ರೀಧರ ಸುಗುಣ ಶರೀರನೆ ಬಾರೋ ಅ.ಪ

ಮನೆಮನೆಯೊಳು ಮೊಸರ ಕಡೆವರು ಬಾರೋ
ವನಜಾಕ್ಷಿಯರು ಬೆಣ್ಣೆ ಕೊಡುವರು ಬಾರೋ
ತನಯರೊಡನೆ ಚಂಡಿನಾಟವಾಡಲು ಬಾರೋ
ಕೊನೆ ಬೆರಳೊಳು ಪಿಡಿದ ಕೊಳಲನೂದುತ ಬಾರೋ ೧

ಸುರರು ನಾರದರೆಲ್ಲ ಸ್ಮರಿಸುವರ್ ಬಾರೋ
ಕರವ ಮುಗಿವೆ ನಿನ್ನ ಚರಣಕ್ಕೆ ಬಾರೋ
ನರನ ಸಾರಥಿ ಕೃಷ್ಣ ಹರುಷದಿ ಬಾರೋ ೨

ಪಾಂಡುಪುತ್ರರ ಪಾಲ ಪಾಹಿಯೆಂಬೆನು ಬಾರೋ
ಕಂಡು ರಕ್ಷಿಸೋ ಎನ್ನ ಕಮಲ ನಯನ ಬಾರೋ
ಪಂಡರೀಪುರವಾಸ ಚಂಡವಿಕ್ರಮ ಬಾರೋ
ಅಂಡಜವಾಹನ ಮಾರ್ತಾಂಡನಂತಿಳಿದು ಬಾರೋ ೩

ಗಂಧಚಂದನ ಪುಷ್ಪದಿಂದ ಪೂಜಿಪೆ ಬಾರೋ
ಸುಂದರ ಚಿನುಮಯ ಮೂರ್ತಿಯೆ ಬಾರೋ
ಮಂದರಧರ ಮದನ ಜನಕನೆ ಬಾರೋ
ಇಂದಿರೆಯರಸ ಗೋವಿಂದನೆ ಬಾರೋ ೪

## ೩೪೯

ಯಾರೆನ್ನ ಕಾಯುವರು । ಶ್ರೀಹರಿಯೆ ।
ಹರಿಯೇ । ನೀ ದೂರ ಮಾಡುವರೇ ಪ

ಘೋರ ಪಾತಕವೆಂಬೀ । ಶಾರೀರವನು ಪೊತ್ತು ।
ಪಾರಗಾಣದ ದುಃಖಕರ್ಹನಾದೆನು ಹರಿಯೆ ೧

ಜೀವದಂತ್ಯದಿ ಯಮನೀವ ಪಾಶವ ಕಡಿದು
ಕಾಯುವರಿಲ್ಲ । ದಯಾಕರ ಮೂರುತಿ ೨

ಕಾಸು ಕನಕವಿರಲಾಸೆ ಮಾಡುವರೆಲ್ಲ ।
ದೇಶ ಬಿಕ್ಷುಕನಾದ । ರೀಸು ಮೆಚ್ಚುವರಿಲ್ಲ ೩

ಬಂಧು ಬಳಗವೆಂಬುದೊಂದು । ಸಂಸಾರದಿ ।
ಬಂದು ನೋಯುವೆನು । ಗೋವಿಂದ ನೀನಲ್ಲದೆ ೪

## ೩೫೦

ಯಾವಾಗ ಬರುವನಂತೆ ನಿನ್ನಯ ರಮಣ–
ಗ್ಯಾವ ರೂಪವೊ ಕಾಂತೆ ಪ

ದೇವರ ದೇವನಂತೆ ಜೀವಿಗಳೊಡೆಯನಂತೆ
ಭಾವಜನಯ್ಯನಂತೆ ದೇವಿ ನಿನ್ನದು ಕಾಂತೆ ಅ.ಪ

ನೀರೊಳಗಿರುವನಂತೆ ಬೆನ್ನೊಳು
ಘೋರ ಭಾರವ ತಾಳ್ದನಂತೆ ಕೋಟೆಯೊಳಗೆ
ಕ್ರೂರದೈತ್ಯನ ಸೀಳ್ದನಂತೆ
ಸಾರಿ ಕಂಬದಿ ಕರುಳ ಹಾರ ಧರಿಸಿರ್ದನಂತೆ ೧

ಬಡವ ಬ್ರಾಹ್ಮಣನಂತೆ ಹಡೆದವಳನ್ನು
ಕಡಿದ ಮಹಾವೀರನಂತೆ
ಅಡವಿಯೊಳ್ ಕೋಡಗ ಬಲದೊಡನಿರ್ಪನಂತೆ
ಪೊಡವಿಯೊಳ್ ನರನ ಬಂಡಿ ಹೊಡೆಯುವನಂತೆ ೨

ಬತ್ತಲೆಯಿರುವನಂತೆ ಅಲ್ಲಲ್ಲಿ ತೇಜಿ
ಹತ್ತಿ ಸುತ್ತಾಡುವನಂತೆ
ಕುತ್ತಿಗೆ ಮೇಲಣ ಕುದುರೆಯ ಮುಖವಂತೆ
ಉತ್ತಮನಂತೆ ಶ್ರೀನಿವಾಸ ಗೋವಿಂದನಂತೆ ೩

## ೩೫೧

ರಾಮನಾಥಸ್ವಾಮಿ ಪಾಲಿಸೋ ।
ರಘುನಾಥಸ್ವಾಮಿ ಪಾಲಿಸೊ ಪ

ಪಾಮರನಾದೆನ್ನಪರಾಧವ ।
ಪ್ರೇಮದಿ ಪಾಲಿಸಿಕೊಳ್ಳೋ ದೇವಾ ಚ

ಭೂಮಿಜೆ ಸೀತೆಗೆ । ಪ್ರೇಮನೆಂದೆನಿಸಿದ ೧

ನಿನ್ನನು ನಂಬಿದ ನಾಥನನೂ ।
ಮನ್ನಿಸದಿರೆ ಕೇಳ್ವರ‍್ಯಾರೋ ಇನ್ನೂ ॥

ಸನ್ನುತ ಗುಣಾಕರನೆನ್ನುವ ಬಿರುದನು ।
ಎನ್ನೊಳು ತೋರಿಸೊ ರಾಮ ನೀನೂ ೨

ಎಂದಿಗೆ ನಿನ್ನಯ ಪಾದವನೂ ।
ಪೊಂದುವ ಸುಖವನು ಪೇಳೋ ನೀನೂ ।
ಮಂದರಧರ ಗೋವಿಂದನೆ ನಿನ್ನಯ ।
ಸುಂದರ ಚರಣಕೆ ನಮಿಸುವೆನೂ ೩

## ೩೫೨

ವಂದಿಪೆ ಶ್ರೀವರನೇ । ಸುಂದರನೇ ।
ವಂದಿಪೆ ಶ್ರೀವರನೇ ಪ

ಆಶ ಪಾಶಕ್ಲೇಶವ ಬಿಡಿಸೈ ।
ದಾಸಗೆ ದಯತೋರಿ ೧

ಧೀರನೆ ಶೂರನೆ । ವೇದೋದ್ಧಾರನೆ ।
ತೋರಿಸೊ ಮುಖವನ್ನೆ ೨

ಶೋಕ ಮೋಹಾನೇಕದಿ ಬಳಲಿದೆ ।
ನೀ ಕೃಪೆ ತೋರಿನ್ನು ೩

ನಂದನ ಕಂದ ಗೋವಿಂದನ ಪಾಲಿಸು
ಚಂದದಿ ಮೈದೋರಿ ೪

## ೩೫೩

ವಾಸುದೇವ ಜಯಜಯ ವಾಸುದೇವ ಪ

ವಾಸುದೇವ ಜಲಜಾಸನ ವಂದಿತ
.ಕೇಶವ ನತಜನ ಪೋಷ ಜನಾರ್ದನ ಅ.ಪ

ಶ್ರೀನಿವಾಸ ಜಯಜಯ ಶ್ರೀನಿವಾಸ
ಶ್ರೀನಿವಾಸ ಒಲಿ ಸಾನುರಾಗದಲಿ
ಮಾನವೇಂದ್ರ ಅನುಮಾನಿಸದೆನ್ನಲಿ ೧

ವೆಂಕಟೇಶ ಜಯಜಯ ವೆಂಕಟೇಶಾ
ವೆಂಕಟೇಶ ಭವಬಿಂಕ ವಿನಾಶ
ಶಂಕರ ಸಖ ಶಶಾಂಕ ಪ್ರಕಾಶನೆ ೨

ಪದ್ಮನಾಭಾ ಜಯಜಯ ಪದ್ಮನಾಭಾ
ಪದ್ಮನಾಭ ಪೊರೆ ಪದ್ಮನಯನ ಹರೇ
ಪದ್ಮೋದ್ಭವನುತ ಪದ್ಮ ಮಾಲಾಧರ ೩

ಇಂದಿರೇಶಾ ಜಯಜಯ ಇಂದಿರೇಶಾ
ಇಂದಿರೇಶ ಗುಣವೃಂದ ಜಗನ್ಮಯ
ಸಿಂಧುಶಯನ ಗೋವಿಂದದಾಸ ಪ್ರಿಯ ೪

## ೩೫೪

ವಿಠ್ಠಲನಾಮ ಸ್ಮರಣೆಯನನುದಿನ
ಬಿಟ್ಟಿರಲಾಗದು ಮನವೇ ಪ

ದುಷ್ಟ ವಚನವನು ಜಿಹ್ವೆಯೊಳೆಂದಿಗು
ಪಠಿಸಲು ಬೇಡವೋ ಮನವೇ ಅ.ಪ

ಧಾರುಣಿಯೊಳು ನರ ಶಾರೀರದಿ ಬಂದು
ಕ್ರೂರ ಕೃತ್ಯಗಳ ಮಾಡದಿರು
ಘೋರ ಪಾಪಿ ಅಜಾಮಿಳನನು ಕಾಯ್ದಾ
ನಾರಾಯಣನನು ಮರೆಯದಿರೂ ೧

ತಿಳಿದು ತಿಳಿದು ನೀ ಮರುಳನಾಗದಿರು
ಕಲಿ ಸಂಸಾರದಿ ಸುಖವಿಲ್ಲಾ

ಹಳುವದಿ ಧ್ರುವನಿಗೆ ಒಲಿದ ಮಹಾತ್ಮನ
ಸ್ಮರಿಸೈ ಕುಶಲದ ಮಾತಲ್ಲಾ ೨

ಕಾಲನ ಬಾಧೆಗೆ ಸಿಲುಕುವ ಕಾರ್ಯವ
ಮೇಲು ಉಲ್ಲಾಸದಿಂದೆಸಗದಿರೂ
ಬಾಲ ಪ್ರಹ್ಲಾದನ ಪಾಲ ನರಸಿಂಹನ
ಲೀಲೆಯೊಳಾದರು ಮರೆಯದಿರೂ ೩

ದುಃಖ ಸಂತೋಷಕೆ ಹಿಗ್ಗದೆ ಕುಗ್ಗದೆ
ರಕ್ಕಸ ವೈರಿಯ ಧೇನಿಪರೆ
ದುಃಖಿಸೆ ದ್ರೌಪದಿ ಸೆರಗಿಗಕ್ಷಯವಿತ್ತ
ರುಕ್ಮಿಣಿಯರಸನು ಪೊರೆವ ಖರೆ ೪

ವ್ರತನಿಷ್ಠೆಗಳೆಂಬ ನೇಮವಿದ್ಯಾತಕೊ
ವ್ಯಥೆಯೊಂದೆದೆಯೊಳಗಿರುತಿರಲು
ರತಿಪತಿಪಿತ ಗೋವಿಂದನ ಧ್ಯಾನದಿ
ನುತಿಸಲು ಸುಲಭ ಸಾಯುಜ್ಯಗಳೂ ೫

## ೩೫೫

ಶರಣನಾದೆ ನಾನು ನಿನಗೆ । ಕರುಣ ದೇವನೇ ।
ತರಳನನ್ನು ಕಾಯೋ ದಯದಿ । ಪರಮಪುರುಷನೇ ಪ

ಸ್ನಾನ ದಾನ ಮೌನ ಮಂತ್ರ । ನಾನು ಅರಿಯೆನೆ ।
ಧ್ಯಾನ ದಾನ ತಿಳಿಯೆ ಸಲಹೊ । ಶ್ರೀನಿವಾಸನೆ ೧

ತರಳ ಧ್ರುವನ ತೆರದಿ ನಿನ್ನ । ಸ್ಮರಿಸಲರಿಯೆನೇ ।
ಗರುಡನಂತೆ ಹೊತ್ತು ಧರೆಯ । ಚರಿಸಲಾರೆನೆ ೨

ಚಂದ್ರಧರನ ಸಖನೆ ಕಾಯೋ ಇಂದಿರೇಶನೇ ।
ಸುಂದರ ಗೋವಿಂದ ದಯದಿ । ಕರವ ಮುಗಿವೆನೆ ೩

## ೩೫೬

ಶರಣು ಶ್ರೀನಿವಾಸ । ಪಾಲಿಸು ।
ಶರಣ ಜನರ ಪೋಷಾರಿ ಪ

ಕರುಣದಿ ನಿನ್ನಯ ಚರಣವ ನಂಬಿದ ।
ಶರಣನ ಭವ ಭಯ ದುರಿತವ ಕಳೆಯುವ ಅ.ಪ

ನಂಬಿದವರ ಪೊರೆವಾ । ಭಕ್ತ ಕು । ಟುಂಬಿ ವಾಸುದೇವಾ ।
ಕಂಬು ಕಂಧರ ಕಮ । ಲಾಂಭಕ ಶ್ರೀವರ
ಶಂಭು ಸಖನೆ । ಶುಕ್ಲಾಂಬರಧರ ಹರಿ ॥ಶರಣು॥ ೧

ಪದ್ಮನಾಭ ಎನ್ನ । ಪಾಲಿಸು । ಪದ್ಮಾವತಿರಮಣಾ ।
ಪದ್ಮನಯನ ಮುಖ । ಪದ್ಮವ ತೋರಿಸು
ಪದ್ಮೋದ್ಭವನುತ । ಪದ್ಮಮಾಲಾಧರ ॥ಶರಣು॥ ೨

ತಿರುಪತಿ ಗಿರಿವಾಸಾ । ಕಾಣಿಕೆ । ಬರಲತಿ ಸಂತೋಷಾ ।
ಪರಿಪರಿ ವಿಧದಲಿ । ಹರಕೆಯ ತರಿಸುವ ।
ಉರಗ ಶಯನ ಗೋ । ವಿಂದನೆ ಶ್ರೀಹರಿ ॥ಶರಣು॥ ೩

## ೩೫೭

ಶ್ರೀಧರಾ ಸುಶೀಲ । ಸುಜನ ಪಾಲ
ಪಾಹಿಮಾಂ । ನಮೋ ನಮಃ ।
ಶ್ರೀಧರಾ ಸುಶೀಲ ಸುಜನ ಪಾಲ ಪಾಹಿಮಾಂ ಪ

ಮಾಧವ ಮಹಿಮ ಸಾಧು ಸಜ್ಜನ ಪ್ರೇಮ ।
ಮೋದ ವಿನೋದಾ ಸುಪಾದಕೆ ನಮೋ ನಮಃ ೧

ನಾಶನ ಕರ್ತ ವಿನಾಶನ ಚರಿತ । ದಾಸವಿಶೇಷ ।
ಸರ್ವೇಶನೇ ನಮೋ ನಮಃ ೨

ಶಂಕರ ಸಖನೆ ಶ್ರೀ ವೆಂಕಟರಮಣ ।
ಶಂಖ ಚಕ್ರಾಂಕ ಸರ್ವಾಂಕಿತ ನಮೋ ನಮಃ ೩

ಚಂದ್ರ ಸಮಾನ್ವಿತ ನಂದಗೋಪಿಯಸುತ ।
ನಂದ ಮುಕುಂದ ಗೋವಿಂದನೇ ನಮೋ ನಮಃ ೪

## ೩೫೮

ಶ್ರೀ ರಮಾಧವಾ ನಮಿಸುವೆ ದೇವಾ ಪ

ವಾರಿಜೋದ್ಭವನುತ ಸಾರಸ ಗುಣಯುತ
ಸಾರಿ ನುತಿಪೆ ದಯದೋರಿ ಸಲಹು ಹರೀ ಅ.ಪ

ತೋರುವಾ ಸುಂದರ ಶಾಂತಾಕಾರವಾ ಸ್ಥೂಲ
ಸೂಕ್ಷ್ಮ ಶರೀರವಾ ತಪಯೋಗಿ ಹೃದಯ
ಸುಮಾ ಸಾರವಾ ನೀ ಮೆರೆವಾ ಸಾರಸಾಂಘ್ರಿಯುಗವಾ ಸದ್ಗುಣಸಾರ
ಮಿಶ್ರಿತ ಕರವಾ ಸುಮನಸ ವಾರವಂದ್ಯ ಚರಣಾರವಿಂದವನು
ತೋರಿಸಲಹು ದಯಾರಸ ಮೂರುತಿ ೧

ಶಂಕವಾ ಉದಿದತಿ ಭಕ್ತಕಳಂಕವಾ ಮುರಿದತಿ
ದುರುಳರ ಬಿಂಕವಾ ಭಕ್ತಜನರ ಸದ್ವಶಾಂಕವಾ
ಸೇರುವಾ ಪಂಕಜಾಸನ ಪಿತನೇ ಪಾಲಿಸು ಶಂಕರ
ಗತಿಹಿತನೇ ಭವಭಯ ಬಿಂಕವ ಬಿಡಿಸೈ ಪಂಕಜ–
ಕರಯುತ ವೆಂಕಟೇಶ ಸರ್ವಾಂಕಿತ ರೂಪನೆ ೨

ಸುಂದರಾ ವನಮಾಲ ಶೋಭಾ ಕಂದರಾ
ಮುಖಪದ್ಮಾಕಾರ ಚಂದಿರಾ ಸದ್ಧರ್ಮ
ಶಾಸ್ತ್ರಸ್ಮೃತಿಮಂದಿರಾ ವೇದೋದ್ಧಾರಾ ಚಂದ್ರ
ಸೂರ್ಯ ನಯನಾ ಕರುಣಾನಂದ ವಿಮಲಚರಣಾ
ಮುನಿಜನವೃಂದ ವಂದ್ಯ ಚರಣಾರವಿಂದವನು
ಬಂದು ತೋರಿಸಿ ಗೋವಿಂದದಾಸನ ಪೊರೆ ೩

## ೩೫೯

ಶ್ರೀ ರಮಾರಮಣಂ । ಸರಸಿಜ ನಯನಂ ॥
ಕ್ಷೀರವಾರಿಧಿ ಶಯನಂ ಪ

ಮಾರಜನಕ ಮುರವೈರಿ ಜನಾರ್ದನ ।
ತೋರಿಸಲಹು ದಶಾವತಾರ ಹರೀ ॥ಶ್ರೀರಾಮ॥ ಅ.ಪ

ಪೊಳವ ನಾರುವ ಮೈಯ್ಯಾ । ತಳೆದು ತೋರುವ ಕೈಯಾ ॥
ಬಲಿದ ಕೋರೆಯ ಬಾಯಿ । ಗಳದ ಕರುಳ ಮಾಲೆಯ ।
ಚೆಲುವ ಬ್ರಹ್ಮಚಾರಿ ॥ ಪಡೆದಳ ಕಡಿದು ಪಿತಗೆ ತೋರಿ ॥
ಇಳೆಯಧಿಪತಿ । ಗೋವಳರರಸನು । ಬತ್ತಲೆಯಲಿ ನೆಲಸಿದ ಕಡುಗಲಿ
ಮೂರುತಿ ಶ್ರೀರಾಮಾ ೧

ಘೋರತಮಾ ಸುರಾರಿ । ಭಾರಮಂದರೋದ್ಧಾರಿ ।
ಧಾರಿಣೀ ಚೋರವೈರಿ । ಸಾರೀ ಮನವ ಕೇಸರೀ ॥
ಮೂರಡಿ ಧರೆ ಬೇಡಿ ಧರಣಿಪ । ವೀರರೊಳ್ ಹಗೆಮಾಡಿ ।
ವಾರಿಧಿ ಬಂಧಿಸಿ । ತೀರಿಸಿ ಕಂಸನ । ನಾರಿಯರೊಡಗೂಡಿ ।
ಏರಿದೆ ತುರಗವಾ ೨

ವೇದೋದ್ಧಾರವ ಗೈದೆ । ಭೇದದಿ ಸುಧೆಯೆರೆದೆ ॥
ಮೇದಿನಿಯನು ತಂದೆ । ಪ್ರಹಲ್ಲಾದಗೊಲಿದೇ ॥
ಕಾದೆ ಬಲಿಯೊಳ್ ದ್ವಾರ । ವಿಬುಧರ ಆದರಿಸಿದೆ ವೀರ ।
ಮೇದಿನಿಸುತೆ ಚೋರಾಂತಕ ಯದುಪತಿ । ಸಾಧು ವಂದಿತ ।
ಮ್ಲೇಂಛಾರಿ ಗೋವಿಂದನೇ ೩

## ೩೬೦

ಶ್ರೀ ವಿಠಲ ಹೃಷಿಕೇಶನೆ ನತಜನ
ಪೋಷ ವಾಸುಕೀಶಯನ ಪ

ವಾಸವನುತ ರಜಿತೇಶ ನಮಿತಪದ
ಕ್ಲೇಶಹರಣ ಜಗದೀಶ ಜನಾರ್ದನ ಅ.ಪ

ನೀರೊಳಿಳಿದು ಮತ್ಸ್ಯಾವತಾರದಿಂದಲಿ
ನಲಿದು ಘೋರ ತಮನ ಗೆಲಿದು
ಚಾರುವೇದವ ತಂದೆ ಧೀರ ಕಮಠನಾದಿ
ಕೇಸರಿಯಾಕಾರವನೇ ತಾಳಿ
ಸಾರಿ ಕಂಬದಿ ಮೈದೋರುತ ತರಳಗೆ
ಧೀರನ ಸೀಳಿದೆ ನಾರ ಮೃಗೇಶನೆ ೧

ಬಲಿಯೊಳ್ ದಾನವ ಬೇಡಿ ನೆಲನ ಈರಡಿ ಮಾಡಿ
ಛಲದಿ ಬಂಧಿಸಿ ಬಲಿಯ ತಲೆಯ ಮೆಟ್ಟಿದೆ ವಾಮನಾ
ಛಲದ ಭಾರ್ಗವ ರಾಮ ಧರಣಿಜೆಗೊಲಿದನೆ
ರಘುರಾಮ ಕೊಳಲನುಡಿಸಿ ಗೋವುಗಳೊಡನಾಡಿದೆ ನಳಿನನಯನ
ಶ್ರೀಕೃಷ್ಣ ಮುರಾಂತಕ ೨

ತ್ರಿಪುರನ ಸತಿಯರ ವ್ರತವ ಪರಿಹರಿಸಿದ
ಕಪಟ ಮೋಹನ ರೂಪ ನಿಪುಣಾ ಬೌದ್ಧಾವತಾರ
ಕಪಟದೀ ಹಯವೇರಿ ಬಂದಾ ನಿಪುಣ
ಕಲ್ಕ್ಯಾವತಾರೀ ಗುಪಿತದಿ ಸರ್ವಾ ವ್ಯಾಪಕನೆನಿಸಿದೆ
ಕಪಟನಾಟಕ ಗೋವಿಂದದಾಸನ ಪ್ರಿಯಾ ೩

## ೩೬೧

ಸ್ವಲ್ಪ ತಾಳು ಸಂಜೆಯಾಗಲಿ ಶ್ರೀಕೃಷ್ಣ ಕೇಳು
ಕಂಜಸಖನು ಕಡಲಿಗಿಳಿದು ಮಂಜುಮುಸುಕಲಿ ಪ

ಹಾದಿ ಬೀದಿಯೆಂಬುದಿಲ್ಲ ಹಗಲುರಾತ್ರಿ ಭೇದವಿಲ್ಲ
ಯಾದವೋತ್ತಮ ಕೇಳುಸೊಲ್ಲ ಬಾಧೆಗೊಳಿಸಬೇಡ ನಲ್ಲ ೧

ಕಂಡು ಜನರು ನಗರೆ ಲಜ್ಜೆ ಭಂಡನೆಯ ಕೈಯ ಪಟ್ಟಿ
ಪಂಢರೀಶ ಪಾಂಡುರಂಗ ಅಂಡಜವಾಹನ ಕೇಳು ೨

ನೀರ ಮುಳುಗಿ ಬೆನ್ನ ಮೇಲೆ ಭಾರನೆರಹಿದಂತ ನಿನ್ನ
ಧೀರತನವ ತೋರು ಕಡೆಗೆ ಮಾರಕೇಳಿಯೊಳಗೆ ಕೃಷ್ಣ ೩

ಚಂದ್ರಾತಳಿಗೆ ಬಿಡದೆ ಏಳು ದಿನದೊಳಂದು ರಮಿಸಿದಂತೆ
ಇಂದು ಎನ್ನ ಹರುಷಗೊಳಿಸು ಸುಂದರ ಗೋವಿಂದ ದಯದಿ ೪

## ೩೬೨

ಹರಿ ಹರಿ ಧ್ಯಾನಿಸೊ ಲಕ್ಷ್ಮೀವರನ ಧ್ಯಾನಿಸೊ ಪ

ಉರಗಶಯನನಾಗಿ ಘೋರ ಶರಧಿಯನ್ನು ಮಧಿಸಿರುವ
ಸುರರಿಗಮೃತವೆರೆದ ನಮ್ಮ ಗರುಡಗಮನ ತಾನು ಅ.ಪ

ದಂಡಧರಗೆ ಸಿಲುಕಿ ನರಕ ಕೊಂಡದಲ್ಲಿ ಮುಳುಗಲ್ಯಾಕೆ
ಪುಂಡರೀಕನಯನ ಪಾಂಡುರಂಗನೆನ್ನದೇ
ಶುಂಡಲಾಪುರಾದಿ ಪಾಲ ಪಾಂಡುಪುತ್ರ ಧರ್ಮರಾಯ
ಕಂಡು ನಮಿಸಿ ಪೂಜೆಗೈದ ಅಂಡಜವಾಹನನೆಂದು ೧

ಬಾಯಬಡಿಕನಾಗಿ ಸರ್ವ ನ್ಯಾಯ ತಪ್ಪಿ ಮಾತನಾಡಿ
ಕಾಯ ಬೆಳೆಸಿ ತಿರುಗಿ ಬಂದೆ ಸಾಯಲಾ ಕಥೆ
ವಾಯುತನಯ ವಂದ್ಯ ಚರಣ ಕಾಯಜ ಛೆಂದೆರಗಿದವಗೆ
ಆಯುಧವರೇಣ್ಯಾ ಸರ್ವಸಹಾಯವ ಮಾಡುವಾ ೨

ಕಂದ ಅಬಲ ವೃದ್ಧರೆಂದು ಬಂಧು ಜನರು ಭಾಗ ಕಿರಿದು
ಕಂದು ಕುಂದು ರೋಗಿ ಸ್ತ್ರೀಯರೆಂದು ಭೇದವೊ
ಇಂದಿರೇಶಗಿಲ್ಲ ನರರು ಒಂದೇ ಮನದಿ ಧ್ಯಾನಿಸಿದರೆ
ಸುಂದರಾಂಗ ಮೂರ್ತಿ ಗೋವಿಂದ ಪೊರೆಯುವಾ ೩

## ೩೬೩

ಹಲವನು ಯೋಚಿಸಲೇನು ಫಲ ಬರಿ ।
ಜಲವನು ಮಥಿಸಲಿನ್ನೇನು ಫಲ ॥
ಕುಲಜನು ಶೂದ್ರನ ಲಲನೆಯ ಕೂಡುತ ।
ಸಲಿಲದಿ ಮುಳುಗಿದರೇನು ಫಲ ॥
ಜಲಜಾಕ್ಷನ ಪದದೊಲುಮೆಯಿಲ್ಲದೆ ನರ ।
ಬಲಯುತ ತಾನೆನಲೇನು ಫಲ ೧

ಪರಸತಿ ಪರಧನದಾಸೆಯೊಳಿರ್ಪನು ।
ಸುರನದಿ ಮುಳುಗಿದರೇನು ಫಲ ॥
ಪರಮಾತ್ಮನ ತಮ್ಮ ಹೃದಯದಿ ಕಾಣದೇ ।
ಧರೆಯಲ್ಲರಸಿದರೇನು ಫಲ ೨

ಕಾಣದೆ ಕುಣಿಯೊಳು ಬಿದ್ದಾನೆಯು ಬಲು ।
ತ್ರಾಣಿಯಂತಾದರಿನ್ನೇನು ಫಲ ॥
ಕ್ಷೋಣಿಯೊಳಗೆ ಹರಿದಾಸರ ಜರೆಯುತ ।
ಜ್ಞಾನಿಯು ತಾನೆನಲೇನು ಫಲ ೩

ಧೂರ್ತತನದಿ ಹಣ ಗಳಿಸುತ ಲೋಭದಿ
ಸ್ವಾರ್ಥವೆಂದೆನಿಸಿದರೇನು ಫಲ ॥
ಪಾತ್ರಾಪಾತ್ರವನೆಣಿಸದೆ ದಾನವ ।
ಅರ್ತಿಯೊಳೆಸಗಿದರೇನು ಫಲ ೪

ಪತಿಯನು ವಂಚಿಸಿ ರೂಪ ಮಾರುವ ಸತಿ ।
ವ್ರತಗಳ ಮಾಡಿದರೇನು ಫಲ ॥
ರತಿಪತಿಪಿತ ಗೋವಿಂದನ ನೆನೆಯದೆ ।
ಗತಿಯನು ಬಯಸಿದರೇನು ಫಲ ೫

## ೩೬೪

ಹಲವು ಬ್ರಾಹ್ಮಣ ಮಂದಿಗಳಿಗಶನವನಿಕ್ಕಿ
ಸಲಹುವೆಯನುದಿನ ತಳೆದು ಖ್ಯಾತಿಯನು ೧

ನಳಿನ ನೇತ್ರನೆ ನಿನ್ನ ಪಾದದರ್ಶನದಿಂದ
ಹಲವು ಜನ್ಮದ ದೋಷ ನಾಶವಾಯ್ತದೆಂದು ೨

ಅನ್ನಬ್ರಹ್ಮನು ಉಡುಪಿ ಕೃಷ್ಣನೆಂದೆನಿಸಿದೆ
ಸ್ವರ್ಣಬ್ರಹ್ಮನು ತಿರುಪತಿ ಶ್ರೀನಿವಾಸ ೩

ನಾದಬ್ರಹ್ಮನು ಪಂಢರೇಶ ವಿಠಲರಾಯ–
ನೆನ್ನಿಸಿ ಮೆರೆವ ಗೋವಿಂದದಾಸರ ಪ್ರೀತ್ಯ ೪

## ೩೬೫

ಹಸೆಗೆ ಬಾರೊ ಕುಸುಮನಯನ ಕುಶಲದಿಂದಲಿ ಬೇಗನೆ
ಶಶಿಮುಖಿಯರ್ ಕರೆವರು ನಿನ್ನ ವಸುಧೆಪಾಲ ರಾಮನೊ ಪ

ಅಸಮ ವೀರನನೆ ಗೆಲಿದು ಪಶುಪತಿಯ ಬಿಲ್ಲ
ಮುರಿದು ಕುಸುಮ ಬಾಲೆ ಕೊರಳೊಳ್ ಧರಿಸಿ
ವಸುಧೆ ಸುತೆಯ ಕರವ ಪಿಡಿದು ೧

ಕುಶಲದೀ ನಗುನಗುತಾ ಪಸರಿಸುವಿ ಮಂಟಪಕೆ ಹಸೆಗೆ
ಧರಣಿ ಪಾಲರ್ ಲಜ್ಜೆವೆರಸಿ ಮೆರೆವ ಕೀರ್ತಿ ವಿಬುಧರೊಲಿಸೆ
ದುರುಳ ದೈತ್ಯ ಕ್ರೋಧವರಿಸಿ ಸುರರುರಗದಲ್ಲಿ ನಿಂದು
ಹರುಷದಿ ಸುಮ ವರ್ಷವನ್ನು ಕರೆಯುವರ್ಕೈ ಸರಸದೀ ೨

ಜನಕರಾಯ ಹರುಷದಿಂದ ಜನಕೆ ಓಲೆ ಬರೆಯೆ ಕಂಡು
ಘನದಿ ದಿಬ್ಬಣ ಕೂಡಿ ಬಂದ ಜನಕ ಜನನಿಯರಿಗೆ ನಮಿಸಿ
ಅನುನಯದಿಂ ಮನ ಓಲೈಸಿ ದನುಜಾಂತಕ ಗೋವಿಂದನೇ ೩

## ೩೬೬

ಹಿಂದಿಲ್ಲಾ ಇನ್ನು ಮುಂದಿಲ್ಲಾ ।
ಹಿಂದಿಲ್ಲಾ ಮುಂದಿಲ್ಲಾ । ಒಂದಿನ ಸುಖವಿಲ್ಲಾ ಪ

ನಂದ ಗೋಪನ ಮುದ್ದು । ಕಂದ ನೀನಲ್ಲದೆ ಅ.ಪ

ಉಡುವರಿವೆ ಇಲ್ಲಾ ಉಂಬರನ್ನವು ಇಲ್ಲ ।
ನಡೆವರೆ ಮುಂದೆ ದಾರಿಯು ಕಾಣೆನಲ್ಲ ॥
ಪೊಡವಿ ಪಾಲಕ ಶ್ರೀಕೃಷ್ಣ ನೀನಲ್ಲದೇ ।
ಬಡವನ ಬಾರೆಂದು ಕರೆದು ಮನ್ನಿಪರಿಲ್ಲ ೧

ಕಾಸು ಕೈಯೊಳಗಿಲ್ಲ । ಆಸೆ ದೇಹದೊಳಿಲ್ಲ ॥
ದೇಶ ದೇಶವ ಸುತ್ತಿ ಬಳಲಿದೆನಲ್ಲಾ ॥
ಭಾಸುರಾಂಗನೆ ಶ್ರೀನಿವಾಸ ನೀನಲ್ಲದೇ ।
ಲೇಸನೆಣಿಸುವರ ಕಾಣೆ ರುಕ್ಮಿಣಿನಲ್ಲ ೨

ಸತಿಸುತರೆನಗಿಲ್ಲ । ಗತಿ ಮುಂದೆ ಶಿವ ಬಲ್ಲ ॥
ಹಿತದಿಂದಲಿರಲೊಂದು ಮನೆ ತನಗಿಲ್ಲ ॥
ಪೃಥವಿ ಪಾಲಕ ಸೀತಾರಾಮ ನೀನಲ್ಲದೇ ।
ಹಿತವ ಬಯಸುವರ ಕಾಣೆ ಜಗದ ನಲ್ಲ ೩

ತಂದೆ ತಾಯಿಗಳಿಲ್ಲ । ಬಂಧು ಬಳಗವಿಲ್ಲ ।
ಒಂದು ವಿದ್ಯವ ನಾನು । ಕಲಿತವನಲ್ಲಾ ॥
ಇಂದಿರೆಯರಸ ಗೋವಿಂದ ನೀನಲ್ಲದೇ ।
ಬಂದ ಭಾಗ್ಯಗಳೊಂದು ನಿಜವಾದುದಲ್ಲಾ ೪

## ೩೬೭

ಗಜಲಕ್ಷ್ಮಿ ಬಿಜಯ ಮಾಡೇ ಮೂಕಾಂಬಿಕೆ
ಭಜಿಸುವೆ ವರವ ನೀಡೆ ಪ

ಅಜಸುರ ಮುಖ್ಯರು ಭಜಿಸಲು ನಿನ್ನನು
ನಿಜವಾದ ವರವನಿತ್ತೆ ಜಗನ್ಮಾತೆ
ಕುಜನರ ಮರ್ದಿಸುತೆ
ವಿಜಯ ಸಾರಥಿ ಭುಜಗ ಶಯನನ
ಭಜನೆಯನು ಅನುದಿನದಿ ಪಠಿಸುವ
ಸುಜನ ಸಜ್ಜನಪಾಲೆ ಸದ್ಗುಣಶೀಲೆ
ಮುನಿಜನಲೋಲೆ ಜಯ ಜಯ ೧

ಕೊಲ್ಲೂರ ಪುರನಿಲಯೆ ಮಹದೇವಿಯೆ
ಫುಲ್ಲಲೋಚನೆ ಪಾಲಯೆ
ಎಲ್ಲ ಭಕ್ತರ ಮನ ಸಲ್ಲಿಸಿ ಸಲಹುವ
ಚಲ್ವ ರಂಗನ ರಾಣಿಯೆ ಶ್ರೀದೇವಿಯೆ
ಕುಲ್ಲ ಕುಂಕುಮ ಜಾಣಿಯೇ ಸಲ್ಲಲಿತೆ
ಕಾಲಲ್ಲಿ ರಂಜಿಪ ಪಿಲ್ಲಿ ಮಿಂಚಿಕೆ(?) ಕಡಗ ಪೈಜಣ
ಗೆಜ್ಜೆ ಗಲಗಲ ಎಂದು ನಲಿಯುತ ಬಾರೆ
ಜಗದ ವಿಚಾರೆ ಮುಖ ತನು ತೋರೆ ಜಯ ಜಯ ೨

ಚಂದಿರ ಮುಖದ ಮನೇ ಸರ್ವೇಶ್ವರಿ
ಕುಂದಕುಂಡಲರದನೇ
ಮಂದಗಾಮಿನಿ ಅರವಿಂದನಯನೆ
ಸುರ ಪಂಡಿತ ಗುಣ ಕರುಣಿ
ನೀನಲ್ಲದೆ ಮುಂ ಸುಖವ ಕಾಣೆನೆ
ಚಂದನ ನವಗಂಧ ಕುಂಕುಮ-
ದಿಂದ ಶೋಭಿಪ ಕೀರವಾಣಿಯೆ
ಸುಂದರಿಯೆ ಗೋವಿಂದನರಸಿಯೆ ಧರ್ಮದೇವಿಯೆ
ದೈತ್ಯ ನಾಶಿನಿಯೆ ಜಯ ಜಯ ೩

# ೩೬೮

ಭೃಂಗಕುಂತಳೆ ಶ್ರೀರಂಗನ ಸತಿ ಸ–
ರ್ವಾಂಗದಿ ಶೃಂಗಾರೆ ತುಂಗ ವಿಕ್ರಮೆ
ತುರಂಗ ಗಮನೆ ಭವ ಭೃಂಗವು ನಿವಾರೆ ಪ

ಚರಣದಂದುಗೆ ನಡುಪಟ್ಟಿಯ ಉಡಿಗೆಜ್ಜೆ
ಕರದಲಿ ಕಂಕಣ ಕಡಗ ಬಳೆ
ಕೊರಳೊಳು ಮುತ್ತು ರತ್ನದಿ ಶೋಭಿಪ
ತರತರ ಪದಕದ ಸರಮಾಲೆ ೧

ಬಾಲಚಂದ್ರನವೋಲು ದೇವಿ ಕ–
ಪೋಲವು ಪೊಳೆಯುವುದು
ಲೋಲಾಡುವ ಗಿಳಿವಾಲೆಯು ಕರ್ಣಕೆ ವಿ–
ಶಾಲದಿ ಶೋಭಿಪುದು ೨

ಪಟ್ಟೆ ಪೀತಾಂಬರ ಉಟ್ಟು ದೇವಿ
ನೆರಿ ಚೆಲ್ಲುತ ನಡೆತಂದೂ
ಸೃಷ್ಟಿಯೊಳ್ ಸುಜನರ ಪಾಲಿಸಿ ಲಕ್ಷುಮೀ
ಕ್ಷುಲ್ಲರ ಮುರಿದಂದು
ಅರಿಸಿನ ಕುಂಕುಮ ಚಂದ್ರ ಕಸ್ತೂರಿಯು
ನಯನದಿ ಕಾಡಿಗೆಯು
ಶಿರದಿ ಮುಂದಲೆ ಬೊಟ್ಟು ಜಡೆಗೊಂಡೆ ಪುಷ್ಪವು
ಚರಣದಿ ಮಿಂಚಿಕೆಯೂ ೩

ಹಸ್ತದಿ ಪದ್ಮಾವು ಬೆರಳೊಳು ಉಂಗುರ
ತಿತ್ತಿಗೆ ಮೂಗುತಿ ಮುಖರಗಳೂ
ನಿತ್ಯವು ಸ್ಮರಿಸೆ ಗೋವಿಂದನ ದಾಸನ
ಅರ್ಥಿಯೊಳ್ ದೇವಿಯ ಪೊರೆಯುವಳು ೪

## ೩೬೯

ಯಾಕಿಂತು ಮನಸೋತೆ ಏ ರುಕ್ಮಿಣೀದೇವಿ
ಲೇಖನವ ಬರೆದು ನೀನಾ ಕೃಷ್ಣಗೆ ಪ

ಲೋಕಮಾನ್ಯಳೆ ನೀನು ಬೇಕಾಗಿ ಮರುಳಾದೆ
ಈ ಕೃಷ್ಣ ಯಾದವರ ಕುಲಕೆ ತಿಲಕ ಅ.ಪ

ಜನಿಸಿದನು ಮಧುರೆಯೊಳು ದೇವಕಿಯ ಜಠರದಲಿ
ತನಯನೆನಿಸಿದ ಗೋಪಿಗಿವನು ಗೋಕುಲದಿ
ದನುಜೆ ಪೂತನಿಯಳ ಮೊಲೆಯುಂಡು ತೇಗಿದನು
ಮನೆ ಮನೆಯ ಪಾಲ್ಮೊಸರು ಕದ್ದು ಮೆದ್ದಾ ೧

ತುರುವ ಕಾಯ್ದನ ವನದಿ ತಿರಿಯ ಬುತ್ತಿಯನುಂಡ
ಶಿರಕೊರಳಿಗಾಭರಣ ನವಿಲ್ಗರಿಯ ತುಂಡು
ತರಳತನದಲಿ ಹಲವು ತರುಣಿಯರ ವ್ರತವಳಿದ
ಕರಿಯನಿವ ಸ್ತ್ರೀಯರುಡುವ ಸೀರೆ ಕದ್ದೊಯ್ದ ೨

ನಂದಗೋಕುಲದಿ ಸಾಕಿದ ಸ್ತ್ರೀಯರನು ಬಿಟ್ಟು
ಬಂದು ಮಧುರೆಯೊಳು ಮಾತುಳನ ಮರ್ದಿಸಿದಾ
ಚಂದವೆ ಆ ಕುಬುಜೆ ಡೊಂಕ ತಿದ್ದಿಯೆ ನೆರೆದ
ಸಿಂಧು ಮಧ್ಯದಿಂದ ಗೋವಿಂದ ಮಾಗದಗಂಜಿ ೩

## ೩೭೦

ಜಲಜಾಲಯೇ । ಜಗನ್ಮೋಹಿನಿಯೇ ॥
ಜಲಜಾಲಯೇ ಪ

ಜಲಜ ಲೋಚನೆಯೇ । ಜಲಜಗಂಧಿನಿಯೆ ।
ಜಲಜನಾಭನ । ಪ್ರಿಯೇ ಜಲಜಮುಖಿಯೆ ಪೊರೆಯೆ ೧

ಸಾಮಜ ಗಮನೆ । ಕೋಮಲಾಂಗಿ ನೀನೆ ।
ಕೋಮಲ ಚರಣೆ । ಕೋಕಿಲ ಸುಗಾನೆ ೨

ಚಂದ್ರ ಕೋಟಿ ವದನೆ । ನಂದ ಕುಂದರದನೆ ।
ಬಂದು ಗೋವಿಂದನಾ । ದಾಸನ ಪಾಲಿಸು ॥ಜಲಜ॥ ॥೩॥

## ೩೭೧

ವೃಂದಾವನ ದೇವಿ ನಮೋ ನಮೋ ಗುಣ ।
ವೃಂದೆ ಸುಂದರಿ ಲೋಕಮಾತೆ ನಮೋ ನಮೋ ॥
ಬಂದು ಸೇವಿಸಿ ನಿನಗುದಕವ ನೆರೆಯಲು
ಇಂದು ನಾವು ಮಾಡಿದ ಪಾಪ ಹೋಗುವುದೂ ಪ

ಚಂದದಿಂದಲಿ ನಮ್ಮ ಕುಲದವರಿಗೆಲ್ಲ
ಸುಂದರ ವೈಕುಂಠ ಪದವೀವಳೇ ೧

ಹನ್ನೆರಡು ಪ್ರದಕ್ಷಿಣೆ ಬಂದು ವಂದನೆ ಮಾಡಿ
ಚೆನ್ನಾಗಿ ಸ್ಮರಿಸೆ ಕಂಡು ಪರಸುವಳೆ ।
ಘನತರ ಭಕ್ತಿಯೊಳ್ ಬಂದು ಕೈ ಮುಗಿದವರನ್ನು
ಪನ್ನಂಗಶಯನ ಸ್ವಾಮಿ ಕರೆದೊಯ್ಯುವನೂ ೨

ಭವ ಭವದಲಿಗೈದ ದೋಷನಿವಾರಿಸಿ
ಭವ ಭಂಗ ಬಿಡಿಸೆನಗೊಲಿದು ತಾಯೆ ।
ದಯದಿ ಗೋವಿಂದನ ದಾಸನೆನಿಸಂದೆನ್ನ ।
ಭುವನ ಮೂರರೊಳ್ ಖ್ಯಾತಿ ಪಡೆದವಳೆ ೩

## ೩೭೨

ವೃಂದಾವನ ಲಕ್ಷ್ಮಿ ಜಯಜಯತೂ
ಸುಂದರಿ ಸುಗುಣೆ ಸುಶೀಲೆ ಜಯತು ಜಯ ಪ

ಕ್ಷೀರಾಬ್ಧಿ ಮಥಿಸಲು ಸುಧೆ ಹುಟ್ಟಿ ಬರಲೂ
ನಾರಾಯಣ ಹರುಷಾಶ್ರು ಸುರಿಸಲೂ
ಧಾರಿಣಿಯೊಳಗದು ಗಿಡವಾಗಿ ಶೋಭಿಸೆ
ನಾರಿ ಲಕ್ಷುಮಿಯಂಗ ತುಳಸಿಯೆಂದೂ ೧

ಆಲಯದಿಪ್ಪತ್ತೆಂಟು ಹೆಜ್ಜೆ ಈಶಾನ್ಯದಿ
ಏಳುದಳಿದ ತುಳಸಿಗಿಡವ
ಮೂಲದಿ ನವರತ್ನವಿಟ್ಟು ಪ್ರತಿಷ್ಠಿಸೆ
ಪಾಲಿಸೆ ವಿಷ್ಣು ತಾನಲ್ಲಿರುವೆನೆಂದು ೨

ಧಾತ್ರಿನೆಲ್ಲಿಯು ವಾಣಿ ಗಿರಿಜೆಯರಂಶದಿ
ಪೃಥಿವಿಯೊಳಿರೆ ಕಂಡು ತುಳಸಿಯಂಕದಲಿ
ಅರ್ತಿಯಿಂದಲಿ ನಟ್ಟು ಪೂಜೆಯನೆಸಗಲು
ಪ್ರೀತಿಸಿ ಬ್ರಹ್ಮ ವಿಷ್ಣು ರುದ್ರರೆ ವರವೀವರು ೩

ಬೃಂದೆ ಜಲಂಧರನರಸಿ ಪತಿವ್ರತೆ–
ಯಂದಿರೆ ವಿಷ್ಣುವೊಲಿಸಿ ದುರುಳರ ಗೆಲಿಸೆ
ಬೃಂದೆ ವರವ ಬೇಡಿ ಸಹಗಮನವಾದ ಸ್ಥಳ
ನಿಂದಾನು ವಿಷ್ಣು ತುಳಸಿಯೊಳ್ ೪

ಕಾರ್ತೀಕ ದಾಮೋದರನೆನಿಸಿ ಪ್ರೀತಿಯಿಂದಲಿ
ತುಳಸಿಯಲಿ ತಾ ನೆಲಸಿ
ಘೃತದಿ ಜ್ಯೋತಿಯನಿಟ್ಟು ಪೂಜಿಸಿದವರಿಗೆ
ಅತಿಶಯ ವರವಿತ್ತು ಸ್ವಾಮಿ ಪರಸುವನು ೫

ಕಟ್ಟೆ ಗೋಮಯದಿ ಬಳಿದೂ
ಹಿಟ್ಟಲಿ ರಂಗೋಲಿ ಬರೆದೂ ನೀರೆರೆದು
ಶ್ರೇಷ್ಠದಿ ತೀರ್ಥವಗೊಂಡು ನಿರ್ಮಾಲ್ಯ ಧರಿಸಲು
ಅಕ್ಷಯ ವರವಿತ್ತು ದೇವಿ ಮನ್ನಿಪಳೂ ೬

ವಿಷ್ಣು ಪಾದದಿ ತುಳಸಿ ದಳದಿಂದರ್ಚಿಸಲು
ಇಷ್ಟ ಪಡುವ ವಾಸುದೇವನು ತಾನು
ಇಷ್ಟದಿ ತುಳಸಿ ಚರಿತೆ ನಿತ್ಯದಿ ಪಠಿಸಲು
ಇಷ್ಟಾರ್ಥ ವರವೀವ ಗೋವಿಂದದಾಸರಿಗೆ ೭

## ೩೭೩

ಜಯತು ಜಗನ್ಮಾತೆ ಪಾಲಿಸು ಜಯತು ಜಗದ್ಭರಿತೆ
ಜಯತು ಜನಾರ್ದನ ಸ್ವಾಮಿಯ ಪ್ರೀತೆ
ಜಯತು ಜನಾರ್ದನ ಮೋಹಿನಿ ಖ್ಯಾತೆ ೧

ಪಂಕಜದಳ ನೇತ್ರೆ ಜಯಜಯ
ಕಿಂಕರನುತಿ ಪಾತ್ರೆ
ಕಂಕಣಕರ ಭವ ಬಿಂಕ ವಿಹಾರಿಣಿ
ಕುಂಕುಮಗಂಧಿ ಶಶಾಂಕ ಪ್ರಕಾಶಿತೆ ೨

ಲೋಕೋದ್ಧಾರಿಣಿಯೇ ಭವ ಭಯ
ಶೋಕ ನಿವಾರಿಣಿಯೆ
ಮೂಕಾಸುರನನು ಮರ್ದಿಸಿ ಲೋಕದ
ಮೂಕಾಂಬಿಕೆಯೆಂಬ ನಾಮವ ಧರಿಸಿದ ೩

ಸುಂದರಿ ಶುಭ ಸದನೇ ಸದ್ಗುಣ
ಮಾದರಿ ಇಭಗಮನೆ
ಕುಂದರದನೆ ಅಘವೃಂದ ನಿವಾರಿಣಿ
ವಂದಿಸುವೆನು ಪೊರೆ ಗೋವಿಂದದಾಸನ ಜಯತು ೪

## ೩೭೪

ಸೀತೆ ಲೋಕಮಾತೆ ರಾಮನ ಪ್ರೀತೇ
ಭೂಮಿಜಾತೇ ಪಾತಕ ಹರೆ ಸರ್ವಾರ್ಥ
ಸಿದ್ಧಿಕರೆ ಖ್ಯಾತಿವಂತೆ ಸುನೀತೆ ಸುರಾರ್ಚಿತೆ ಪ

ತಾಯೆ ಮಹಾಮಾಯೆ ರಾಮನ ಛಾಯೆ ವಿಮಲ
ಕಾಯೆ ತೋಯಜಾಕ್ಷಿ ನಿನ್ನ ಸೇವೆಯ ಮಾಡಲು
ವಾಯುತನಯನಂತರ್ಯೆನುಪಾಯವ ೧

ಸಂಗರ ಕಾರಿಣಿಯೆ ರಾಮನ ಅಂಗನೆ
ಗುಣಮಣಿಯೇ ಭೃಂಗ ಕುಂತಳೆ
ಭವಭಂಗನಿವಾರಿಣಿ ಓಂಗದೆನ್ನ ಪೊರೆ
ಹೇಮಾಂಗಿ ಶೃಂಗಾರಿಯೆ ೨

ಚಂದ್ರವದನೆ ದೇವೀ ರಾಮಚಂದ್ರನ
ಸಂಜೀವೀ ಸಿಂಧುಬಂಧನ ಗೋವಿಂದನ
ದಾಸಗೆ ಬಂದು ಮೊಗವ ತೋರಿ ಚಂದದಿ ಪಾಲಿಸೆ ೩

## ೩೭೫

ಹನುಮಂತನ ಸ್ತುತಿ
ಅಂಜನಾಸಂಜಾತ ಮುಖ್ಯ –
ಪ್ರಾಣನೇ ಹನುಮಂತನೇ ಪ್ರಾಣನೇ ಹನುಮಂತನೇ
ಪ್ರಾಣನೇ ಹನುಮಂತನೇ ಬಹು ಬಲವಂತನೇ ಪ

ರಾಘವನಾಜ್ಞೆಯ ತಾಳ್ದು ಸಾಗರವ ದಾಟಿದನೇ ।
ಸಾಗರವ ದಾಟಿದನೇ ಬೇಗ ಲಂಕಿಣಿ ಗೆಲ್ದನೇ ಚ

ಬೇಗ ಲಂಕಿಣಿ ಗೆಲ್ದನೇ ।
ಪೋಗಿ ಲಂಕೆಯೊಳ್ ತಿರಿದನೇ ೧

ಧರಣಿಸುತೆಯನು ಹುಡುಕಿ ಕಾಣದೆ ।
ಪುರವನೊಯ್ಯುವೆನೆಂದನೆ ।
ಪುರವನೊಯ್ಯುವೆನೆಂದನೆ ।
ಮರಳಿ ಸೀತೆಯ ಕಂಡನೇ ।

ಮರಳಿ ಸೀತೆಯ ಕಂಡನೇ ।
ಯೆರಗಿ ಉಂಗುರವಿತ್ತನೇ ೨

ಚೂಡಕವ ಕೈಗೊಂಡು ಬರಲಾ ।
ನೋಡಿ ಬನವನು ಮುರಿದನೇ ।
ನೋಡಿ ಬನವನು ಮುರಿದನೇ
ಖೋಡಿ ದೈತ್ಯರ ಗೆಲಿದನೇ ।
ಖೋಡಿ ದೈತ್ಯರ ಗೆಲಿದನೇ ।
ಕೈಗೂಡಿ ಸುಮ್ಮನೆ ಕುಳಿತನೆ ೩

ಪುರವನೆಲ್ಲವ ಸುಟ್ಟು ದಹಿಸುತ ।
ತಿರುಗಿ ರಾಮನ ಕಂಡನೇ ।
ತಿರುಗಿ ರಾಮನ ಕಂಡನೇ ।
ಚೂಡಕವ ಕೈಗಿತ್ತನೇ ।
ಚೂಡಕವ ಕೈಗಿತ್ತನೇ ।
ಗೋವಿಂದ ದಾಸನ ಪೊರೆವನೆ ೪

## ೩೭೬

ಜಯ ಜಯತು ಆದಿತ್ಯಸೋಮಗೆ
ಜಯತು ಕುಜಬುಧ ಗುರುವಿಗೆ ॥
ಜಯ ಜಯತು ಶುಕ್ರ ಶನೀಶಗೆ
ಜಯತು ಜಯತು ೧

ಶರಣು ಭಾನುವೆ ಶರಣು ಇಂದುವೆ
ಶರಣು ಭೌಮ ಸೌಮ್ಯ ಬೃಹಸ್ಪತೀ ।
ಶರಣು ಭಾರ್ಗವ ಶರಣು ಮಂದಗೆ
ಶರಣು ಸಿಂಹಿಕೆ ಸುತ ಶಿಖೀಶಗೆ
ಶರಣು ಶರಣು ೨

ಪಾಹಿ ಭಾಸ್ಕರ ಚಂದ್ರಾಂಗಾರಕ
ಪಾಹಿ ಶಶಿಸುತ ವಾಚಸ್ಪತಿ
ಪಾಹಿ ದೈತ್ಯಾಚಾರ್ಯ ರವಿಸುತ
ಪಾಹಿ ಗೋವಿಂದದಾಸ ನಮಿಸುವೆ
ನವಗ್ರಹಾದ್ಯರಿಗೆ ನಮೋ ನಮೋ ಪಾಹಿ ೩

## ೩೭೭

ನಮಸ್ಕಾರ ಮಾಡುವೆನು ಭಾಸ್ಕರನಿಗೆ
ನಮಸ್ಕಾರ ಮಾಡುವೆನು ಪ

ನಮಸ್ಕಾರ ಮಾಡುವೆ ಸಮವರ್ತಿ ತಾತಗೆ
ಕುಮುದ ವಿರೋಧಿಗೆ ಕಮಲಮಿತ್ರನಿಗೆ ಅ.ಪ

ತಮವೆಂಬ ಯಾಮಿನಿಯ ನಿವಾರಿಸಿ
ದ್ಯುಮಣಿ ಶೋಭಿಸೆ ಭೂಮಿಯ
ನಮಿಸಿದ ಭಕ್ತರ ದೋಷನಾಶವಗೈದ
ಅಮಿತ ಮಂಗಳದ್ವಯ ಅಯನ ಆದಿತ್ಯಗೆ ೧

ಉರಗರೂ ಗಂಧರ್ವರು ಅಪ್ಸರ ಸ್ತ್ರೀಯರ
ಧರಣಿ ಸುರರು ಯಕ್ಷರು
ಪರಿಪರಿಯಲಿ ಬಂದು ಸೇವೆಯನೆಸಗಲು
ಭರದಿಂದ ಬರದಿ ಸಂಚರಿಸುವರ್ಕಗೆ ೨

ಗಾಲಿ ಒಂದರ ರಥದೀ ಬಂಧಿಸಿದಂಥ
ಏಳಶ್ವಗಳ ಮಧ್ಯದೀ
ಕಾಲಿಲ್ಲದರುಣನು ಸಾರಥಿಯಾಗಿರೇ
ಮೂರ್ಲೋಕವನು ಸುತ್ತಿ ಬೆಳಗುವ ತರಣಿಗೆ ೩

ಮಾಸಕ್ಕೆ ಒಂದೊಂದರ ಸಂಖ್ಯೆಯೊಳ್
ರಾಶಿ ಚಕ್ರದಿ ಸಂಚಾರ

ದೇಶದಿ ಪ್ರಾಣಿಗಳಾಯುಷ್ಯವ ಸೆಳೆಯುವ
ದೋಷವರ್ಜಿತ ಕಮಳಸಾಕ್ಷಿ ಮಾರ್ತಾಂಡಗೆ ೪

ಹಿರಣ್ಯರೇತಸ್ಸು ಭಾನು ನವಗ್ರಹಾ–
ದ್ಯರೊಳು ಶೋಭಿಸುತೀರ್ಪನು
ಧರಣಿಗೆ ಲಕ್ಷಯೋಜನ ದೂರ ತೋರುವ
ಹರ ಗೋವಿಂದ ದಾಸನೊಡೆಯ ಪ್ರಭಾಕರಗೆ ನಮಸ್ಕಾರ ೫

## ೩೭೮

ಪೂರ್ಣ ಚಂದ್ರನ ನೋಡ್ವ ಬನ್ನಿರೊ
ಪೌರ್ಣಮಿಯ ದಿನರಾತ್ರಿಯೊಳ್ ಪ

ಕಿರಣದಲಿ ರಾಹುಕೇತು ಕಲೆಯಿರೆ
ಗ್ರಹಣವೆಂಬ ಪುಣ್ಯಕಾಲವೂ ಅ.ಪ

ಸೋಮನನು ಶಿಶುತನದಿ ರಘುಪತಿ
ಕಾಮಿಸಿದ ಕೈಯಾಟಕೆ
ಕಾಮಹರ ಶಿರದಲ್ಲಿ ಧರಿಸಿದ
ಉಡುಗಣದ ಪತಿ ಚಂದ್ರನ ೧

ದಕ್ಷಸುತೆಯರ ವರಿಸಿ ಚಂದ್ರನು
ಇಷ್ಟವಿಡೆ ರೋಹಿಣಿಯೊಳು
ದಕ್ಷಶಾಪದಿ ಕೃಷ್ಣಪಕ್ಷದಿ
ಕ್ಷಯಿಸಿ ಕಾಣನಮವಾಸೆಯೊಳ್ ೨

ಏರುತೇರುತ ಕಳೆಯ ತೊರೆವ
ಧಾರುಣಿಗೆ ಶುಕ್ಲಪಕ್ಷದೀ
ವಾರಿಧಿಗೆ ಭರತಿಳಿತ ಚಂದ್ರನು
ತೋರೆ ಅಸ್ತಮ ಉದಯದೀ ೩

ಬೃಹಸ್ಪತಿಯ ಸತಿಯಿಂದ ತನಯನ
ಪಡೆದು ಹೆಸರಿಡೆ ಬುಧನೆಂದೂ
ಶಶಿಯ ವಂಶಕೆ ಆದಿಯಾದನು
ನವಗ್ರಹಾದ್ಯರೊಳ್ ನಿಂದರೂ ೪

ಧರೆಗೆ ದ್ವಯ ಲಕ್ಷ ಯೋಜನದೊಳಿರೆ
ಎರಡು ಅಯನೊಂದು ಮಾಸಕೆ
ಮರವು ಹುಲು ಗಿಡ ಬಳ್ಳಿ ಪ್ರಾಣಿಯ
ಅಮೃತ ಕಿರಣದಿ ಬೆಳೆಸುವ ೫

ಗ್ರಹಣ ಕಾಲದಿ ಸ್ನಾನಗೈಯುತ
ದಾನ ಧರ್ಮವ ಮಾಡುತ
ಮೌನದಲಿ ಗೋವಿಂದನಂಘ್ರಿಯ
ಧ್ಯಾನಿಸಲು ಫಲವಕ್ಷಯ ೬

## ಲೋಕನೀತಿ

### ೩೭೯

ಇಂದೀಗ ಹರಿದಿನವು ಏಕಾದಶಿಯೆಂದು
ಶೋಭಿಪ ದಿನವು ಪ

ಚಂದಾದಿ ವಿಷ್ಣುಸಾಯುಜ್ಯ ಹೊಂದುವುದಕ್ಕೆ
ಅಂದವಾಗಿಹ ದಿನ ಸಂದೇಹವಿಲ್ಲವು ಅ.ಪ

ಶರಧಿ ಮಥಿಸೆ ಸುಧೆಯೂ ಬರಲು ಕಂಡು
ದುರುಳರೊಯ್ಯಲೂ ಹರಿಯೂ
ಸರ್ವರಿಗುಪವಾಸವೆಂದು ತಾನ್ ಸೆಳೆದನು
ವರವಿತ್ತ ಮಾಸಕ್ಕೆ ಎರಡೇಕಾದಶಿಯೆಂದೂ ೧

ದಶಮಿ ಒಂದಶನಾಗ್ಯೆದೂ ಏಕಾ
ದಶಿ ದಿವಸುಪವಾಸವಿರ್ದು
ಕುಸುಮನಾಭನ ಪೂಜೆಗ್ಯೆದು ತೀರ್ಥವಗೊಂಡು
ನಿಶೆಯೊಳ್ ಜಾಗರವಿದ್ದು ಹರಿಕಥೆ ಕೇಳ್ವುದೂ ೨

ವೀಳ್ಯ ಭೋಜನ ಪಾನವೂ ಈ ದಿನ ರತಿ
ಕೇಳಿ ನಿದ್ರೆಯು ವರ್ಜ್ಯವೂ
ಖೂಳನಾದರೆ ಯಮನಾಳೊಳ್ ಪಿಡಿದೊಯ್ದು
ಗೋಳುಗುಡಿಸುವ ಹೇಳಲಸಾಧ್ಯವು ೩

ಅಶನಕ್ಕೆ ಬಿಸಿ ಮಳಲು ತಿನಿಸೀ ವೀಳ್ಯ
ವ್ಯಸನ ಪಾನಕೆ ಉಕ್ಕಂ ತರಸಿ ಬಾಯ್ಗೆರಸಿ
ಮುಳ್ಳು ಹಾಸಿಗೆ ಮೇಲೆ ಮಲಗೆಂದು ಹೊ–
ರಳಿಸಿ ಉರಿಕಂಭ ಧರಿಸೆಂಬರ್ ಸತಿ ಪುರುಷರಿಗೆ ೪

ಧ್ರುವ ಹರಿಶ್ಚಂದ್ರ ಪ್ರಹ್ಲಾದ ತನ್ನ
ಭುವನ ಕಟ್ಟಳೆಯೊಳ್ ರುಕ್ಮಾಂಗದ
ಭವಹರ ವ್ರತಗ್ಯೆದು ಹರಿಪಾದ ಸೇರ್ವರು
ಭುವನದಿ ಸರ್ವರಿಗ್ಯೋಗ್ಯವೀ ವ್ರತವೂ ೫

ದ್ವಾದಶಿ ವ್ರತವೆಂಬುದು ಶ್ರೇಷ್ಠವು ಬೇಗ
ಸಾಧಿಸಿ ಪಾರಣೆಗ್ಯೆವುದೂ
ಮೇದಿನಿಯೊಳಂಬರೀಷ ನೀ ವ್ರತಗ್ಯೆದೂ
ಆದಿಮೂರುತಿ ಗೋವಿಂದನ ಪಾದಸೇರ್ದನೂ ೬

## ೩೮೦

ಹಂಗಿಗನಾಗಬೇಡಾ । ಏ ಮನವೇ । ಹಂಗಿಗನಾಗಬೇಡಾ ।
ಆ ಯಮನಿಗೆ ಹಂಗಿಗನಾಗಬೇಡಾ ಪ

ಕಾಮಕ್ರೋಧವು ಲೋಭಮದ ಮಾತ್ಸರ್ಯಗಳೆಂಬ ।
ವ್ಯಾಮೋಹಾದಿಗಳಿಗೆ ಸಿಲುಕಿ ಸುಮ್ಮನೆ ನೀನು ೧

ಪರದಾರಾಂಶದಿ ಮನ । ವಿರಿಸಿ ಕಾಮಾದಿ ವ್ಯರ್ಥ ।
ಗುರುಹಿರಿಯರ ಜರೆ । ದಾಡಿ ಗರ್ವದಿ ನೀನು ೨

ಸತಿಸುತರೆಂದೆಂಬ । ಮೋಹಪಾಶಕೆ ಸಿಕ್ಕಿ ।
ಅತಿಥಿ ಸತ್ಕಾರ ಮಾಡದೆ । ಲೋಭತ್ವದಿ ನೀನು ೩

ಧರಣಿ ದಾನಾದಿಗಳ । ತನು ಶಕ್ತಿ ಮದದಿಂದ ।
ಪರರಿಗೆ ಕೇಡನ್ನೆ ಬಗೆವ ಮತ್ಸರದಿ ನೀ ೪

ನೆಂಟರಿಷ್ಟರು ಸರ್ವ । ಮಂದಿ ಸೇವಕರೆಂದು ।
ತುಂಟತನದಿ ಗೋ । ವಿಂದನಾ ಪಾದಮರತು ನೀ ೫

## ೩೮೧

ನಾರಾಯಣಯೆಂದರಾಗದೇ ನಿನ್ನ
ಘೋರ ದುರಿತ ದೂರ ಹೋಗದೇ
ವಾರಿಜನಾಭನ ವಲಿಸದೇ ನರ
ಶಾರೀರದಲಿ ಬಂದು ಫಲವೇನಿದೆ ೧

ಸಾರ ಷಡ್ರಸಾನ್ನ ಭುಜಿಸುತ್ತ ಪರ
ದಾರಾಂಶದಲಿ ಮನವಿರಿಸುತ್ತಾ
ಕ್ರೂರಕೃತ್ಯವ ನಿತ್ಯ ಗೈಯ್ಯುತ್ತ ಯಮ–
ನೂರಿಗೆ ಪೋಗುವದೇನು ಹಿತ ೨

ನಡೆವಾಗ ನುಡಿವಾಗ ಕುಡಿವಾಗ ವೀಳ್ಯ
ಮಡಿವಾಗ ಕೊಡುವಾಗ ಪಡೆವಾಗ ಜಲಜನಾಭನ
ಎಡಬಿಡದೀಗಾ ನೆನೆ
ಕಡೆಗೆ ನಾಲಿಗೆ ಬಿದ್ದು ನುಡಿಯಲಾಗಾ ೩

ಈಕ್ಷಣತ್ರಯದಲಿ ಸಿಲುಕುತ್ತಾ ಒಂದು
ನಶಿಸೆ ತಾಡಕ ಕೃತಿ ಗೈಯುತ್ತಾ
ಎಸೆವ ಮೂರು ವೈರಾಗ್ಯ ತಾಳುತ್ತಾ ಸುತ್ತು
ಈಶ ತ್ರಿಮೂರ್ತಿ ೪

ಜನಿಸುತ್ತಲೇನ ತಂದಿರುವೆಯೋ ನಾಳೆ
ತನುವನೀ ..... ಲೇನನೊಯ್ವೆನೊ
ತನುಮಧ್ಯ ಭಾಗ್ಯದಿ ಮೆರೆವೆಯೋ ನಿನ್ನ
ಜನುಮದ ನೆಲೆಯ ನೀನರಿವೆಯೊ ೫

ಇಂದು ಸುಕರ್ಮ ಮಾಡದೆ ನೀನು ನಾಳೆ
ಎಂದರೆ ತನುವಿಗೆ ನಿಜವೇನು
ಚಂದದಿ ಸ್ಮರಿಸು ಗೋವಿಂದನು ತಾನೆ
ಬಂದು ದಾಸರ ನೋಡಿ ಪೊರೆವಾನು ೬

## ೩೮೨

ಏನು ಫಲ ಇದು ಏನು ಫಲ
ಏನು ಫಲ ಇನ್ನೇನು ಫಲ ಪ

ಬೇವಿನ ಮೂಲಿಕೆ ಬೆಲ್ಲವ ಸುರಿದರೆ
ಹಾವಿಗೆ ಹಾಲೆರೆದಷ್ಟೆ ಫಲ
ಮಾವಿನ ಮರದಡಿ ಗಾಯನ ಹಾಡಲು
ಸಾವಿನ ಮನೆಯೊಳಗತ್ತ ಫಲ ೧

ಕೋಣನ ಮುಂದೆ ವೀಣೆಯ ನುಡಿಸಲು
ಮಾಣಿಕ್ಯ ಮರ್ಕಟಗಿತ್ತ ಫಲ
ಶ್ವಾನನ ಬಾಲವ ನಳಿಗೆಯೊಳಿಟ್ಟರೆ
ಹೀನ ಕುಲಜ ಮಡಿಯುಟ್ಟ ಫಲ ೨

ಮೂರ್ಖಗೆ ಬುದ್ಧಿಯ ಮಾತನು ಪೇಳಲು
ಗೋರ್ಕಲ್ಲ ಮೇಲೆ ಮಳೆ ಹೊಯ್ದ ಫಲ
ಊರ್ಕತಿ ಕಂಟಕನಾಗಿಹ ಮನುಜನು
ನೂರ್ಕಾಲ ಬದುಕಿದರೇನು ಫಲ ೩

ಸೂಳೆಯ ಬಳಿಯಲಿ ಅಂತರ್ಯ ನುಡಿದರೆ
ಗಾಳಿಗೆ ಕಸ್ತೂರಿ ಇಟ್ಟ ಫಲ
ಕೋಳಿಯ ಕಾಲಿಗೆ ಗೆಜ್ಜೆಯ ಕಟ್ಟಲು
ನೀಲಿಯ ನೀರೊಳು ತೊಳೆದ ಫಲ ೪

ಹಂದಿಯ ಕೊರಳಿಗೆ ಹಾರವ ಹಾಕಲು
ಅಂಧಗೆ ಕನ್ನಡಿ ಕೊಟ್ಟ ಫಲ
ಮಂಧರಧರ ಗೋವಿಂದನೊಳ್ವೈರದಿ
ಇಂದ್ರನು ಮಳೆ ಸುರಿದ ಫಲ ೫

## ೩೮೩

ಸುಮ್ಮನೆ ವಿಷ್ಣುವ ಜರಿದೀರಿ ಯಾಕೆ
ಸುಮ್ಮನೆ ಶಿವನಿಂದ್ಯ ಗೈವಿರಿ ಪ

ಬ್ರಹ್ಮ ಸುಜ್ಞಾನದಿ ಹರಿಹರರಾರೆಂಬ
ಮರ್ಮವರಿತು ಧರ್ಮಾಧರ್ಮ ಯೋಚಿಸದೀಗಾ ಅ.ಪ

ಗರುಡವಾಹನನು ಶ್ರೀವರನು ನೋಡಿ
ಉರಗಭೂಷಣನು ಗೌರೀಶ್ವರಗೂ
ಗರುಡೋರಗರ ದ್ವೇಷ ಹರಿಹರರೊಳಗುಂಟೆ
ಎರಡು ಮೂರ್ತಿಗಳೇಕ ರೂಪವೆಂದರಿಯಾದೆ ೧

ಸ್ಮರನ ತಾತನು ನಾರಾಯಣನು ಕೇಳಿ
ಸ್ಮರನ ವೈರಿಯು ತ್ರಿಗಣೇಶ್ವರನು

ಹರಿನಿಂದನೆ ಶಿವ ಶಿರದಿ ತಾನ್ ಧರಿಸಿದ
ಹರನ ಲಿಂಗವ ನಿತ್ಯ ಪೂಜಿಸಿ ನಮಿಸುವಾ ೨

ಕ್ಷೀರಾಬ್ಧಿ ವಿಷ್ಣುಗೆ ಸತಿ ಗೃಹವೊ ಶಿವನ
ನಾರೀ ಮಂದಿರ ಹಿಮಾಲಯವೂ
ನಾರೀ ರಮೆಯ ಹೃದಯದಿ ಧರಿಸಿದ ವಿಷ್ಣು
ಮಾರನಂತಕ ಉಮೆಗಿತ್ತನರ್ಧಾಂಗವ ೩

ಬಲಿಯೊಳ್ ಬಾಗಿಲ ಕಾಯ್ದ ಹರಿಯೂ ಬಾಣ
ಗೊಲಿದು ದ್ವಾರದಿ ನಿಂತ ಹರನೂ
ಗೆಲಿದು ತಾ ಅಜಾಮಿಳನ ಸಲಹಿದ ವಿಷ್ಣು
ಒಲಿದು ಮಾರ್ಕಾಂಡೆಗಂತಕನ ಮರ್ದಿಸೆ ಶಿವ ೪

ಚೋರನೆನ್ನುವಿರಿ ಕೇಶವನ ಬಲೋ–
ತ್ಕಾರಿ ಎಂಬಿರಿ ಪರಮೇಶ್ವರನಾ
ನಿರ್ವಾಣಿ ಬೌದ್ಧನು ಶರ್ವ ದಿಗಂಬರ
ಹರಿಯು ಜಾರನು ಜಗಪೀತ ಶಂಕರಗೆಂದು ೫

ರುದ್ರಾಕ್ಷಿ ಭಸ್ಮಲೇಪನವು ಶಿವಗೆ
ಮುದ್ರೆಯು ತುಳಸಿಮಣಿ ಸರವು
ಊರ್ಧ್ವ ಪೌಂಡ್ರಕ ಗೋಪಿ ಕೃಷ್ಣಾಜಿನಾಸನ
ರುದ್ರ ಜಡೆಯ ಪಠಿಸು ವ್ಯಾಘ್ರ ಚರ್ಮದಿ ಕುಳಿತು ೬

ಸ್ಮಾರ್ತರ್ ವೈಷ್ಣವರು ಮತ್ಸರದೆ ದ್ವಯ
ಮೂರ್ತಿಯೊಳ್ ಸಮದೆ ಯೋಚಿಸದೇ
ವ್ಯರ್ಥ ಕೆಡುವಿರಿ ಗೋವಿಂದನ ದಾಸರು
ಸ್ವಾರ್ಥವಾಗದು ಕಾರ್ಯ ಹರನ ಭಕ್ತರು ಕೇಳಿ ೭

## ३೮೪

ಹೆಸರು ತಂದಿರ್ಯಾ ಭಿಕ್ಷಕೆ ।
ಹೆಸರು ತಂದಿರ್ಯಾ ಪ

ಅಸಮವೀರರೆಂಬ ಹೆಸರು ।
ಕುಶಲಗಾರರೆಂಬ ಹೆಸರು
ಶಶಿಯಂತೆ ಶೋಭಿಸುವ ಶಿಶುವು ।
ಕುಲಕೆ ಯೋಗ್ಯನೆಂಬ ಹೆಸರು ॥ಹೆಸರು॥ ೧

ದಾನಶೀಲರೆಂಬ ಹೆಸರು ।
ಮಾನವಂತರೆಂಬ ಹೆಸರು ।
ಸಾನುರಾಗದಲ್ಲೊ ಆತ್ಮ ।
ಜ್ಞಾನಿಗಳೆಂದೆಂಬ ಹೆಸರು ೨

ಹಿರಿಯ ಮನೆತನದ ಹೆಸರು ।
ಗುರುಗಳಾ ಭಕ್ತಿಯಲಿ ಹೆಸರು ।
ಪರಮ ಭಾಗವತರ ತೆರದಿ ।
ಹರಿಯ ಶರಣರೆಂಬ ಹೆಸರು ೩

ಪುತ್ರವತಿಯರೆಂಬ ಹೆಸರು ।
ಸತ್ಯಶೀಲೆಯರೆಂಬ ಹೆಸರು ।
ಪತಿಯ ಸೇವೆಯಲ್ಲಿ ನಿರತ ।
ಪತಿವ್ರತೇಯರೆಂಬ ಹೆಸರು ೪

ಸತ್ಯಸಂಧರೆಂಬ ಹೆಸರು ।
ತತ್ವಜ್ಞರೆಂದೆಂಬ ಹೆಸರು ।
ಚಿತ್ತ ಶುದ್ಧರೆನಿಸಿ । ಗೋವಿಂದಾನ ।
ದಾಸರೆಂಬ ಹೆಸರು ೫

## ३೮೫

ಸಾಕ್ ನಿನ್ನ ಸಂಸಾರವೂ ಓ ಮನವೇ
ಯಾಕ್ ನಿನಗೀ ವ್ಯಾಪಾರವೂ ಪ

ಬೇಕ್ ಬೇಕಾದುದ ತಂದು
ಹಾಕಿದುದೆಲ್ಲವ ತಿಂದು ಕಾಗೆ–
ಯಂತೆ ಕೂಗುವರು ಜೋಕೆ
ಜೋಕೆ ಪೋಕ ಮನವೇ ಅ.ಪ

ಯಜಮಾನ್ನೆ ಸಿಕ್ಕೀತೆಂದು ಪೌರುಷವ್ಯಾಕೋ
ಅಜಪಟ್ಟಕ್ಕೊಡೆಯನೆಂದು ಟ್ರೆಜರಿ ಖಜಾನಿ ಕೀಲಿಕೈ
ಸಿಕ್ಕಿತೆನುತ್ತಿಗ್ಗಿ ಸುಜನ ಸಜ್ಜನರ ಮನ್ನಿಸದ ನಿ–
ನ್ನೆಜಮಾನ್ಕೆ ಸುಡುವುದು ಮನವೇ ೧

ಹೊಟ್ಟೆಗೂ ಸಮ ತಿನ್ನದೇ ಒಳ್ಳೆಯದೊಂದು
ಬಟ್ಟೆ ಸಹ ಹೊದೆದುಕೊಳ್ಳದೆ
ಕಷ್ಟ ಪಟ್ಟು ಹಣ ಗಳಿಸಿಟ್ಟು ಮರುಗದೆ
ದುಷ್ಟ ಮಕ್ಕಳು ಜುಗಾರಾಡಿ ಕಳೆದರೆಂದು
ಕೆಟ್ಟ ಪಾಪಿ ಮನವೇ ೨

ಋಣ ರೂಪಸಂಸಾರಕೇ ನಿನಗೆ ಕೈಲಿ ಹಣ
ಇಲ್ದೀ ವ್ಯಾಪಾರ್‍ಯಾಕೆ ಗುಣವಿಲ್ಲದ್ದೆಂಡತಿ
ಬಿನವಿಲ್ದ ನೆಂಟರು ಬಣಗು ಮಕ್ಕಳಿಗಾಗಿ
ದಣಿವುದ್ಯಾತಕೊ ವ್ಯರ್ಥ ಹೆಣದತ್ತ ಮನವೇ
ಬಂಧು ಬಾಂಧವರೆಲ್ಲರೂ ಸಂಪದವಿರೆ
ಬಂದು ಸೇವಿಸಿ ಹೊಗಳ್ವರು
ಇಂದು ನೀ ಗತಿಹೀನನೆನಿಸಲು ಜಗಳವ
ಸಂಧಿಸಬೇಕಾಗಿ ನಿಂದಿಸುವರು
ಹಿಂದಿನಿಂದಲಿ ಪರಿಪರಿ ಮಂಗಬುದ್ಧಿ ಮನವೇ ३

ಯಾರಿಗೋಸುಗ ಬಂದಿಲ್ಲಿ ದಣಿವೆ ಸಂಗ–
ಡ್ಯಾರೂ ಬರುವರ್ ಕಡೆಯಲಿ
ಯಾರು ಯಮನ ಶಿಕ್ಷೆ ತಡೆವೆನೆಂಬರು ಪೇಳ್
ವಾರಿಜನಾಭ ಗೋವಿಂದನಲ್ಲದೆ ಮುಂದೆ
ಯಾರಿಗ್ಯಾರುಳಿಂಬ್ಬೇಳು ಮನವೇ ೪

## ೩೮೬

ಜಯಿಸಬೇಕು । ಮನವನು । ವೈಸಬೇಕು ಪ

ಜಯಿಸಬೇಕು ಅರಿಷಡ್ವರ್ಗವನು ।
ವೈಸಬೇಕು ಹರಿಚರಣದಿ ಮನವ ।
ಸೈಸಬೇಕು ಶೀತೋಷ್ಣದ ಬಾಧೆಯ ।
ಲೈಸಬೇಕು ಭವದುರಿತವನೂ ೧

ಗ್ರಹಿಸಬೇಕು ತವರ್ಚನ ಮರಣಸ್ಥಿತಿ ।
ಕಾಯಿಸಬೇಕು ಸುಕಾರ್ಯದಲಿ ।
ಗೈಸಬೇಕು ಪರ ಸೇವೆಗೆ ತನುವನು ।
ಮೋಹಿಸಬೇಕು ಕುಲಸತಿ ಪತಿಯ ೨

ಕ್ಯೊಸಬೇಕು ದುರ್ವಾಕ್ಯದ ರಸನೆಯ ।
ಸ್ಯಾಸಬೇಕು ಋಣ ರೋಗ ಸಸಿ ।
ಈಸಬೇಕು ಬಡತನದಲಿ ಮಾನವಾ ।
ಬೈಸಬೇಕು ಗೋವಿಂದ ದಾಸರ ಸಂಗ ೩

## ೩೮೭

ನರರ ವಂಚಿಸಿದನೆಂದೆಂಬ । ಪೌರುಷವೇಕೋ ।
ಹರಿಯ ವಂಚಿಸಲಸಾಧ್ಯವು । ನಿನಗೆ ಮರುಳೆ ।

ದುರುಳರೊಡನಾಟದಲಿ ದುಷ್ಟ ಕಾರ್ಯವ ಮಾಡು ।
ನರಕದಲಿ ಮುಳುಗಿಸುವ ಯಮನು ನೋಡು ಪ

ಮೂಢ ಮತಿ ಕೇಳ್ ನರಗೆ ನೋಡಲೆರಡೇ ಕಣ್ಣು ।
ಗಾಢ ನಿದ್ರೆಯೊಳದನು ಮುಚ್ಚಿ ಮಲಗುವನೂ ।
ಗಾಢಾಂಧಕಾರದಲಿ । ಸೊಡರ ಹೊರತು ಕಾಣದದು ।
ರೂಢಿಯೊಳು ಸಹಸ್ರಾಕ್ಷ । ನನು ಮೋಸಗೊಳಿಸುವಾ ।
ಪಾಡೇನ ಬಲ್ಲೆ ಮರುಳೇ ೧

ಎರಡೇಳು ಜಗವನ್ನು ಧರಿಸಿರುವ ಹೃದಯದಲಿ ।
ಗರುಡ ವಾಹನನಾಗಿ ಧರೆಯೊಳ್ ಚರಿಸುವನು ।
ತರಣಿ ಶಶಿನೇತ್ರನೆಂದೆನಿಸಿ ಸರ್ವವನೋಳ್ಪ ।
ಪರಮಾತ್ಮನಾಗಿ ಪ್ರಾಣಿಗಳ । ಹೃದಯದಲಿ ।
ಹರಿಯು ನೆಲೆಸಿರ್ಪ ಕೇಳು ೨

ಇಂದೋರ್ವನನು ಮೋಸಗೊಳಿಸಿದಾ ದೋಷವಿದು ।
ಎಂದೆಂದಿಗೂ ನಿನ್ನ ಬೆನ್ನ ಬಿಡದೂ ।
ನಿಂದಿಗನು ನರಜನಕೆ ಗೋವಿಂದನಿಗೆ ದ್ರೋಹೀ ।
ಎಂದೆನಿಸಿ ಯಮನ ಹಂಗಿಗನಾಗಬೇಡ ನಾಳೆ ೩

## ೩೮೮

ಕಾಸು ಕನಕದಾಸೆಯಾದುದೇ । ಹರಿಗೆ ।
ದಾಸ ಜನರನೆಲ್ಲ ಮರೆತನೇ ಕಡೆಗೆ ಪ

ವಾಸುದೇವನು ಶ್ರೀನಿವಾಸನೆನಿಸಿಕೊಂಡು ।
ಶೇಷಗಿರಿಯ ಮೇಲೆ ವಾಸವಾಗಿರುವವಗೆ ಅ.ಪ

ಛಪ್ಪನ್ನ ದೇಶದ ಕಪ್ಪವ ತರಿಸುವ । ಒಪ್ಪಿ ಜನರ
ಸರ್ವ ತಪ್ಪಪಾಲಿಸುವ ।

ಸರ್ಪಶಯನ ನಮ್ಮ ತಾಪತ್ರೆ ಘನವೆನಲು ।
ಅರ್ಪಿತವಹುದೇ ತಿಮ್ಮಪ್ಪ । ವೆಂಕಟ ಪತಿಗೆ ॥ಕಾಸು॥ ೧

ಶನಿವಾರ ಶನಿವಾರ ಮನೆ ಮನೆ ಭಿಕ್ಷೆಗೈದು ।
ಮಿನುಗುವ ಡಬ್ಬಿಯೊಳಿಟ್ಟು ಜನರು ಪೂಜಿಸೆ ನಲಿದು ।
ವನಜಾಕ್ಷ ನಿನಗೆಂದು ಕಣಜಕ್ಕೆ ಸುರಿಯೆ ತಂದು ।
ಮನುಮಥ ಪಿತಗೆ ನಮ್ಮ ನೆನಪು ಎಂತಹುದೋ ॥ಕಾಸು॥ ೨

ಗಂಧ ಚಂದನ ನಾಮತೀರ್ಥ ಪ್ರಸಾದ ।
ಸುಂದರ ವಾಹನ ಹರಕೆ ವಿನೋದ ।
ಚಂದದಿ ನೋಡಲ್ ಹರಿಯ ಧನವಿಲ್ಲದಾಗದ ।
ಸುಂದರಾ ಮೂರ್ತಿ ಗೋವಿಂದಗೆ ಸಾರ್ವದಾ ೩

## ೩೮೯

ಸಂತೋಷ ಕಂಡ್ರೀ ಸ್ವಾಮಿ ಸಂತೋಷ ಕಂಡ್ರೀ ಪ

ಚಿಂತೆ ಚಿಂತೆ ಬಿಟ್ಟೀ ಶಾಂತದೂತನಾಗಿ
ಕಂತುಪಿತನ ಚಿಂತಿಸುವಗೆ ಸಂತೋಷ ಕಂಡ್ರೀ ೧

ಕೆಟ್ಟ ದುಷ್ಟ ಕಾರ್ಯ ಮಾಡೀ ಕಷ್ಟ ನಷ್ಟಗಳಿಗೆ ಸಿಕ್ಕಿ
ಹೊಟ್ಟೆ ಹೊರೆವ ದುಷ್ಟಗೆಲ್ಲ ಸಂತೋಷ ಕಂಡ್ರಿ ೨

ಆಶಾಪಾಶ ತ್ಯಜಿಸಿ ಹಲವು ಲೇಸು ಶ್ರೇಯ ಕಾಯಗೈದ
ಈಶನಂಘ್ರಿ ದಾಸರಿಗೆ ಸಂತೋಷ ಕಂಡ್ರಿ ೩

ತರುಣಿ ತರುಣರಿದ್ದರೇನು ಧರಣಿಗರನಾದರೇನು
ಹರಿಯ ಕರುಣವಿಲ್ಲದುಂಟೇ ಸಂತೋಷ ಕಂಡ್ರೀ ೪

ಕಾಯದಲ್ಲಿ ಮೋಹ ತೊರೆದು ಜೀಯ ಕೃಷ್ಣರಾಯನೆಂದು
ನ್ಯಾಯವಂತ ಜೀವರೀಗೆ ಸಂತೋಷ ಕಂಡ್ರೀ ೫

ಯುಕ್ತಾಯುಕ್ತ ಯೋಚಿಸದೆ ಪಕ್ತ ಕಾಮಸಕ್ತನಾದ
ರಕ್ತಮದದ ಶಕ್ತಿಗಿಹುದೆ ಸಂತೋಷ ಕಂಡ್ರಿ ೬

ತಂದೆ ತಾಯಿ ನೀನೆಂದೆಂಬ ಬಂಧು ಬಳಗ ನೀನೆಂದೆಂಬ
ಗೋವಿಂದನಾ ದಾಸರ್ಗೆಲ್ಲ ಸಂತೋಷ ಕಂಡ್ರೀ ೭

## ೩೯೦

ಯಾಕಿಂತು ಬಳಲುವೆಯೊ ।
ಈ ಕಷ್ಟಗಳಲೀಗ ।
ಲೋಕ ಮಾತೆಯ ಭಜಿಸಿ ।
ಸುಖಿಯಾಗು ಮನವೆ ।
ಸಾಕು ಸುಡು ಸಂಸಾರ ।
ಬಿಡು ಮನವೆ ಅಹಂಕಾರ ।
ಇಂದ್ರಿಗಳಿಗುಪಚಾರಗೈದು ಬಂದೆ ೧

ನೋಡು ದೇವಿಯ ಚರಣ ।
ಮಾಡು ದೇವಿಯ ಪೂಜೆ ।
ಓಡು ದೇವಿಯ ಸ್ಥಳಕೆ ।
ನೀಡು ದೇವಿಗೆ ಫಲ ಪುಷ್ಪ ನೈವೇದ್ಯ ।
ಹಾಡು ದೇವಿಯ ಚರಿತೆ ॥
ಆಡು ದೇವಿಯ ಮುಂದೆ ।
ಬೇಡು ದೇವಿಯೊಳ್ ಮುಕ್ತಿ ।
ಕೂಡು ದೇವಿಯ ಭಕ್ತ ಜನರ ತಂಡಾ ೨

ಕೇಳು ದೇವಿಯ ಕಥೆಯ ।
ಪೇಳು ದೇವಿಯೊಳ್ ಸ್ಥಿತಿಯ ।
ಗೋಳು ದೇವಿಗೆ ತಿಳಿಸಿ ।
ಬೀಳು ದೇವಿಯ ಪಾದದ್ವಯಗಳಲ್ಲಿ ॥

ಬಾಳು ದೇವಿಯ ಕೃಪೆಯೊಳ್ ।
ತಾಳು ದೇವಿಯ ವ್ರತವ ।
ನಾಳೆ ದೇವಿಯ ಸೇರಿ । ಆಳು
ದೇವಿಯು ಕೊಟ್ಟ ಸೌಭಾಗ್ಯ ಪದವಿ ೩

ದೇವಿ ಪದ ತೀರ್ಥ ಕುಡಿ ।
ದೇವಿ ಪ್ರಸಾದ ಪಡಿ ।
ದೇವಿ ಚರಣವನು ಹಿಡಿ ।
ದೇವಿ ಮೂರ್ತಿಗೆ ಪ್ರದಕ್ಷಿಣೆಯ ಮಾಡಿ ॥
ದೇವಿ ನಿರ್ಮಾಲ್ಯ ಮುಡಿ ।
ದೇವಿ ಗಂಧ ಮೈಗೆ ಬಡಿ ।
ದೇವಿ ಸೇವೆ ಮಾಡು ।
ದೇವಿ ನೆವೇದ್ಯ ಉಣಲಿಷ್ಟಪಡು ನೀನು ೪

ಮನೆಯು ನಿನ್ನದು ದೇವಿ ।
ಧನವು ನಿನ್ನದು ದೇವಿ ।
ತನಯ ನಿನ್ನವ ದೇವಿ ।
ತನುಮನವು ನಿನ್ನದೆಂದರ್ಪಿಸಲು ದೇವಿ ॥
ದಿನ ದಿನವು ದೇವಿ ನಿನ್ನ ।
ಘನದಿಮನ್ನಿಸುವಳೈ । ಅನುಮಾನ ಬೇಡ ।
ಗೋವಿಂದದಾಸನ ಒಡತೀ । ಶ್ರೀ ಲಕ್ಷ್ಮೀದೇವಿ ೫

## ಮಂಗಳ ಪದಗಳು

### ೩೯೧

ಕೋಲು ಕೋಲೆನ್ನಿರೆ ರನ್ನದ ಕೋಲು ಕೋಲೆನ್ನಿರೇ
ಕೋಲು ಕೋಲೆಂದು ರನ್ನದ ಕೋಲ ಧರಿಸಿ ನಿಂದು
ಲೋಲಾಕ್ಷಿ ದೇವಿ ಚರಿತೆಯ ಸ್ಮರಿಸುತ್ತ ರನ್ನದಾ ಪ

ಲೋಲಾಕ್ಷಿ ದೇವಿ ಚರಿತೆ ಸ್ಮರಿಸುತ್ತ ನಲಿದಾಡಿ
ಪಾಲಿಸೆ ಧರೆಗೆ ವರವ ಕರದೀಗಳ್ ರನ್ನದಾ ೧

ಆದಿದೇವಿಯು ಚತುರ್ವೇದ ಗರ್ಭನ ನಿತ್ಯ
ಪಾದಸೇವೆಯ ಗೈವಳ್ ಮೋದದಿ ರನ್ನದಿ
ಕೋಲು ಪಾದಸೇವೆಯ ಗೈವಳ್
ಮೋದದಿ ಮಾಧವನ ಪೂಜಿಸಿ ನಮಿಸಿ
ಕ್ಷೀರಾಬ್ಧಿಯೊಳ್ ರನ್ನದಾ ೨

ಘೋರ ದಾನವರೆಲ್ಲ ಧಾರಿಣಿ ಬಾಧಿಸಲು
ವಾರಿಜೋದ್ಭವ ನಾರದಾದ್ಯರು ರನ್ನದಾ
ವಾರಿಜೋದ್ಭವ ನಾರದಾದ್ಯರು ದೇವಿಯೊಳು
ದೂರಿಡೆ ಕೇಳಿ ಅಭಯವಿತ್ತಳು ರನ್ನದಾ ೩

ಸುರರು ದಾನವರೆಲ್ಲ ಶರಧಿಯ ಮಥಿಸಲು
ಅರವಿಂದಮುಖಿ ಲಕ್ಷ್ಮಿ ಜನಿಸಿದಳೆ ರನ್ನದ
ಅರವಿಂದ ಮುಖಿಲಕ್ಷ್ಮಿ ಜನಿಸಲು ನಾರಾಯಣ
ನರಸಿಯೆಂದೆನಿಸಿ ಮೆರೆದಳು ರನ್ನದಾ ೪

ಅಘವಿನಾಶಿನಿ ಜಗದಾಂಬಿಕೆ ಕೀರವಾಣಿ
ಸುಗುಣೆ ಸುಂದರಿ ಸುಶೀಲೆಯು ಫಣಿವೇಣಿ
ನಗುವ ಮೊಗದ ಚಂದ್ರವದನೆಯು ರನ್ನದಾ ೫

ದುಷ್ಟ ನಿಗ್ರಹರೆಂದು ಸೃಷ್ಟಿಗೆ ನಡೆತಂದು
ಶ್ರೇಷ್ಠಾದಿ ನೂರೊಂದು ರೂಪಾದಳ್ ರನ್ನದಾ
ಶ್ರೇಷ್ಠಾದಿ ನೂರೊಂದು ರೂಪಾಗಿ ಶಿಕ್ಷಾ ರಕ್ಷಾ
ಧ್ಯಕ್ಷಳೆನಿಸಿ ಖಡುಗ ಧರಿಸಿದಳ್ ರನ್ನದಾ ೬

ಘೋರ ಮಹಿಷನ ಸಂಹಾರಕೆಂದು ಬಂದು
ಮಾರಾಂತು ರಣದಿ ದುರುಳನ ರನ್ನದಾ

ಮಾರಾಂತು ರಣದಿ ದುರುಳನ ಮರ್ದಿಸಿ
ಈರೇಳು ಜಗವಾ ಪೊರೆದಳು ರನ್ನದಾ ೭

ಶುಂಭಾ ನಿಶುಂಭ ಖಳರೆಂಬ ದೈತ್ಯರ ಗೆಲಿದು
ಅಂಬುಜಾಲಯದಿ ನೆಲಸಿದಳ್ ರನ್ನದಾ
ಅಂಬುಜಾಲಯದಿ ನೆಲೆಸಲು ಪೂಜಿಸಿದ
ಕುಂಭಿನಿ ಸುರರಿಗೊಲಿದಾಳು ರನ್ನದಾ ೮

ಚಂಡ ಮುಂಡಕರೆಂಬ ಘೋರ ದೈತ್ಯರನೆಲ್ಲ
ತುಂಡು ತುಂಡಾಗಿ ಶಿರ ಖಂಡೀಸಿ ರನ್ನದಾ
ತುಂಡು ತುಂಡಾಗಿ ಶಿರ ಖಂಡೀಸಿ ಮೆರೆದಳು
ಚಂಡಿ ಕರಾಳಿ ಚಾಮುಂಡಿಗೇ ರನ್ನದಾ ೯

ರಕ್ತ ಬೀಜನ ಘೋರ ಶಕ್ತಿಯ ಪರೀಕ್ಷಿಸಿ
ಮುಕ್ತಿ ಪಥವ ತೋರೆ ಮಾಂಕಾಳಿ ರನ್ನದಾ
ಮುಕ್ತಿ ಪಥವ ತೋರೆ ಮಾಂಕಾಳಿ ಅರ್ಚಿಸಿದ
ಭಕ್ತರಿಗೊಲಿದು ನಲಿದಳ್ ರನ್ನದಾ ೧೦

ದೇವರಾಮನ ಸತಿಯಾಗಿ ಲಂಕೆಗೆ ಪೋಗಿ
ರಾವಣಾದ್ಯರನೆಲ್ಲ ಕೊಲಿಸೀದಳ್ ರನ್ನದಾ
ರಾವಣಾದ್ಯರನೆಲ್ಲ ಕೊಲಿಸೀದಳ್ ಸೀತೆಯು ತಾ
ಪಾವಕನುರಿ ಹೊಕ್ಕಿ ಪೊರಟಳ್ ರನ್ನದಾ ೧೧

ಸೃಷ್ಟೀಶ ಭೀಷ್ಮಕನ ತನುಜೆ ರುಕ್ಮಿಣೀದೇವಿ
ಕೃಷ್ಣಮೂರ್ತಿಗೆ ಓಲೆ ಬರೆದಾಳು ರನ್ನದಾ
ಕೃಷ್ಣಮೂರ್ತಿಗೆ ಓಲೆ ಬರೆದು ಒಲಿಸಿಕೊಂಡು
ಪಟ್ಟದರಸಿಯಾಗಿ ಬಾಳಿದಳು ರನ್ನದಾ ೧೨

ಮಾನಿನೀ ಮಣಿ ಪದ್ಮಾವತಿಯು ಜಲಕೇಳಿಗೈದು
ಶ್ರೀನಿವಾಸನ ಕಂಡು ಸ್ಮರಿಸೀದಳ್ ರನ್ನದಾ

ಶ್ರೀನಿವಾಸನ ಕಂಡು ಸ್ಮರಿಸಿ ಕಲ್ಯಾಣವೆಸಗಿ
ತಾನೆ ವಿಷ್ಣುವ ಪೂಜೆಗೈದಳ್ ರನ್ನದಾ ೧೩

ನವರಾತ್ರಿ ದಿನದಲಿ ನವದುರ್ಗಿ ರೂಪಿನಲಿ
ನವಗಂಧ ಕುಂಕುಮ ಚಂದನ ಪುಷ್ಪಗಳಿಂದ
ನವವಿಧ ಪೂಜೆ ಕೊಂಬಳ್ ರನ್ನದಾ ೧೪

ಮಾರಿ ಪೂಜೆಯ ರಕ್ತ ಹಾರಕ್ಕೆ ಮನಗೊಂಬಾ
ಕ್ರೂರಗಣಗಳೊಡ ಸೇರಿದಳ್ ರನ್ನದಾ
ಕ್ರೂರಗಣಗಳೊಡ ಸೇರಿ ಧಾರುಣಿಯೊಳು
ಚಾರುವರ್ಣ ಪೂಜೆ ಕೈಕೊಂಬಳ್ ರನ್ನದಾ ೧೫

ಸರ್ವಮಂಗಲ ಮಾತೆ ಸರ್ವಸಜ್ಜನ ಪ್ರೀತೆ
ಸರ್ವ ಆಭರಣ ಭರಿತೇಯು ರನ್ನದಾ
ಸರ್ವ ಆಭರಣ ಭರಿತೇಯು ಪೀತಾಂಬರ
ನೆರಿಹಿಡಿದುಟ್ಟು ರನ್ನದಾ ೧೬

ಹದಿನೆಂಟು ಪೌರಾಣದಿ ಮೆರೆವ ಈ ದೇವಿ ಚರಿತೆ
ಹದಿನೆಂಟು ಪದವಾಗಿ ನುಡಿಸೀದಳ್ ರನ್ನದಾ
ಹದಿನೆಂಟು ಪದದಿ ತಪ್ಪಿರಲು ತಿದ್ಯೋದಿದವರ
ವಿಧವಿಧ ಮನದ ಬಯಕೆ ಒದಗುವಾದೆ ರನ್ನದಾ ೧೭

ಮಂದಗಮನೆ ಧರಣಿ ಭಾರ ತಗ್ಗಿಸಿ ಬಂದು
ನಿಂದಾಳು ವಿಷ್ಣು ವಕ್ಷಸ್ಥಲದಲಿ ರನ್ನದಾ
ನಿಂದಿರ್ದ ವಿಷ್ಣು ವಕ್ಷಸ್ಥಲದ ರಮೆಗೆ ಗೋ
ವಿಂದದಾಸನು ಸರಿಸಿ ನಮಿಸೂವೆ ರನ್ನದಾ ೧೮

## ೩೯೨

ಜಯ ಶಂಕರ ಪರಮೇಶ ದಿಗಂಬರ
ಜಯ ಗಿರಿಜೆಯ ವರ । ಸಾಂಬ ನಮೋ ಪ

ಜಯ ಕಿಂಕರ ಪರಿಪಾಲ ಪರಾತ್ಪರ
ಜಯ ಭವಭಯಹರ ಶಂಭು ನಮೋ ೧

ವಾಸವ ಸುತ ಫಣಿಭೂಷಣ ನತಜನ-
ಕ್ಲೇಶನಾಶ ಜಗದೀಶ ನಮೋ ।
ಕೇಶವ ಹಿತ ಭೂತೇಶ ಜಯತು ಕೈ-
ಲಾಸ ವಾಸ ಅಘನಾಶ ನಮೋ ೨

ದಂಡಧರನ ಶಿರಖಂಡನ ಶಶಿಧರ
ರುಂಡಮಾಲ ಪ್ರಚಂಡ ನಮೋ ।
ಖಂಡ ಪರಶು ಬ್ರಹ್ಮಾಂಡದೊಡೆಯ ಗೋ-
ವಿಂದ ವಿನುತ ಚಂಡೇಶ ನಮೋ ೩

## ३೯३

ವನದೊಳಗತ್ರಿಯ ಮುನಿವರ ತರುಣಿ
ಘನ ಪತಿವ್ರತೆಯೆಂದೆನಿಸಿದಳಾ ರಮಣಿ
ಮನವ ಶೋಧಿಸೆ ಬಂದ ತ್ರಿಮೂರ್ತಿಗಳ ಕಂಡು
ಅನಸೂಯೆ ತನಯರೆಂದೆನಿಸಿ ತೂಗಿದಳೂ ಜೋ ಜೋ ೧

ಜೋಜೋ ಸತ್ಯಲೋಕೇಶ ಬ್ರಹ್ಮನಿಗೆ
ಜೋಜೋ ಹತ್ತಾವತಾರ ವಿಷ್ಣುವಿಗೆ
ಜೋಜೋ ಮೃತ್ಯುಂಜಯ ಮೂರ್ತಿ ಶಂಕರಗೆ
ಜೋ ಎಂದು ಸ್ತನಪಾನ ಗೈಸಿ ತೂಗಿದಳೂ ಜೋಜೋ ೨

ಸೃಷ್ಟಿಕರ್ತನೆ ಜೋಜೋ ಹಂಸವಾಹನನೆ
ಸೃಷ್ಟಿಪಾಲನೆ ಗರುಡವಾಹನನೆ
ನಿಟಿಲನೇತ್ರನೆ ಜೋಜೋ ನಂದಿವಾಹನನೆಂದು
ರನ್ನ ತೊಟ್ಟಿಲೊಳಿಟ್ಟು ಪಾಡಿ ತೂಗಿದಳೂ ಜೋಜೋ ೩

ವಾರಿಜಾಸನೆ ಜೋಜೋ ವಾಣೀಶ ಜೋಜೋ
ಸಾರಸಾಕ್ಷನೆ ಜೋಜೋ ಸಿರಿಯರಸ ಜೋಜೋ
ಮಾರವೈರಿಯೆ ಜೋಜೋ ಗೌರೀಶ ಜೋಜೋ
ಮೂರು ಮೂರ್ತಿಯೆ ಜೋಯೆಂದೆನುತ
ತೂಗಿದಳೂ ಜೋಜೋ ೬

ಸುಂದರ ಮೂರ್ತಿ ಚತುರಾನನ ಜೋಜೋ
ಸಿಂಧುಪುರೀಶ ಗೋವಿಂದನೆ ಜೋಜೋ
ಚಂದಿರಧರ ನೀಲ ಕಂಧರ ಜೋಯೆಂದು
ಚಂದದಿಂದನುಸೂಯೆ ಪಾಡಿ ತೂಗಿದಳೂ ಜೋಜೋ ೫

## ೩೯೪

ಮಂಗಲ ಮೂರುತಿಗೇ ನಮೋ ನಮೋ ಹರೀ
ಮಂಗಲ ಚರಿತಗೆ ನಮೋ ನಮೋ ಪ

ರಂಗಾ ಕೃಪಾಂಗಾ ಶ್ರೀರಂಗಾ ನರಸಿಂಹಗೆ
ಅಂಗಾ ಶೃಂಗಾರನಿಗೆ ನಮೋ ನಮೋ ಅ.ಪ

ಶೇಷಶಯನ ವಿಧೀಶ ಸುರಾರ್ಚಿತ
ಕೇಶವ ತ್ರೈಜಗದೀಶ ಜಲಜನಾಭ
ದಾಸರ ಸಾಸಿರ ದೋಷ ವಿನಾಶನ
ಶ್ರೀಶ ಸಂದೇಶಗೆ ನಮೋ ನಮೋ ೧

ಮಾರಜನಕ ದೈತ್ಯಾರಿ ಚಕ್ರಾಂಕಿತ
ಸಾರಸಾಕ್ಷ ಯತಿ ವಾರವಂದಿತ ಚರಣ
ಹಾರಾ ಹೀರಾವಳಿ ಕೇಯೂರವ ಧರಿಸಿದ
ಧೀರ ಉದಾರಿಗೆ ನಮೋ ನಮೋ ೨

ಮಂದರೋದ್ಧರ ಭವಬಂಧ ವಿಮೋಚನ
ಇಂದಿರೆಪತಿ ಮಂದಾಕಿನಿಪಿತ ದೇವಾ

ಸಿಂಧುಮಂದಿರದಲಿ ನಿಂದ ಗೋವಿಂದಗೆ
ನಂದನ ಕಂದಗೆ ನಮೋ ನಮೋ ೩

## ೩೯೫

ಮಂಗಳ ಜಯಜಯತೂ ಜಯತು ಜಯ
ಮಂಗಳ ಶುಭ ಜಯತು ಪ

ವಾರಿಜೋದ್ಭವನಿಗೆ ವಾಣಿ ಶಾರದೆಗೆ
ನಾರಾಯಣನಿಗೆ ನಾರಿ ಲಕ್ಷುಮೀಗೆ
ಮಾರ ಸಂಹಾರನಿಗೆ ಪಾರ್ವತೀ ದೇವಿಗೆ
ನಾರೀ ರನ್ನೆಯರ್ ಹೂವಿನಾರತಿ ಬೆಳಗೆ ೧

ಸೃಷ್ಟಿಕರ್ತಗೆ ಸರ್ವ ಅಕ್ಷರದಾಯಿನಿಗೆ
ರಕ್ಷಣ ಮೂರ್ತಿಗೆ ಅಕ್ಷಯಾಶ್ರಿತೆಗೆ
ಶಿಕ್ಷೆ ರಕ್ಷಃ ದೇವಿ ಸೃಷ್ಟಿ ಸಂಹಾರಗೆ
ಅಕ್ಷತೆಯಿಟ್ಟು ಸ್ತ್ರೀಯರ್ ಆರತಿ ಬೆಳಗೆ ೨

ವರಹಂಸ ಗಮನಗೆ ಮಯೂರ ವಾಹನಗೆ
ಗರುಡ ಗಮನಗೆ ಮದಕರಿ ಧ್ವಜಿಗೆ
ವೃಷಭವಾಹನನಿಗೆ ವರಸಿಂಹ ವಾಹಿನಿಗೆ
ಸರಸಿಜಾಕ್ಷಿಯರ್ ಮುತ್ತಿನಾರತಿ ಬೆಳಗೆ ೩

ಕಮಂಡಲುಧಾರಿಗೆ ವರವೀಣಾಪಾಣಿಗೆ
ಕೌಮೋದಕಿಧರಗೆ ಕಮಲ ಸುಮಕರಗೆ
ಡಮರು ತ್ರಿಶೂಲಧರಗೆ ತೋಮರ ಪಾಣಿಗೆ
ಕೋಮಲಾಂಗಿಯರ್ ಕುಂಕುಮದಾರತಿ ಬೆಳಗೆ ೪

ಅಂಬುಜಾಸನಗೆ ಶುಂಭ ಸಂಹಾರಳಿಗೆ
ಕುಂಭ ಕರ್ಣಾಂತಕಗೆ ಮಹಿಷಮರ್ದಿನಿಗೆ

ಸಂಭ್ರಮ ತ್ರಿಪುರಾರಿ ಚಂಡ ಮುಂಡಾರ್ದಿನಿಗೆ
ಅಂಬುಜಾಕ್ಷಿಯರ್ ಸಂಭ್ರಮದಾರತಿ ಬೆಳಗೆ ೫

ಚಂದದಿ ಬ್ರಹ್ಮಗೆ ಚಂದಿರವದನೆಗೆ
ಸುಂದರ ಮೂರ್ತಿಗೆ ಇಂದಿರೆಗೆ
ಅಂದದ ಶಿವನಿಗೆ ಅರವಿಂದನೇತ್ರೆಗೆ
ವಂದಿಸಿ ಗೋವಿಂದದಾಸನಾರತಿ ಬೆಳಗೆ ೬

## ೩೯೬

ಮಂಗಲಂ ಜಯ ಮಂಗಲಂ
ನಿತ್ಯ ಶುಭ ಮಂಗಲಂ ಜಯಮಂಗಲಂ ಪ

ಶ್ರೀ ಗಣಾನಾಥನಿಗೆ ತ್ರಿಜಗವಂದೀತನಿಗೆ
ಶ್ರೀ ಗೌರೀವರ ತನಯ ಸುರವಂದ್ಯಗೇ
ಶ್ರೀ ಗಂಗಾಧರನ ಸುಕುಮಾರ ಶೃಂಗಾರನಿಗೆ
ಶ್ರೀ ಗುರು ಶಿರಿಚರಣವಂದ್ಯ ಸುಂದರಗೇ ೧

ಮೂಷೀಕ ವಾಹನಗೆ ಮಾಯಾಸುರಾಂತಕಗೆ
ದಾಸ ಜನರನು ಪೊರೆವ ಜಗದೀಶಗೆ
ಆಶೆ ವಿನಾಶನಿಗೆ ದೋಷ ನಿವಾರಣಗೆ
ಪಾಶ ಅಂಕುಶಧಾರಿ ಸರ್ವೇಶಗೆ ೨

ಶ್ಯಾಮಲಾ ಕಣ್ ಹೇರಂಭ ಹೇಮಾಚರಣ
ಕೋಮಲಾ ಕರಚರಣ ಚತುರ್ಭುಜನಿಗೆ
ಸಾಮಜಾವದನನಿಗೆ ವಾಮನಾ ರೂಪನಿಗೆ
ಕಾಮಿತಾರ್ಥವನೀವ ಕಲುಷಾರಿಗೆ ೩

ವಿಘ್ನ ವಿದೂರನಿಗೆ ವಿಘ್ನ ಪರಿಹಾರನಿಗೆ
ವಿಘ್ನ ವಾರಿಧಿಗನಲನಂತೆ ಮೆರೆದವಗೇ

ವಿಘ್ನಪರ್ವತ ಪವಿಗೆ ವಿಘ್ನತಮಹರ ರವಿಗೆ
ವಿಘ್ನ ಮೇಘಕೆ ವಾಯು ವಿಘ್ನೇಶಗೆ ೪

ಉರಕೆ ಉರಗನ ಸುತ್ತಿ ಧರೆಯೊಳಗೆ ಮೆರೆವವಗೆ
ಕರದಿ ಮೋದಕ ಹಸ್ತ ಏಕದಂತನಿಗೆ
ಸ್ಮರನ ತಾಪ ವಿದೂರ ರತ್ನಾಂಬರಧರಗೆ
ಭರದಿ ಗೋವಿಂದನಾ ದಾಸನೊಂದ್ಯನಿಗೆ ೫

## ३೯೭

ಮಂಗಲಂ ಜಯ ಮಂಗಲಂ
ಮಂಗಲಂ ಶುಭ ಮಂಗಲಂ ಪ

ನೀರೊಳು ಮುಳುಮುಳುಗ್ಯಾಡಿದಗೇ
ಘೋರ ತಮವ ಹತ ಮಾಡಿದಗೆ
ಮೂರೊಂದು ವೇದವ ತಂದವಗೆ
ಧೀರಗೆ ಮತ್ಸ್ಯವತಾರನಿಗೆ ೧

ಸುರರ ಮೊರೆಯ ಕೇಳಿ ಬಂದವಗೇ
ಗಿರಿಯ ಬೆನ್ನಲಿ ಪೊತ್ತು ನಿಂದವಗೆ
ತ್ವರಿತದಿ ಶರಧಿಯ ಮಥಿಸಿದಗೆ
ಕರುಣಾಕರನಿಗೆ ಕೂರ್ಮನಿಗೆ ೨

ಕೆರಳುತ ಕೋರೆಯ ಮಸೆದವಗೆ
ಗುರುಗುರಿಸುತ ಧುರವೆಸೆದವಗೆ
ದುರುಳ ಹೇಮಾಕ್ಷನ ಮಥಿಸಿದಗೆ
ಧರಣಿಯ ತಂದಗೆ ವರಹನಿಗೆ ३

ತರಳನು ಸ್ಮರಿಸಲು ಬಂದವಗೆ
ಧುರದೊಳು ದೈತ್ಯನ ಕೊಂದವಗೆ

ಕರುಳನು ಕಂಠದಿ ಧರಿಸಿದಗೆ
ಸುರನರವಂದ್ಯಗೆ ನರಸಿಂಹಗೆ ೪

ಬಲಿಯೊಳು ದಾನವ ಬೇಡಿದಗೆ
ನೆಲವನು ಈರಡಿ ಮಾಡಿದಗೆ
ಛಲದಲಿ ಬಲಿಯನು ಮೆಟ್ಟಿದಗೆ
ಚಲುವಗೆ ವಾಮನ ಮೂರುತಿಗೆ ೫

ಹಸ್ತದಿ ಕೊಡಲಿಯ ಪಿಡಿದವಗೆ
ಪೃಥ್ವೀಪಾಲರ ಶಿರ ಕಡಿದವಗೆ
ಧಾತ್ರಿಯ ವಿಪ್ರರಿಗಿತ್ತವಗೇ ಕ್ಷತ್ರಿ
ವಿರೋಧಿಗೆ ಭಾರ್ಗವಗೆ ೬

ದಶರಥ ನಂದನನೆನಿಸಿದಗೆ ಶಶಿಮುಖಿ
ಸೀತೆಯ ವರಿಸಿದಗೆ
ದಶಶಿರ ದೈತ್ಯನ ಮಥಿಸಿದಗೆ
ಕುಸುಮಾಕ್ಷನಿಗೆ ಶ್ರೀರಾಮನಿಗೆ ೭

ಮುರಲೀಧರನೆಂದೆನಿಸಿದಗೆ
ದುರುಳ ಕಂಸನ ಮಥಿಸಿದಗೆ
ತರಳೆ ರುಕ್ಮಿಣಿಯನು ತಂದವಗೆ
ಮುರಹರ ಮೂರ್ತಿಗೆ ಕೃಷ್ಣನಿಗೆ ೮

ತ್ರಿಪುರರ ಸತಿಯರ ಒಲಿಸಿದಗೆ
ತ್ರಿಪುರರ ಶಿವನಿಂಗೆಲಿಸಿದಗೆ
ಕಪಟದ ಮೋಹನ ರೂಪನಿಗೆ
ನಿಪುಣಗೆ ಬೌದ್ಧಾವತಾರನಿಗೆ ೯

ಹಸ್ತದಿ ಕತ್ತಿಯ ಪಿಡಿದವಗೆ
ಉತ್ತುಮ ಹಯವೇರಿ ನಡೆದವಗೆ

ಮಾತುಳ ಶಿರವನು ಕಡಿದವಗೆ
ಉತ್ತುಮ ಮೂರ್ತಿಗೆ ಕಲ್ಕ್ಯನಿಗೆ ೧೦

ಇಂದಿರೆಯರಸಗೆ ಸುಂದರಗೆ ಸಿಂಧು
ಮಂದಿರದಲಿ ನಿಂದವಗೆ
ಮಂದಸ್ಮಿತ ಮುಖ ಚಂದ್ರನಿಗೆ
ಗೋ**ವಿಂದ**ಗೆ ದಾಸನ ವಂದ್ಯನಿಗೆ ೧೧

## ೩೯೮

ಹರಿನಾಮವೆ ಜಯ ಮಂಗಳವು ।
ಶ್ರೀ ಹರಿನಾಮವೆ ಶುಭ ಮಂಗಳವು ॥
ಹರಿ ನಾಮವ ದಿನ ಸ್ಮರಿಸುವ ಸುಜನರ–
ದುರಿತ ರಾಶಿಗಳೆಲ್ಲ ತರಿಯುವ ಮಾಧವ ೧

ಉರಗಶಯನ ವರ ಪರಮೇಶನ ಸಖ ।
ಗರುಡ ಗಮನ ಸಿರಿಯರಸನೆಂದೆನಿಸಿದ ಹರಿ ೨

ನಾರದಮುನಿ ಹರಿನಾರಾಯಣನೆಂದು ।
ಭಾರಿ ಭಜನೆ ಗೈವ । ಮಾರಜನಕನೆಂಬ ಹರಿ ೩

ಅಜಾಮಿಳನಂತ್ಯದಿ । ಭುಜಗಶಯನನೆಂದು ।
ಭಜಿಸಲು ಸಲಹಿದ ವಿಜಯ ಸಾರಥಿಯಾದ ಹರಿ ೪

ಸರಸಿಯೊಳ್ ಮೊರೆಯಿಟ್ಟು । ಮರುಗುವ ಗಜವನು ।
ಗರುಡನ ಹೆಗಲೇರಿ ಪಿಡಿದು ರಕ್ಷಿಸಿದಂಥ ೫

ಶೇಷಗಿರಿಯ ಮೇಲೆ ವಾಸವಾಗಿರುತಿಹ ।
ದಾಸ ಜನರ ಪ್ರಿಯ । ದೋಷರಹಿತನೆಂಬ ೬

ವೃಂದಾವನದೊಳಾ । ನಂದದೊಳಾಡುವ ।
ಸುಂದರ ಕರ ಗೋವಿಂದನೆಂದಿನಿಸಿದ ಹರಿ ೭

## ೩೯೯

### ವೆಂಕಣ್ಣಕವಿಯ ಹಾಡುಗಳು

ಕುಣಿದಾಡೋ ಕೃಷ್ಣ ಕುಣಿದಾಡೋ ।
ಒಮ್ಮೆ । ಕುಣಿದಾಡೋ ಪ

ಮುದ್ದು ಮೊಗದೊಲವ ಮುಗುಳ್ನಗೆದೋರಿ ।
ತದ್ಧಿಮಿಕೆಂದು ಮುರಾರಿ ೧

ಹಸ್ತಾಂಗುಲಿ ಅಭಿನಯಗಳ ಪಟ್ಟು
ನ್ಯಸ್ತದಿ ಹೆಜ್ಜೆಯನಿಟ್ಟು ೨

ಗೆಜ್ಜೆ ನೂಪುರ ಘಲ್ಘಲ್ ಘಲರವದಿಂದ
ತದ್ದಣಿಕೆಂದು ಮುಕುಂದ ೩

ಸ್ಥಾಯಿ ಮೃದಂಗ ತಾಳದಿ ಶ್ರುತಿಗೂಡಿ ಮಾ–
ಗಾಯಿ ಕುಂಡಲಗಳೋಲಾಡಿ ೪

ಸರಸ ಸಾಹಿತ್ಯ ಸಂ । ಗೀತ ಪ್ರೇಮಾ
ಗುರುವೆಂಕಟ ಗುಣ ಧಾಮ ೫

## ೪೦೦

ಅಲ್ಲಲ್ಲಲ್ಲಾ । ಸುಖವಿ । ನ್ನಿ ಲ್ಲಿ ಲ್ಲಿ ಲ್ಲಿ ಲ್ಲಾ ಪ

ಸುಳ್ಳು ಸಂಸಾರ ಮಾಯಾ ಭ್ರಾಂತಿಯ ಮನ ।
ಪೊಳ್ಳು ಇದೆಂದು ಬಲ್ಲವರಿಗೆ ನಿಜ ಅ.ಪ

ರೊಕ್ಕವು ತೀರಿದ ಕಾಲಕೆ ತನ್ನನು
ಮಕ್ಕಳು ಮರಿಗಳು ಲೆಕ್ಕಕ್ಕೆ ತರುವರು ೧

ಅಂಗನೆ ಮಕ್ಕಳು ಆಪ್ತರು ಬಂಧುಜ–
ನಂಗಳು ಒಬ್ಬರು ಸಂಗಡ ಬರುವವರ್ ೨

ವಲ್ಲಭ ಶ್ರೀಗುರು ಲಕ್ಷ್ಮೀವೆಂಕಟ–
ನಲ್ಲದೆ ಬೇರೊಬ್ಬರು ಬಂಧುಗಳಾರ್ ೩

## ೪೦೧

### ವಾಸುದೇವ ಪ್ರಭುಗಳ ರಚನೆಗಳು

ಬಾರೋ ಬೇಗ ಬಾರೋ ರಾಮ
ಬಾರೋ ನೀ ಮೊಗದೋರೋ ರಾಮ ಪ

ಅಗಣಿತ ಮಹಿಮ ರಘುಕುಲೋದ್ಧಾಮ
ನಿಗಮಾಗಮ ಪೂಜಿತ ಶ್ರೀರಾಮ ೧

ಕುಜನ ಕುಠಾರೀ । ಸುಜನೋದ್ಧಾರೀ ।
ಭಜಕ ನಿಕರ ದುರಿತಾರಿ ರಾಮ ೨

ಪಂಕಜನಯನ ವೆಂಕಟರಮಣ ।
ಸಂಕಟ ಹರಣ ರಮಾಪತಿ ಚರಣ ೩

## ೪೦೨

ಶ್ರೀಹರೀ ಕೃಷ್ಣಮುರಾರಿ ಕೇಶವ ಚಕ್ರಧಾರಿ ಪ

ಸುಂದರ ಸುಮನಸ ವೃಂದ ಮುನಿಮಾನಸ
ನಂದಗೋವರ್ಧನೋದ್ಧಾರೀ ೧

ಹಂಸವಾಹನಸ್ತುತ್ಯ ಕಂಸಮಥನ ನಿತ್ಯ
ಹಂಸ ಡಿಂಬಿಕ ಚಾಣೂರ ವೈರೀ ೨

ವಾತ ವತ್ಸ ಪ್ರಲಂಬ ಖ್ಯಾತ ಬಕಧೇನುಕ
ಪೂತನಿ ಪ್ರಾಣಾಪಹಾರಿ ೩

ಕಂತುಪಿತ ಶ್ರೀಲಕ್ಷ್ಮೀಕಾಂತ ಕೃಷ್ಣ ಶ್ರೀಮದ-
ನಂತ ಸುದರ್ಶನಧಾರೀ ೪

ಸಾರಸಭವಪಿತ ಶ್ರೀ ರಮಾಧವ ಪಾರ್ಥ
ಸಾರಥಿ ದುರಿತೋತ್ತಾರೀ ೫

## ೪೦೩

### ಶೇಷಪ್ರಭುಗಳ ರಚನೆಗಳು

ಪಾಲಿಸು ಶ್ರೀಹರಿಯೇ । ಸದ್ಗುಣ ।
ಶೀಲ ಭಾಗ್ಯನಿಧಿಯೇ । ಶ್ರೀ
ಲಲಾಮ ಶೇಷಾಚಲಾಧೀಶ ಶ್ರೀಲೋಲ
ಬಾಲಭಾಸ್ಕರ ಸಂಕಾಶನೆ ಪ

ಕಂಡವರಿಗೆರಗಿ ದೈನ್ಯವ ।
ಗೊಂಡೆ ಖಿನ್ನನಾಗಿ ಭಂಡನಾಗಿ
ಬಳಲಿಸಿ ಬಹು ಕಾಯವ ದಂಡಿಸಿದೆನು
ರಕ್ಷಿಸೋ ಶ್ರೀಹರಿಯೇ ೧

ಯಾರಿಗೆ ದೂರುವೆನು ಭಕ್ತೋ ।
ದ್ಧಾರನಲ್ಲವೆ ನೀನು ।
ಘೋರದುರಿತ ದಾರಿದ್ರ್ಯದ ವ್ಯಥೆಯ ಇ-
ನ್ನಾರಿಗೊರೆವೆ ಅದನ್ನಾರು ಕಾವರೈ ೨

ಏನಪರಾಧವ । ಗೈದೆ ನಾ –
ನೇನು ಪಾಪಾತುಮನೋ ।
ಈಸಪರಾಧವನೆಣಿಸದೆ । ಎನ್ನಯ ।
ಕ್ಲೇಶವ ಪರಿಹರಿಸೋ ದಯಾನಿಧೇ ೩

ಕರುಣಾ ಸಾಗರನೇ । ತ್ರಿಜಗ
ದ್ಧರಿತ ಕೃಪಾಕರನೆ ಪರಮಾತ್ಮ
ದಯಾ ಪರ ಪುರುಷೋತ್ತಮ ।
ಪರಂಜ್ಯೋತಿ ಪರಬ್ರಹ್ಮಸ್ವರೂಪನೆ ೪

ರಂಗನಾಥನೆನ್ನ । ಕಾಯೋ ವಿ- ।
ಹಂಗರಾಜ ಗಮನ । ಗಂಗಾ
ಜನಕ ಮಾಧವ ಕರುಣಾ-।
ಪಾಂಗರಂಗ ಮಂಗಲಾಂಗ ರಕ್ಷಿಸು ೫

## ೪೦೪

ಹರಿಯೇ ಎನ್ನ । ಮರೆತಿರುವರೆ ಇದು ಸರಿಯೇ ಪಾಲಿಸು
ನೀ ದೊರೆಯೇ । ತರಳತನದಿ ನಾ ಮರೆತೆನೆಂದು ನೀ
ಜರೆದು ಬಿಟ್ಟರೆ ಮುಂದೆ ಪೊರೆವರಾರ್ಯ ಶ್ರೀ ಪ

ಒಡೆಯ ನೀನಾಗಿ ಸಲಹುವುದೀಗ ನಿನ್ನಯ
ಪದ ಜಡಜಕೆರಗುವೆ ನಾ ಬೇಗ
ಕಡು ದಾರಿದ್ರ್ಯದ ಕಡಲೊಳು ಮುಳುಗಿದೆ
ತಡಿಯ ಕಾಣಿಸೋ ಜಗದೊಡೆಯ ದಯದಿ ಶ್ರೀ ೧

ತರಳ ಧ್ರುವರಾಜನಿಗೊಲಿದೆ । ಅಂಬರೀಷನ ।
ಭರದಿ ಚಕ್ರದಿಂದಲಿ ಕಾಯ್ದ ।
ತರಳೆಯ ಸಭೆಯಲ್ಲಿ ದುರುಳ ಬಾಧಿಸುತಿರೆ
ಭರದೊಳಕ್ಷಯವಿತ್ತುದ್ಧರಿಸಲಿಲ್ಲವೆ ಶ್ರೀ ೨

ಕಷ್ಟಪಟ್ಟೆ ಭವದೊಳಾನು । ಎನ್ನ । ಮನದ-
ಭೀಷ್ಟ ಪಾಲಿಸೋ ದೇವ ನೀನು
ಸೃಷ್ಟಿಗೊಡೆಯ ದಯಾವೃಷ್ಟಿಯಿಂದಲಿ ಮನ-
ಸಿಟ್ಟು ಸಲಹೊ ಪರಮೇಷ್ಠಿ ಜನಕ ಶ್ರೀ ೩

ತಂದೆ ನೀನಲ್ಲವೆ ಜಗದೀಶ ಪಾಲಿಸು ನಿನ್ನ
ಕಂದನಲ್ಲವೆ ಸರ್ವೇಶ
ಹಿಂದ ಮುಂದನಾನೊಂದನರಿಯೆ ದಯ
ದಿಂದ ಕಾಯೋ ಮುಚುಕುಂದವರದ ಶ್ರೀ ೪

ಮಂಗಲ ಪುರವಾಸ ಶ್ರೀ ವೆಂಕಟೇಶ ।
ಅಂಗಜ ಜನಕ ರಮೇಶ ।
ಮಂಗಲಾಂಗ ನಿನ್ನಂಘ್ರಿ ಸೇವಕರ ಸು–
ಸಂಗವ ಪಾಲಿಸು ಗಂಗಾಜನಕ ಶ್ರೀ ೫

## ೪೦೫

### ಕವಿ ರಾಮಕೃಷ್ಣರ ಹಾಡುಗಳು

ಅಭಯ ಬೇಡೋ ಸುಮನ ಸುಂದರ ಶ್ರೀ ಹರಿಯ
ಪ್ರಿಯ । ಅಭಯ ಬೇಡೋ ಸುಮನ ಸುಂದರ ಪ

ಅಭಯ ಬೇಡೋ ಪ್ರಿಯ ರಮಾವಿಭು
ಜಗನ್ನಿವಾಸನೊಡನೆ ಉಭಯ ಸುಖವ
ನೀವ ಚೆಲ್ವ ಅಂಬುಜನೇತ್ರ ಸೊಬಗನೆಂದು ಅ.ಪ

ಘೋರ ಭವದ ಪಾಶ ಮುನ್ನ
ತೋರಣಿಸಿದೆ ಕೊರಳೊಳು
ಚಾರು ನವಸುಭಕ್ತಿ ಮುಖ ವಿ–
ಸ್ತಾರದಿಂದ ಮಾರ ಪಿತನ ೧

ನೊಂದು ವಾರಣೇಂದ್ರ ತನ್ನ
ದಂದುಗದಲಿ ನುತಿಸಲು ।
ಬಂದು ರಕ್ಷಿಸಿದ ಮುಕುಂದ
ಸಿಂಧುಶಾಯಿಯೆಂದು ಹರಿಯ ೨

ವಿಗಡ ದೈತ್ಯ ತರಳನನ್ನು
ಅಗಣಿತದಲಿ ಬಾಧಿಸೆ
ಮಗುವು ಕರೆಯೆ ಬಂದು ಕಾಯ್ದ
ನಿಗಮನುತ ಪರಾಕು ಎನುತ ೩

ಕಿಂಕರೌಘ ಸುಪ್ರಸನ್ನ ಸಂಕಟೌಘಧ್ವಂಸನ
ವೆಂಕಟೇಶವರದ ಒಳಲಂಕೆಯಧಿಪ
ಗುರು ನೃಹರಿಯ ೪

## ೪೦೬

ಮಂಗಳಾಂಗ ಮನ್ನಿಸು ತಪ್ಪನು
ರಂಗನಾಥ ರಕ್ಷಿಸೈ ತಂದೆ ಯೆನ್ನನು ಪ

ಮಮತೆಯಿಲ್ಲದ ಮಡದಿ ಯಾತಕೆ । ರಂಗನಾಥ
ಸುಮತಿಯಿಲ್ಲದ ಸುತನು ಯಾತಕೆ
ಕುಮತಿಯುತರ ಸಂಗವೇಕೆ
ಸಮತೆಯಿಲ್ಲದ ಬಂಧವೇಕೆ ।
ಅಮಿತ ನಿನ್ನ ಚರಣ ಕಮಲ
ರವಿತನಾಗದ ಮನುಜನೇಕೆ ೧

ಕಣ್ಣು ಇಲ್ಲದ ರೂಪು ಯಾಕೆ । ರಂಗನಾಥ
ಹೊನ್ನು ಇಲ್ಲದ ಬಾಳು ಯಾತಕೆ ।
ಮುನ್ನ ಮೂಗು ಇಲ್ಲದ ಮೊಗವು
ಮಣ್ಣು ತಿಂದು ಹೋದರೇನು
ಅಣ್ಣ ನಿನ್ನ ಭಕುತಿ ಇಲ್ಲದ
ಸಣ್ಣ ಮನುಜ ಸತ್ತರೇನು ೨

ದಾನವಿಲ್ಲದ ಧನವಿದೇತಕೆ । ರಂಗನಾಥ
ಜ್ಞಾನವಿಲ್ಲದ ವಿದ್ಯೆ ಯಾತಕೆ

ಆಣೆಯಿಲ್ಲದ ಅರಸು ತಾನು
ಅಡವಿಪಾಲು ಆದರೇನು
ದೀನಬಂಧು ನಿನ್ನ ನಂಬದ
ಮಾನಹೀನ ಮನುಜನೇಕೆ ೩

ಮಕ್ಕಳಿಲ್ಲದ ಮನೆಯು ಯಾತಕೆ । ರಂಗನಾಥ
ಅಕ್ಕರಿಲ್ಲದ ಊಟ ಯಾತಕೆ
ಸೊಕ್ಕಿ ನಡೆವ ಬಂಟನೇಕೆ
ಮಿಕ್ಕು ಮೀರ್ವ ಶಿಷ್ಯನೇಕೆ
ರಕ್ಕಸಾರಿ ನಿನ್ನ ಸೇರದ
ಸೊಕ್ಕು ನರ ಜನ್ಮವೇಕೆ ? ೪

ಸಾಕು ಸಾಕು ದೀನನಾದೆನು ರಂಗನಾಥ
ಸಾಕು ಸಾಕೈ ಬೇಗ ಯೆನ್ನನು
ಕಾಕು ಮಾಡಿಯೆ ವೈಕುಂಠ
ನಗರದೊಡೆಯ ನಾರಸಿಂಹ
ಏಕಭಕ್ತಿಯಿಂದಲಿರುವೆ
ಏಕೆ ಕೈಯ ಬಿಡುವೆ ದೊರೆಯೆ ೫

## ೪೦೭

## ವಾಸುದೇವ ಶ್ಯಾನುಭಾಗರ ಕೃತಿಗಳು

ತಾಳಲೆಂತೈ ಹರಿಯೆ । ಭವಬಾಧೆ
ರಮಾಕಾಂತ ಅನಂತ ಗುಣವಂತ ರಕ್ಷಿಸು ಪ

ವರಘೋರ ದುರಿತ ಪಾರಾವಾರ
ದಯಾಸಾರ ಉದಾರ ಎನ್ನ ಪಾರಗಾಣಿಸು ೧

ಕಾವರಾರೈ ನೀನುಳಿದಿಹ ಪರದಿ
ಕೃಪೆದೋರೈ ನೀ ಬಾರೈ ನಿನ್ನೊಳು ಸೇರೈಸಿ ಮನ ೨

ವಾಸುದೇವ ರಮೇಶ ದೀನಬಂಧು
ಜಗಜ್ಜೀವ ಕೇಶವ ಎನ್ನದಾವ ಪಾಲಿಸು ೩

## ೪೦೮

ಬಪ್ಪ ಶುಭಾಶುಭ ತಪ್ಪದಾದರೆ ನಿನ್ನಿಂ–
ದಪ್ಪುದೇನಪ್ಪ ಹರಿ ಪ

ಬಂದಾಪತ್ತ ನೀಗುತ್ತಾ । ನಂದ ಪ್ರಾಪ್ತಿಸಲು ಗೋ–
ವಿಂದ ನಿನ್ನ ಸೇರ್ವುದು ೧

ಮುದ್ದಿನ ವರಲಿಪಿ ತಿದ್ದಿ ಕಾಯ್ದುದರಿಂದ
ಹೊದ್ದಿ ನಾನಿದ್ದೆ ನಿನ್ನ ೨

ಕೈಯ ಮುಗಿವೆ ಜಗ । ದಯ್ಯ ದಮ್ಮಯ್ಯ
ಪಾಲಿಸೈಯ ನೀ ಸೈಯೆನಿಸಿ ೩

ಪ್ರಾರಬ್ಧ ಫಲ ಮೀರ । ಬಾರದೆಂಬರಿವಿಂ–
ದೂರ ನೀ ತಪ್ಪಿಸುವೆ ೪

ವಾಸುದೇವ ರಮೇಶ । ದೋಷ ಕ್ಷಮಿಸಿ ತವ
ದಾಸನ ರಕ್ಷಿಸಯ್ಯ ೫

## ೪೦೯

**ಬಂಗ್ಲೆ ನಾರಾಯಣ ಕಾಮತರ ರಚನೆಗಳು**

ಪಾಲಿಸೈ ತ್ರಿಶೂಲಿಯೆ ಮುದದಿಂ । ಕಲಿಕಾಲ ರುದ್ರನೆ
ಪಾಲಿಸೈ ತ್ರಿಶೂಲಿಯೆ ಮುದದಿಂ ಪ

ವಂದಿಸುವೆನಯ್ಯ ಇಂದುಧರ ದಯಾ
ಸಿಂಧು ಎನ್ನಯ ಬಂಧು ಬಿಡಿಸೈಯ ।
ಅಂದು ಪಾಲ ಮುದ ಚಂದ ನಿಂತ ಧರೀ ಆಪ –
ದ್ಧಂಧುವೆ ನೀ ಬೇಗ ಬಂದೀಗಲೆನ್ನನು ೧

ವ್ಯೋಮಕೇಶ ನಿನ್ನ ನಾಮವನನು ದಿನ
ನಾ ಮರೆಯೆ ಗುಣ ಧಾಮ ಮುನಿಜನ
ಸ್ತೋಮವಂದ್ಯ ಬಿಲ್ಲ ಪ್ರೇಮಿಯೆ ರಿಪು ಕುಲ
ಭೀಮ ವಿರೂಪಾಕ್ಷ ಕಾಮಾರಿ ನಂಬಿದೆ ೨

ಕ್ಲೇಶಹರ ಜಗದೀಶನು ತುರಗ
ನಾಶ ಭೂಷಗಣೇಶ ಪನ್ನಗ
ಶೇಷಶಾಯಿ ವೆಂಕಟೇಶವಿಠಲ ಪ್ರಿಯರೀ
ದಾಸರ ಕಾಯ್ವೆ ಕೈಲಾಸ ನಿವಾಸನೆ ೩

## ೪೧೦

ಕಂಡುದನು ಪೇಳ್ವೆ ಬ್ರಹ್ಮಾಂಡ ನಾಯಕನೆ ।
ಕೊಂಡೆಯವಿದಲ್ಲ ಗ್ರಹಕುಂಡಲವ ಶೋಧಿಸುತ ಪ

ಜಲಜಾಕ್ಷ ನಿನ್ನ ನಾಮಕೆ ಶ್ರವಣ ತಾರೆ ಕೋ–
ಮಲ ಮಕರ ಲಗ್ನ ರಾಶಿಯು ಮಕರವು ।
ಸತಿ ಲಗ್ನದಲ್ಲಿರ್ಪ ಜಲ ತಾರಕೇಂದು ದಶೆ
ಯಲಿ ನಿನಗೆ ಜಲದೊಳಾವಾಸವಾಯಿತು ಹರಿಯೆ ೧

ಮನುಮಥನ ತಾತ ಕೇಳಿನಸುತನು ನಾಲ್ಕನೆಯ
ಮನೆಯೊಳಿರುವನು ಲಗ್ನಕಧಿಪನೆನಿಸಿ
ಮನದಿ ಯೋಚಿಸಲಿಕಾ ಶನಿದಶೆಯೊಳಾ ಕುಧರ
ವನು ಪೊತ್ತು ದಣಿದೆನೀವ ನಿಧಿಯೊಳು ಹರಿಯೆ ೨

ಮಂಗಳನೆ ಸುಖಕಧಿಪ ಮಂಗಳನು ಸಿಂಗರದಿ
ಸಿಂಗರಾಶಿಯೊಳು ತಾ ಕಂಗೊಳಿಸುತ

ತುಂಗವಿಕ್ರಮನವನೆ ಸಂಘಟಿಸಿದನು ವನದಿ
ಹಿಂಗದೆ ಬೇರು ಮೆಲುವಂಗವನು ಹರಿಯೆ ೩

ವಾರಿಜಾಸನ ಪಿತನೆ ಕ್ರೂರಕ್ಷೇತ್ರದಿ ರಾಹು
ಸಾರಿರ್ಪ ರಾಶಿ ವೃಶ್ಚಿಕವೆನಿಸಲು ।
ಕಾರುಣಿಕನವನ ದಶೆಯಾರಂಭದಲಿ ನಿನಗೆ
ಘೋರ ರೂಪವ ತಾಳಲಾಯ್ತು ನರಹರಿಯೆ ೪

ಮಂದರೋದ್ಧರ ಕೇಳು ಚಂದಿರನ ರಾಶಿಗಾ
ನಂದದಧಿಪತಿ ಸೂರ್ಯನಂದನನು ತಾ
ನಿಂದು ಮೇಷದೊಳತ್ರಿಕಂದನ ನಿರೀಕ್ಷಿಸಲು
ಬಂದುದೈ ಭಿಕ್ಷೆಯದರಿಂದ ನಿನಗೆಲೆ ಹರಿಯೆ ೫

ಅಂಬುಜಾನನ ಕೇಳು ಒಂಭತ್ತರಧಿಪ ಶಶಿ–
ಸಂಭವನು ಪಾಪದಿಂ ತುಂಬಿರ್ಪನು ।
ಸಂಭವಿಸಲವನ ದಶೆಯಿಂದ ನೀ ಕ್ಷತ್ರಿಯ ಕ–
ದಂಬ ಮರ್ದಿಸಿ ಧರ್ಮಮಂ ಬಿಟ್ಟೆ ಹರಿಯೆ ೬

ಸಿರಿಯರಸ ಕೇಳಿನ್ನು ದುರಿತ ಸ್ಥಾನಾಧಿಪತಿ
ಗುರುವೇಳನೆಯ ಮನೆಯೊಳಿರುವನದರಿಂ ।
ಹಿರಿಯರುಪದೇಶದಿಂದಿರದೆ ಭಾರ್ಯೆಯನಗಲಿ
ಚರಿಸಿದೆಯರಣ್ಯದೊಳಗಿರುತ ನೀ ಹರಿಯೆ ೭

ಘೋರಪಾಪವಿನಾಶ ನಾರಿರಾಶಿಯ ನವಮ–
ಕಾ ರವಿಯು ಸಾರಿ ನಿಂದಿರ್ಪನದರಿಂ ।
ಚೋರವ್ಯಾಪಾರ ಪರನಾರಿಯರ ಕೂಡೆ ವ್ಯಭಿ–
ಚಾರ ನಿನಗಾಯಿತು ರಮಾರಮಣ ಹರಿಯೇ ೮

ಜಾತಮೃತಿರಹಿತ ತವ ಜಾತಕದಿ ತೋರುತಿಹ
ಕೇತು ಕೈವಲ್ಯ ತಾರಕನಾಥನು ।

ಪೂತ ಬುದ್ಧಿಸ್ಥಾನ ವಾದನದರಿಂಲಿಂ
ಭೂತಲದಿ ಸ್ಥಾಪಿಸಿದೆ ನೂತನ ಮತವ ಹರಿಯೇ ೯

ಪಾರವರ್ಜಿತ ಕವಿಯು ಸಾರಿರ್ದ ದಶಮದೊಳ್–
ಗಾರವ ನೆನೆಯುಂಟು ಧೀರನೆನಿಸಿ ।
ಭೂರಿಮ್ಲೇಂಛರನು ಸಂಹಾರ ಗೈಯುತ ತೇಜಿ
ಯೇರಿ ಮೆರೆಯುತ್ತಿರುವ ನಾರಾಯಣ ಹರಿಯೆ ೧೦

## ೪೧೧

### ಬೋಳಾರ ವಾಸುದೇವಯ್ಯನ ಹಾಡುಗಳು

ನಂಬಿದೆ ನಾ ತವಪದವ । ಯೆನ ।
ಗಿಂಬನು ಪಾಲಿಸು ದೇವ ಪ

ಅಂಬುಧಿಶಯನ ಚಿದಂಬರ ಮುರಹರ
ಬೆಂಬಿಡದೆನ್ನ ವಿಶ್ವಂಭರ ಸಲಹೈ ೧

ಬಳಲಿದೆನ್ನೈ ಭವದಿಂದ । ಮಿಗೆ ತೊಳಲಿದೇ
ಬೇಸರದಿಂದ ಕಳವಳಿಸುವೆನೀ ಕೊಳಕು ಸಂಸಾರದಿ
ನಳಿನಾಕ್ಷನೆ ಸುಖಗೊಳಿಸಿ ಪೊರೆವುದೈ ೨

ದುಷ್ಟರ ಸಂಗದಿ ಕೂಡಿ ಸಂ । ಕಷ್ಟ ವಿದ್ಯೆ ದಯಮಾಡಿ
ಸೃಷ್ಟಿಗೊಡೆಯನೆನ್ನಿಷ್ಟವ ನೀಯುತ
ಶಿಷ್ಟನ ಕಾಯೋ ವಸಿಷ್ಠವಿನುತ ಪದ ೩

ದಣಿದೆನು ದಾರಿದ್ರ್ಯದಿಂದ । ನೆರ । ವಣಿಗೆಯ
ಗೈವರಿಲ್ಲ ಗುಣನಿಧಿ ತವ ದಯವೊಣಗಿದ ಮಾತ್ರಕೆ
ತೃಣ ಸಮವೆನ್ನನಾರೆಣಿಕೆಯ ಗೈವರು ೪

ದೇವನೆ ನಿನ್ನಡಿಯುಗದ ಸ । ದ್ಭಾವನೆಯ –
ನೀಯೊ ಸದಾ । ಕಾವವ ನೀನೆಂದೋವಿನು –
ತಿನುವೆನು ಶ್ರೀವಾಸುದೇವ ದಾಮೋದರ ವಿಠಲ ೫

## ೪೧೨

ಶ್ರೀಮುರವೈರಿಣಿ ಮಂಗಲಂ ಜಯ ಮಂಗಲಂ ಪ

ವೇದ ವ್ಯಾಪಕನಿಗೆ । ಸಾಧುಗಳೊಡೆಯಗೆ ।
ರಾಧೆಯೊಲ್ಲಭ ಜಗದಾದಿ ನಾಯಕನಿಗೆ ೧

ಸಾರಸನಾಭಗೆ ನಾರದ ವಿನುತಗೆ
ಮಾರಕಜನಕನಿಗೆ ಶ್ರೀರಾಮಚಂದ್ರಗೆ ೨

ಸಾಮಜವರದಗೆ ಕಾಮಿತದಾತಗೆ
ಭೀಮ ವಿಕ್ರಮಿ ರಂಗ ಧಾಮ ಮುಕುಂದಗೆ ೩

ಭಾವಿಕೋದ್ಧಾರಗೆ ದೇವಕೀತನಯಗೆ
ಶ್ರೀವಾಸುದೇವ ದಾಮೋದರ ಶೌರಿಗೆ ೪

# ಪಲಿಮಾರು ಮಠದ ಶ್ರೀರಘುವರ್ಯರ ಕೃತಿಗಳು

## ೪೧೩

ರುಗ್ಮಭೂಷಣ ಪಾಲಿಸೆನ್ನನು
ತಿಗ್ಮಕಿರಣ ಶತಪ್ರಭಾ
ರುಗ್ಮಿಣೀ ಪವನಾರ್ಚಸತ್ವದ
ಯುಗ್ಮ ಉಡುಪಿನ ಕೃಷ್ಣನೇ ೧

ದ್ವಾರಕಾಪುರದಲ್ಲಿ ದೇವಕಿ
ಸರಸ ಬಾಲಕ ಲೀಲೆಯಾ
ತೋರು ಎನುತಲಿ ದಧಿಯ ಮಥಿಸಲು
ಕರುಣಿ ಬಾಲ್ಯವ ತೋರಿದೆ ೨

ತೊಡೆಯನೇರಿ ಸ್ತನ್ಯಪಾನವ
ಮಾಡಿ ಮೋದವ ತಾಯಿಗೆ

ಕೊಡುತ ಕಡೆಗೋಲ್ ನೇಣು ಸಹಿತಲಿ
ಪ್ರೌಢ ನೀನಪಹರಿಸಿದೆ ೩

ಮೊಸರು ಭಾಂಡವನೊಡೆದು ಬೆಣ್ಣೆಯ
ನಸುನಗುತಲೀ ಭಕ್ಷಿಸೀ
ಶೇಷಶಯನನೆ ನೀನು ಕುಣಿಯೆ ಸಂ–
ತೋಷಪಟ್ಟಳು ದೇವಕಿ ೪

ದೂರದಿಂದಲೆ ಕಂಡು ರುಕ್ಮಿಣಿ
ಹರುಷದಲಿ ಶಿಶುರೂಪವ
ತರಳರೂಪವ ನೀನು ಪುನರಪಿ
ತೋರೆಲೊ ಸತಿ ನುಡಿದಳು ೫

ವಿತತ ವೈಭವ ಈ ಪರಿಯಲಿ
ಪ್ರತಿಮೆಯನ್ನೇ ಮಾಡಿಸಿ
ಸತತ ಪೂಜೆಯ ಮಾಳ್ಪರೀ ಅತಿ
ಪ್ರೀತಿಯಿಂದಲಿ ಕೊಡು ಎನಗೆ ೬

ರಮಣಿ ಈ ಪರಿ ಪೇಳೆ ವಿಶ್ವ–
ಕರ್ಮನಿಂದಾ ಮಾಡಿಸಿ
ಕಮಲನಾಭನು ಇತ್ತು(ದ್ದು) ಅದರಲಿ
ವಿಮಲ ಪೂಜೆಯ ಕೊಂಡನು ೭

ವೀರ ನಿನ್ನವತಾರ ಕಾರ್ಯವು
ಪರಿಸಮಾಪ್ತವು ಆಗಲು
ಸುರಪನಂದನು ತತ್ಪ್ರತಿಮೆಯ
ಶರಧಿ ತೀರದಲಿತ್ತನು ೮

ನಾವೆಯಲ್ಲಿ ಗೋಪಿಚಂದನ
ಸಂವೃತಾರ್ಚೆಯು ಬರುತಿರೆ
ನಾವೆಯೊಡೆಯಲು ಮಧ್ವಮುನಿಪನು
ಭಾವದಿಂದಲೆ ತಂದನು ೯

ಅವರರೊಡೆಯ ಶ್ರೀ ಮರುತಪತಿ
ತತ್ ಪ್ರತಿಷ್ಠೆಯ ವಿರಚಿಸಿ
ಕುಮುದ ಬಂಧು ಕ್ಷೇತ್ರದಲಿ ನಿ–
ನ್ನಮಿತ ಪೂಜೆಯ ಮಾಡಿದ ೧೦

ನನ್ನ ಹಿರಿಯರ ಪುಣ್ಯ ಫಲಿಸಲು
ನಿನ್ನ ಪೂಜೆಯ ಮಾಡುತ
ಧನ್ಯನಾದೆನು ಮುಕ್ತಿ ಕರಗತ
ಎನ್ನಗಾಯಿತು ಕೃಷ್ಣನೇ ೧೧

ಮಧ್ವಪೂಜಿತ ರಕ್ಷಿಸೆನ್ನನು
ಸಾಧ್ವಸೋಝ್ಝಿತ ಸದ್ಗುಣ
ಸಾಧ್ವಲಂಕೃತ ವೇಷ ಮುಕ್ತಿ ಪ–
ದಾಬ್ಜನೇ ರಘುತಿಲಕನೇ ೧೨

## ೪೧೪

ಕೇಳು ಕೇಳೆಲೆ ಗೋಪಿ ನಿನ್ನಯ ಬಾಲಕೃಷ್ಣನ ಚೇಷ್ಟೆಯ ।
ತಾಳಾಲಾರೆನು ನೀನು ಕರೆದು ಪೇಳದಿದ್ದರೆ ಬುದ್ಧಿಯ ೧

ಮನೆಮನೆಗಳ ಪೊಕ್ಕು ಪೊಕ್ಕು ಪಾನ ಮಾಡುವ ಬಾಲನು ।
ಮಾನಿನೀಯರು ಕಂಡು ತಡೆದರೆ ಸ್ತನವ ಪಿಡಿದು ಮುದ್ದಿಪ ೨

ಬೆಳಕು ಇಲ್ಲದ ಎಡೆಯಲ್ಲಿದ್ದರು ಹೊಳೆವನೇ ಸುರಧೀಪತಿ ।
ಉಳಿಯದಂತೆ ಕದ್ದು ಮೆದ್ದವ ಬಾಲನೆಂಬುದು ಉಚಿತವೆ ೩

ಪರರ ನಷ್ಟವು ಲಾಭವೀತಗೆ ಪರರ ಪೀಡೆಯು ಲೀಲೆಯು ।
ಪರರು ಈ ಪರಿ ತನ್ನನೆಂದರೆ ಪರಮ ಹರುಷವ ಮಾಡುವ ೪

ಎಲ್ಲರಂತವನಲ್ಲ ದೇವನು ಒಲ್ಲದೇ ಮನಚಿತ್ತವು ।
ನಲ್ಲ ಈ ಮಣಿ ಏನು ಮಹಿಮೆಯ ಬಲ್ಲನೇ ರಘುತಿಲಕನೇ ೫

ಮೃಗರಾಜ – ಸಿಂಹದಂತಿರುವವ
ಕುಶಿಕಸುತ – ವಿಶ್ವಾಮಿತ್ರ
ಕುಡುಮ – ಧರ್ಮಸ್ಥಳದ ಹಿಂದಿನ ಹೆಸರು
ಕುಲ್ಲ – ಕಿರಿದಾದ
ಕೃತ್ತಿವಾಸ – ಶಿವ
ಕೇಕಿ – ನವಿಲು
ಕೊರ್ಲಾಣೆ – ಕೊರಳಾಣೆಗೂ
ಕೊಳುಗುಳ – ಯುದ್ಧ
ಕೋಲುಗಾರ – ತೆರಿಗೆ ವಸೂಲು ಮಾಡುವವ
ಕೋಳಿವೃಕ್ಷ – ಗೋಳಿಮರ(?)
ಕ್ರೌಂಚವಾಹನ – ಕೊಕ್ಕರೆ
ಖಂಡಪರಶು – ಶಿವ
ಗಾರುಗೆಡಿಸು – ತೊಂದರೆ ಕೊಡು
ಚಾರುವರ್ಣ – ದ್ವಿಜ
ಚಿಪ್ಪಾರ – ಒಂದು ಚಮಚದಷ್ಟು
ಜಂಬುಕ – ನರಿ
ಜಡಜಲೋಚನ – ಕಮಲದಂತೆ ಕಣ್ಣುಳ್ಳವ (ಕೃಷ್ಣ)
ಜಲ್ಮ, ಜಲುಮ – ಜನ್ಮ
ಜಿಡ್ಡಿ ವರ್ಲಿಗೆ – ಜಿಡ್ಡಿನ ಒರಳು
ಜಿಲೆ – ಗೆದ್ದವಳು
ಜಿಷ್ಣುಸಾರಥಿ – ಪಾರ್ಥಸಾರಥಿ
ತಕ್ಕೈಸು – ಆಲಂಗಿಸು
ತಣ್ಣದಿರ – ಚಂದ್ರ
ತರಣಿ ನಂದನ – ಸೂರ್ಯನ ಮಗ, ಸುಗ್ರೀವ
ತರಣಿಸೂತ – ಅರುಣ
ತಿಂತಿಣಿ – ಸಮುದಾಯ
ತಿಮುರು – ಲೇಪಿಸು

ತಿರ್ಣವರ್ತ – ತೃಣಾವರ್ತನೆಂಬ ರಾಕ್ಷಸ
ತ್ರಿಣಯ ಗಣಸೇವ – ಶಿವ , ಗಣಗಳಿಂದ ಸೇವಿತ
ತುಡುಬು – ಒಂದು ವಾದ್ಯದ ಹೆಸರು
ದಂಗೈನಿ – ಕರೆಯಿರಿ (ಗ್ರಾಮ್ಯ ಪದ)
ದಂದಶೂಕ – ಶೇಷ, ಹಾವು
ದಣಿದರ – ಸೋತವರ
ದಾನವರೆರೆಯ – ರಾಕ್ಷಸರ ರಾಜ
ದಿವೌಕಸರು – ದೇವತೆಗಳು
ಧಾತ್ರಿ – ಭೂಮಿ
ಧೃತಿ – ಧೈರ್ಯ
ನಗವೈರಿ – ಪರ್ವತಗಳ ವೈರಿ, ಇಂದ್ರ
ನಸಿನದಿಂ – ಲಘುವಾಗಿ
ನಾಗೇಂದ್ರಾನನ – ಗಣೇಶನ
ನಿಲುಹು – ನಿಲವು, ಮಡಕೆ ಇಡುವ ಹಗ್ಗ
ನೀಲಗ್ರೀವ – ನವಿಲು
ನೀಲಲೋಹಿತ – ಶಿವ
ನೆಗಳೆ – ಮೊಸಳೆ
ನೇಜಿ – ಭತ್ತ, ರಾಗಿ, ಮುಂ, ಸಸಿ
ಪಂಚೀಕರಣ – ಪಂಚಭೂತಗಳ ಹೊಂದಿಕೆ
ಪರದರುಣರೆ – ಒಂದು ಕೊಂಡಾಟದ ನುಡಿ
ಪಲ್ಲ – ಹಲ್ಲು
ಪಾಶಾಂಕುಶಧರ – ಗಣೇಶ

ಪಿಸಿತಾಸಿ - ಮಾಂಸ ತಿನ್ನುವವಳು, ರಾಕ್ಷಸಿ
ಪುನ್ನಾಗ ಫಲ - ಜಾಂಬೂ ಫಲ
ಪುಲ್ಲಂಬ - ಹೂಬಾಣದವ, ಮನ್ಮಥ
ಪ್ರಣವ ರೂಪ - ಓಂಕಾರ ರೂಪದ ದೇವರು
ಫಕ್ತ - ಕೇವಲ (ಮರಾಠಿ ಶಬ್ದ)
ಬರು - ಬರಿದೆ
ಬಾಹುಲೇಯ - ಬಹುಲಾ ಎಂಬ ನಕ್ಷತ್ರ ರಕ್ಷಿತ, ಸ್ಕಂದ
ಬಿಸಜಸಖ - ಸೂರ್ಯ
ಬಿಲೇಶಯ - ಸರ್ಪ
ಬೆಟ್ಟದಣುಗೆ - ಪಾರ್ವತಿ
ಬೆಳುತಿರೆ - ಪರಿಶುದ್ಧ ಭೂಮಿ
ಬೈಸಬೇಕು - ಬಯಸಬೇಕು
ಭಣಿತೆ - ಮಾತು, ವಕ್ರೋಕ್ತಿ
ಭವವಾರ್ಧಿ - ಸಂಸಾರ ಸಾಗರ
ಭಾವಜನಯ್ಯ - ಮನ್ಮಥಪಿತ, ಶ್ರೀಹರಿ
ಭಾವಜಾರಿ - ಶಿವ
ಭುಕ್ತಿಪುರ - ಉಂಡಾರ (ಗ್ರಾಮ)
ಮಂದರಿ - ಮಂದಿರದ ಅಪಶಬ್ದ
ಮಂದವಾರ - ಶನಿವಾರ
ಮಂದಿವಾಳ - ನಾಡಾಡಿ
ಮಡು - ಆಳವಾದ ನೀರಿನ ಜಾಗ
ಮಣಿದರ - ಮಣಿದವರ
ಮತ್ತೀಮರ - ಅರ್ಜುನವೃಕ್ಷ
ಮಧುಪುರ - ಮಧೂರು (ಕಾಸರಗೋಡು ಜಿಲ್ಲೆ)

ಮರಾಳ - ಹಂಸ
ಮಳ್ಗಿಸು - ಮುಳುಗಿಸು
ಮಾಣದೆ - ಬಿಡದೆ
ಮಾರ್ಗಣ - ಬಾಣ
ಮೀನಾಂಕಪಿತ - ಮನ್ಮಥ
ಮುಂಚ ಕಲಾಪ - ನಾಯಕರ ಗುಂಪು
ಮುನಿನೀತ - ಮುನಿಸಮುದಾಯ
ಮುಪ್ಪುರಹರ - ತ್ರಿಪುರಾರಾಂತಕ ವಿಷ್ಣು
ಮುಲ್ಲಿ - ಮೂತಿ
ಮುಷ್ಟಿಕಾರಿ - ಮುಷ್ಟಿಕನ ವೈರಿ ಕೃಷ್ಣ
ಮೆಲ್ಲಂಕ್ಯಾಂಡ್ರ - ಮೆಲ್ಲನೆ ಕೇಳಿದರೆ (ಗ್ರಾಮ್ಯ)
ರಂಗನಸುತ - ಬ್ರಹ್ಮ
ರಸೆಯೊಳಗೆ - ಭೂಮಿಯಲ್ಲಿ
ರಾಕೇಂದುಧರ - ಶಿವ
ರೂಢಿ - ಭೂಮಿ
ವಕ್ರಸವಾರಿ - ವಕ್ರವಾಗಿ ಹರಿಯುವ ನದಿ
ವಹಿಲ - ತ್ವರೆ
ವಿಡಧ್ವರ -
ವಿಷ್ಟಿಸಿ - ಹೊಲಸು ಮಾಡಿ
ವೈಸಬೇಕು - ವಹಿಸಬೇಕು
ವ್ಯಾಳ - ಹಾವು
ವ್ಯಾಳಗರತ್ಮ - ಹಾವಿಗೆ ಗರುಡನಾದವ
ವ್ರಾತ - ಸಮೂಹ
ಶಂಬರಾರಿ - ಮನ್ಮಥ
ಶತಧೃತಿ - ಬ್ರಹ್ಮ
ಶರಗು - ಸೆರಗು
ಶರಜ - ಹುಲ್ಲಿನ ಪೊದೆಯಲ್ಲಿ ಜನಿಸಿದವ, ಸ್ಕಂದ

ಶ್ರೀಕೃಷ್ಣಾನುಜೆ – ಪಾರ್ವತಿ
ಶ್ರೀಯರ – ಲಕ್ಷ್ಮೀದೇವಿಯರ
ಶುಂಡಲಾಪುರ – ಹಸ್ತಿನಾಪುರ
ಸ್ತಾಮುಜ – ವದನ – ಗಣೇಶ
ಸಾಯ್ಸಬೇಕು – ಸಾಯಿಸಬೇಕು
ಸಿಂಧುಗಂಭೀರ – ಸಮುದ್ರದಂತೆ ಗಂಭೀರನಾದವ
ಸಿಷ್ಟಿ – ಸೃಷ್ಟಿ
ಸುತ್ರಾಮ – ಇಂದ್ರ
ಸುಮನಸವಾರ – ದೇವತಾ ಸಮೂಹ
ಸುರತಟನೀತಾತ – ಗಂಗಾನದಿಯ ತಂದೆ
ಸುರತಟನೀಧರ – ಶಿವ
ಸುರಮಾತೆ – ಅದಿತಿ
ಸುರವಾರ – ದೇವತೆಗಳ ಸಮೂಹ
ಸೂಕರ – ಹಂದಿ
ಹಂಗರೀಸು – ಹಾಗಾದರೆ ಇಷ್ಟು (ಗ್ರಾಮ್ಯ)
ಹಣ್ಣಿ – ಸಜ್ಜುಗೊಳಿಸಿ
ಹವ – ಯುದ್ಧ (ಆಹವ)
ಹಸ್ತಿವಾಹನ – ಇಂದ್ರ
ಹಳಿವು – ಸಂಪ್ರದಾಯ
ಹೀಲಿಯ ಕುಂಚ – ನವಿಲುಗರಿ
ಹೈಮವತಿ – ಹಿಮವಂತನ ಪುತ್ರಿ
ಹೈಲು – ನಾಚಿಕೆಗೇಡು
ಹೊಲಬು – ದಾರಿ
ಹೋರಾಲೆ – ಹೋದರೆ ತಾನೇ !

# ಅನುಬಂಧ-೨

## ಟಿಪ್ಪಣಿಗಳು

### ೧

ಈ ಗಣೇಶಸ್ತುತಿಯಲ್ಲಿ 'ಪರಮಾತ್ಮನಿಗೆ ನೀನು ಮರಿಮಗನಿರುವಿ' ಎಂಬ ಮಾತಿದೆ. ವಿಷ್ಣುವಿನ ಮಗ ಬ್ರಹ್ಮ. ಬ್ರಹ್ಮನ ಮಗ ಶಿವ. ಶಿವನ ಮಗ ಗಣೇಶ. ಪರಮಾತ್ಮನಿಗೆ ಗಣೇಶನು ಮರಿಮಗನಾಗುವುದು ಈ ಗುಣಿತದಲ್ಲಿ.

### ೩

ಇದೊಂದು ಸೊಗಸಾದ ಉದಯರಾಗ. ಶ್ರೀ ಹರಿಯನ್ನು ಏಳಿಸಲು ಅವನ ಭಕ್ತರನೇಕರು ಬಂದಿದ್ದಾಗಿ ಊಹಿಸಲಾಗಿದೆ.

'ಭೂಸುರನು ರುಕ್ಮಿಣಿಯ ಪುಟ್ಟ ವಾಲೆಯ ತಂದ'. ರುಕ್ಮಿಣಿಯು ಶ್ರೀ ಕೃಷ್ಣನಿಗೆ ಓಲೆ ಬರೆದು ಓರ್ವ ಬ್ರಾಹ್ಮಣನ ಮುಖಾಂತರ ಕಳುಹಿಸಿದಳು. ಆ ಬ್ರಾಹ್ಮಣನೇ ಮುಂದೆ ಕಲಿಯುಗದಲ್ಲಿ ಶ್ರೀ ವಾದಿರಾಜರಾಗಿ ಜನ್ಮ ತಾಳಿದ ಸಂದರ್ಭ ಇಲ್ಲಿದೆ.

'ಕೋಪದೊಳು ಮುನಿ ಬಂದ'. ಈತ ಭೃಗುಮುನಿ. ಬ್ರಹ್ಮ ಮತ್ತು ಶಿವ ಇವರಲ್ಲಿ ಹೋದಾಗ ಮುನಿಯನ್ನು ಅಲಕ್ಷ್ಯ ಮಾಡಿದ್ದರು. ಅದೇ ಕೋಪದಲ್ಲಿ ವಿಷ್ಣುವಿನ ಬಳಿಗೆ ಬಂದು, ಅವನ ಎದೆಗೆ ಒದ್ದನಂತೆ. ಶ್ರೀಹರಿಯು ಅದರಿಂದ ಸಿಟ್ಟಿಗೇಳದೆ 'ನಿಮಗೆ ತುಂಬ ನೋವಾಯಿತಲ್ಲವೆ ?' ಎಂದು ಉಪಚರಿಸಿದನಂತೆ.

### ೪

ಇದು ಹಯಗ್ರೀವ ದೇವರ ಸ್ತುತಿ. ಸೋದೆಯ ಶ್ರೀವಾದಿರಾಜರು ಪಂಢರಪುರಕ್ಕೆ ಹೋಗಿದ್ದರು. ಅಲ್ಲಿ ಹಯವದನನಿಗೆ ನೈವೇದ್ಯ ಸಮರ್ಪಿಸಲೆಂದು ತಲೆಯ ಮೇಲೆ ಕಡಲೆಯ ಹೂರಣವನ್ನಿಟ್ಟು ಕಾಯ್ದರು. ಆಗ ಕುದುರೆಯ ರೂಪದಲ್ಲಿ ದೇವರು ಬಂದು ಆ ನೈವೇದ್ಯವನ್ನು ಸ್ವೀಕರಿಸಿದರೆಂಬ ಪ್ರತೀತಿ ಇದೆ .

ಮುಂದುವರಿದು ಅಶ್ವವನ್ನೇ ನಿಮಿತ್ತವಾಗಿಟ್ಟುಕೊಂಡು ಭಗವಂತನ ವಿವಿಧ ಲೀಲೆಗಳನ್ನು ವರ್ಣಿಸಲಾಗಿದೆ. ಅವುಗಳಲ್ಲಿ ಮಂದರಗಿರಿಯನ್ನು ಕೃಷ್ಣನು ಎತ್ತಿದುದೂ ಒಂದು.

ಇದೇ ಧರತಿಯ ಪುರಂದರದಾಸರ 'ರಾಗಿಯ ತಂದೀರ್ಯಾ' ಹಾಡನ್ನು ನೆನಪಿಸಿಕೊಳ್ಳಬಹುದು.

೫

'ಮಂಜುಗುಣಿ' ಉ.ಕ.ಜಿಲ್ಲೆಯ ಒಂದು ಊರು. ಅಲ್ಲಿ ವೆಂಕಟೇಶನ ಪ್ರಾಚೀನ ದೇವಸ್ಥಾನವಿದೆ. ದೇವರು ಬೇಟೆಯಾಡಿ ದಣಿದು ಇಲ್ಲಿ ವಿಶ್ರಮಿಸಿದ್ದನೆಂದು ಪ್ರತೀತಿ. ಶ್ರೀವಿಶ್ವೇಂದ್ರ ತೀರ್ಥರು ಇದರ ಪ್ರಸ್ತಾಪ ಮಾಡಿದ್ದರ ಕಾರಣವೆಂದರೆ, ಶ್ರೀ ವಾದಿರಾಜರು ತಮ್ಮ 'ತೀರ್ಥಪ್ರಬಂಧ' ವೆಂಬ ಗ್ರಂಥದಲ್ಲಿ. ಈ ಕ್ಷೇತ್ರದ ಮಹಿಮೆಯನ್ನು ವರ್ಣಿಸಿದ್ದಾರೆ.

೮

ವಿಷ್ಣುವಿನ ದಶಾವತಾರಗಳು : ವ್ಯಾಜನಿಂದಾ ಸ್ತುತಿಯಲ್ಲಿ

೯

ಇಲ್ಲಿಯೂ ವ್ಯಾಜನಿಂದಾ ಸ್ತುತಿಯೇ ಇದೆ. ಶ್ರೀ ಹರಿಯ ಲೀಲೆಗಳೇನೊ ಪ್ರಸ್ತಾಪಗೊಂಡಿವೆ. ಜೊತೆಗೆ ಅವನ ಪೌರಾಣಿಕ ಕಾಲದ ಭಕ್ತರು ಮಾಡಿದ ಅನ್ಯಾಯಗಳನ್ನು (ಉದಾ.ಗೆ ಅಣ್ಣ ಬಲರಾಮನೇ ಕೃಷ್ಣನ ಮೇಲೆ ವಂಚನೆಯ ಆರೋಪ ಹೊರಿಸಿ ತೀರ್ಥ ಯಾತ್ರೆಗೆ ಹೋದದ್ದು) ತಾನು ಮಾಡಿಲ್ಲ – ಎಂಬುದಾಗಿ ಮನವಿ ಮಾಡಿದ್ದಾಗಿದೆ.

೧೦

'ಪಾತಾಳದೊಳಗಿಂದ ಬಂದ ವರ ಚಿಂತಾಮಣಿ ನಾರಸಿಂಹ'

ಈ ಹಾಡಿಗೆ ಶ್ರೀ ವಾದಿರಾಜರ ತೀರ್ಥ ಪ್ರಬಂಧದ ಒಂದೆರಡು ಶ್ಲೋಕಗಳು ಆಕರವಾಗಿ ಪರಿಣಮಿಸಿವೆ. ಚಿಂತಾಮಣಿಯಲ್ಲಿರುವ ನರಸಿಂಹನನ್ನು ವಾದಿರಾಜರು ಈ ರೀತಿ ವರ್ಣಿಸಿದ್ದಾರೆ:

ಭೂನ್ಯಸ್ತವಾಮಾಂಕಗವಾಮಪಾಣಿ
ಮುತ್‌ಕ್ಷಿಪ್ತದಕ್ಷೋರುಗತಾನ್ಯ ಹಸ್ತಮ್ ।
ಚಕ್ರಾಯುಧಂ ವೇತ್ರವತೀತಟಸ್ಥಂ
ಚಿಂತಾಮಣಿಂ ಶ್ರೀ ನರಸಿಂಹಮೀಢೇ ೩೦

ಉದ್ಧೃತ್ಯಪಾತಾಲ ತಲಾತ್ಕರಸ್ಥ ಚಕ್ರೇಣ
ಚಕ್ರಂ ಖಿಲಯೋಗಿನೀನಾಮ್ ।
ನಿಹತ್ಯ ಗೌರೀವರಕಾಮದೋಭೂದುನ್ನ
ಮ್ರಕರ್ಣೋ ನರಸಿಂಹ ಏಷಃ ३.೧

ಅದರಂತೆ, 'ಕೋಲಾವತಾರದ ಹರಿಯ ದಿವ್ಯಲೋಲ ನೇತ್ರದಿ ಬಂದ ನದಿ' ಎಂಬುದಕ್ಕೆ ಇದುವೆ ಆಕರವಾಗಿದೆ :

ವರಾಹನಯನಾನಂದಧಾರಾ ನೇತ್ರಾವತಿ ಸರಿತ್ ।
ಶುಷ್ಕಾಂ ತದ್ಭಕ್ತಿ ಲತಿತಾಂ ಪುಷ್ಣಾತಿ ಕಥಮನ್ಯತಾ ३.೨

(ತೀರ್ಥ ಪ್ರಬಂಧ ಪಶ್ಚಿಮ-)

ವರಾಹಾವತಾರದಲ್ಲಿ ಪರಮಾತ್ಮನ ಕಣ್ಣುಗಳಿಂದ ಉದುರಿದ ಬಾಷ್ಪದಿಂದಾಗಿ ನೇತ್ರಾವತೀ ನದಿ ಆಯಿತೆಂಬ ಪ್ರತೀತಿ ಇದೆ.

೧೪

ವಿಶ್ವೇಂದ್ರತೀರ್ಥರಿಂದ ಸೋದೆ ಮಠದಲ್ಲಿ ನಿತ್ಯ ಪೂಜೆಗೊಳ್ಳುತ್ತಿದ್ದ ಭೂವರಾಹದೇವರ ಸ್ತುತಿ.

೧೬

'ಕೀಟದಿಂದ ರಾಜ್ಯ ಭಾರ' ಶ್ರೀ ವೇದವ್ಯಾಸರು ಕೀಟದ ಮೂಲಕ ಕೌರವನ ರಾಜ್ಯದ ಆಡಳಿತ ನಡೆಸಿದರೆಂದು 'ವೆಂಕಟೇಶ ಮಹಾತ್ಮೆ'ಯಲ್ಲಿ ಹೇಳಲಾಗಿದೆ

೧೭

'ಬಾಲಕ ಕೊಟ್ಟ ನೈವೇದ್ಯ ಸ್ವೀಕರಿಸಿದಿ. ಅದೇ ಬಾಲಕನ ಪಿತ ಬಂದು ಪಾತ್ರವ ಕೇಳಲು ನೀರೊಳಗುಂಟು ಎಂದು ಹೇಳಿದಿ, ಇದು ಶ್ರೀಕೃಷ್ಣನಿಗೆ ಸಂಬಂಧಿಸಿದ ಅದಾವುದೋ ಘಟನೆ. ಇದರ ಪೂರ್ವಾಪರವು ಕೋಳೂರ ಕೊಡಗೂಸಿನಂತೆಯೇ ಇದೆ. ದ.ಕ ಜಿಲ್ಲೆಯ ಉಂಡಾರು ಗ್ರಾಮದಲ್ಲಿರುವ ವಿಷ್ಣು ದೇವರಿಗೆ, ಅರ್ಚಕರಿಲ್ಲದಾಗ, ಚಿಕ್ಕ ಮಗ ನೈವೇದ್ಯವನ್ನು ಅರ್ಪಿಸುತ್ತಾನೆ. ದೇವರು ಅದನ್ನು ಸ್ವೀಕರಿಸುವನು. ಅರ್ಚಕನ ತಂದೆಗೆ ನಂಬಿಕೆಯಾಗದೇ 'ಆ ಪಾತ್ರ ಎಲ್ಲಿ' ಎಂದು ಮಗನನ್ನು ಗದರಿಸುವನು. ಆಗ ಅರ್ಚಕನ ಸ್ವಪ್ನದಲ್ಲಿ ದೇವರು ಕಾಣಿಸಿಕೊಂಡು 'ಆ ಪಾತ್ರ ಜಲದಲ್ಲಿ ಬಿದ್ದಿದೆ, ನೋಡು' ಎಂದು ಹೇಳುತ್ತಾನಂತೆ. ಈ ಘಟನೆಯು ಉಂಡಾರುವಿನ ಸುತ್ತುಮುತ್ತು ಪ್ರಚಲಿತವಿದೆ. ಅದರ ಹಿನ್ನೆಲೆಯಲ್ಲಿಯೇ ದೇವಸ್ಥಾನದಲ್ಲಿ ಪ್ರಸಾದ ಕೊಡುವ ಕ್ರಮವಿದೆ.

೧೯

'ಮಹಿದಾಸ' ನ ಕಥೆ ಭಾಗವತ ಪುರಾಣದಲ್ಲಿ ಬರುತ್ತದೆ. ಇತರಾ – ಎಂಬವಳ ಮಗ, ಮಹಾಜ್ಞಾನಿ. ಅವನನ್ನೂ ವಿಷ್ಣುವಿನ ಅವತಾರವೆಂದು ತಿಳಿಯಲಾಗುತ್ತದೆ. (ಮಹಿದಾಸಾಭಿಧೋ ಜಜ್ಞೇ ಇತರಾಯಾಸ್ತವೋ ಬಲಾತ್).

೨೫

ಶೇಷದೇವರ ಸ್ತುತಿ. ಶೇಷಶಾಯಿಯಾದ ವಿಷ್ಣುವು ಲಕ್ಷ್ಮಿಯೊಂದಿಗೆ ಕೂಡಿದ್ದಾಗ, ಶೇಷನು – ಭಕ್ತಿಭಾವದಿಂದೇ ಆಗಿರಲಿ – ತದೇಕ ಚಿತ್ತದಿಂದ ದೇವರನ್ನು ನೋಡ್ತಾ ಇದ್ದನಂತೆ. ಲಕ್ಷ್ಮಿಗೋ ಲಜ್ಜೆ ಆವರಿಸಿದಾಗ ಅವಳ ತಂದೆ ಕ್ಷೀರಸಾಗರನು ಶೇಷನ ಕಣ್ಣಿನ ಮೇಲೆ ಹಾಲು ಸುರಿಯುವಂತೆ ತೆರೆಯನ್ನು ಬೀಸಿದನಂತೆ.

೨೭

ಈ ಹಾಡಿನ ಪಲ್ಲವಿಗೆ, ವಿಜಯದಾಸರ 'ಕೈಲಾಸವಾಸ ಗೌರೀಶ ಈಶ' ಎಂಬುದು ಸಂವಾದಿಯಾಗಿದೆ.

೩೩

ಇಲ್ಲಿ ವರ್ಣಿತರಾದ ವಿಷ್ಣುತೀರ್ಥರು, ಮಧ್ವಾಚಾರ್ಯರ ಬಂಧುಗಳು, ಸೋದೆ ಮಠಕ್ಕೆ ಆದ್ಯರು.

೩೫

ವಾಗೀಶತೀರ್ಥರು ಶ್ರೀ ವಾದಿರಾಜರ ಗುರುಗಳು

೩೭

'ಭಾವಿ ಸಮೀರ' ಶ್ರೀವಾದಿರಾಜರು ಮುಂದಿನ ಕಲ್ಪದಲ್ಲಿ ವಾಯು (ಸಮೀರ) ಪದವಿಗೆ ಬರುವವರೆಂದು ನಂಬಿಕೆ ಇದೆ.

'ಕುಂಡಿನೇಶ ತನುಜಾತೆ' ಎಂದರೆ ರುಕ್ಮಿಣಿ. ಅವಳು ಶ್ರೀಕೃಷ್ಣನಿಗೆ ಪ್ರೇಮಪತ್ರವನ್ನು ಬ್ರಾಹ್ಮಣನ ಮುಖಾಂತರ ಕಳಿಸಿದ ವಿಷಯ ೩ನೆಯ ಹಾಡಿನಲ್ಲಿ ಬಂದಿದೆ.

೪೨

'ಭೂತರಾಜರು', ಶ್ರೀವಾದಿರಾಜರ ನೆಚ್ಚಿನ ಬಂಟ. ಬದರಿಕಾಶ್ರಮದಿಂದ ತ್ರಿವಿಕ್ರಮದೇವರ ಮೂರ್ತಿಯನ್ನು ಹೊತ್ತು ತಂದು ಸೋದೆಯಲ್ಲಿ ಅದರ ಪ್ರತಿಷ್ಠಾಪನೆಗೆ ಕಾರಣರಾದರು. ಭೂತರಾಜರ ಮೂಲಕವೇ ಶ್ರೀವಾದಿರಾಜರ ಕೃಪೆಗೆ ಪಾತ್ರರಾಗಬೇಕೆನ್ನುವ ನಂಬಿಕೆ ಅಲ್ಲಿಯ ಭಕ್ತರಿಗಿದೆ.

೪೩

ವಿಶ್ವಾಧೀಶರು ಸೋದೆಯ ಮಠದ ೨೯ನೆಯ ಪೀಠಾಧಿಪತಿಗಳು. ಪ್ರಸ್ತುತದ ಶ್ರೀವಿಶ್ವೇಂದ್ರತೀರ್ಥರ ಗುರುಗಳು. ಅವರಿಗೆ ವಿಕ್ಟೋರಿಯಾ ಮಹಾರಾಣಿಯ ಕಾಲದ ಪ್ರಶಸ್ತಿ ಪತ್ರವೊಂದು ದೊರಕಿದ್ದು, ಅದರ ಒಕ್ಕಣಿಕೆ ಇಂತಿದೆ.

"By command of His excellency the Viceroy and Governer - in - council this certificate is presented in the name of the most gracious Majesty Queen Victoria, Empress of India to M.R.Ry. VISHWADHISHA TIRTHA SWAMI AVARGAL of Sode Mutt, son of Lakshminarayanacharya, in recognition of his encouragement of learning.

Ootacamund, 8th September 1897

Chief Secretary to the Government of Madras"

ಇದನ್ನು ಶ್ರೀಗಳವರಿಗೆ ಕಳಿಸುತ್ತ, ಆಗಿನ ದ.ಕ. ಜಿಲ್ಲೆಯ ಕಲೆಕ್ಟರ್ ಎಫ್.ಎ. ನಿಕಲ್ಸನ್ ಈ ರೀತಿ ಬರೆದಿದ್ದಾನೆ :

Sir, I have much pleasure in forwarding herewith a certificate granted by His Excellency the Governer of Madras in commemoration of the sixtieth year of the reign of their most gracious Majesty Queen Empress of India. In sending this certificate I offer you my congratulations in the honour received by you at the hands of Government, and express the hope that you will live long to enjoy the honor".

ಇದೊಂದು ವಿಶಿಷ್ಟವೂ ಅಪೂರ್ವವೂ ಆದ ದಾಖಲೆ. 'ವಿದ್ಯಾಭಿವೃದ್ಧಿ'ಯ ಕಾರ್ಯಕ್ಕಾಗಿ ಎಂದು ಹೇಳಿದ್ದರೂ ಅದರ ಪೂರ್ಣ ವಿವರ ತಿಳಿಯದು. ಸ್ವಾಮಿಗಳಾದವರ ಸದ್ಭಾವ

ದೊರಕಿಸಲು ಹೀಗೆ ಮಾಡಿದ್ದಾದರೆ ಉಡುಪಿ ಮುಂತಾದ ಇತರ ಕಡೆಯ, ಸ್ವಾಮಿಗಳವರಿಗೂ ಈ ರೀತಿ ಪ್ರಶಸ್ತಿ ಪತ್ರ ಕೊಟ್ಟಿರಬಹುದೆ ?

## ೧೪೪ (೧೫೯)

'ಲೋಕೇಶನ ನಾಸಿಕದೊಳಗುದಿಸುತ'. ಬ್ರಹ್ಮನ ಮೂಗಿನಿಂದ ಶ್ವೇತ ವರಾಹ ರೂಪೀ ಪರಮಾತ್ಮ ಜನಿಸಿದನೆಂದು ಭಾಗವತದ ಕತೆ.

## ೧೫೪

'ಉಗುರೆಡೆಯೊಳುದಿಸಿರ್ದ ಭಾಗೀರಥಿ' ವಾಮನಾವತಾರದಲ್ಲಿ ಭಗವಂತನು ತನ್ನ ಪಾದವನ್ನು ಆಕಾಶಕ್ಕೆ ಎತ್ತಿದ. ಅದರ ಉಗುರು ಬ್ರಹ್ಮಾಂಡದ ಕಟಾಹಕ್ಕೆ ತಾಗಿದಾಗ ಗಂಗೆ ಉದ್ಭವಿಸಿದಳೆಂದು ಪೌರಾಣಿಕ ಕತೆ.

## ೧೭೯

'ತನ್ನೊಳವ ಅರಿಯುತೆ' ಎಂಬುದು ವಚನಗಳಲ್ಲಿ ಬರುವ 'ತನ್ನ ತಾನರಿದೊಡೆ ಮತ್ತು ತನ್ನರಿವೆ ಗುರು' ಎಂಬುದಕ್ಕೆ ಸಂವಾದಿಯಾಗಿದೆ.

## ೧೮೭

ಇಲ್ಲಿ ಅಗ್ನಿ(ಜಾತವೇದ), ಯಮ (ಪಿತೃಪತಿ), ನಿರುತಿ (ಯಾತುಧಾನ), ವರುಣ (ಪ್ರಚೇತಸ), ವಾಯು (ಮಾತರಿಶ್ವ) ಮತ್ತು ಕುಬೇರ (ಧನಾಧಿಪ)– ಎಂಬ ಏಳು ಜನ ದಿಕ್ಪಾಲಕರನ್ನು ಕಾಣಿಸಲಾಗಿದೆ.

## ೧೯೪

'ಶಿವನೊಳು ವಿದ್ಯೆಯ ಪಡೆಸುತ'. ವಿಷ್ಣುವಿನ ಅವತಾರಗಳಲ್ಲಿ ಒಂದಾದ ಪರಶುರಾಮನು ಶಿವನಲ್ಲಿ ಧನುರ್ವಿದ್ಯೆಯನ್ನು ಕಲಿತುದಂತೆ.

## ೧೯೮

ಕಾರ್ತಿಕೇಯನ ವಿವಿಧ ಸಾಹಸಗಳನ್ನು ಅವನಿಗೆ ಉದಯ ರಾಗವನ್ನು ಹೇಳುವ ನಿಮಿತ್ತದಿಂದ ಇಲ್ಲಿ ತಂದದ್ದಾಗಿದೆ. (ಕೃತ್ತಿಕಾ ನಕ್ಷತ್ರ ದೇವತೆಯಿಂದ ಸಾಕಲ್ಪಟ್ಟವ – ಕಾರ್ತಿಕೇಯ) ಪದ್ಮಾಸುರನ ಸಂಹಾರವಲ್ಲದೆ, ಶಾಪಗ್ರಸ್ತರಾಗಿದ್ದ ಸುಧರ್ಮ, ಸಾಂಬರನ್ನು ಉದ್ಧರಿಸಿದ್ದಾನೆ – ಸ್ಕಂದ.

ಪಿಸಿತಾಸಿ – ಪಿಶಿತಾಶಿ ; ಎಂದರೆ ಮಾಂಸ ತಿನ್ನುವವಳು. ಅದಿತಿಯು ಅಸಿತ ಮುನಿಯ ಶಾಪದಿಂದ ರಕ್ಕಸಿಯಾಗಿ ಪಿಸಿತಾಸಿಯಾದಳು. ಅವಳನ್ನೂ ಕಾರ್ತಿಕೇಯ ಉದ್ಧರಿಸಿದ್ದಾನೆ.

### ೨೦೧

ಇಲ್ಲಿ ಬಂದಿರುವ ವಿಪ್ರ, ವ್ಯಾಧ ಹಾಗೂ ಮುನಿಗೆ ಮಾಂಸವುಣಿಸಿದ ಪ್ರಸಂಗದ ಹಿನ್ನೆಲೆ ತಿಳಿಯದು.

### ೨೧೬

'ತೂಗಿದಳೆ ಸ್ಕಂದನಾ ಪಾರ್ವತಿದೇವಿ ಆಗಮಜ್ಞನ, ಗುಹನಾ' ಎಂಬೀ ಹಾಡು ಪುರಂದರದಾಸರ 'ತೂಗಿದಳೆಶೋದಾ ಜಗದೋದ್ಧಾರನಾ' ಎಂಬ ಕೃತಿಯನ್ನು ನೆನಪಿಗೆ ತರುತ್ತದೆ.

### ೨೬೦

ಈ ಕೀರ್ತನೆಯಲ್ಲಿಯೂ ಕಾರ್ತಿಕೇಯ ( ಸುಬ್ರಹ್ಮಣ್ಯ) ನ ಶಿಷ್ಟ ರಕ್ಷಣ, ದುಷ್ಟ ಶಿಕ್ಷಣ ಕಾರ್ಯಗಳನ್ನು ತಂದದ್ದಾಗಿದೆ.

### ೨೬೧

ಸ್ಕಂದನು 'ಪಾವಕೋದ್ಭವ'. ಶಿವನ ಉಗ್ರ ರೇತಸ್ಸನ್ನು ಮೊದಲ ಬಾರಿಗೆ ಹೊತ್ತವನು ಅಗ್ನಿ (ಪಾವಕ). ಆದ್ದರಿಂದ ಸ್ಕಂದನು ಅಗ್ನಿಯ ಮಗನೂ ಹೌದು.

### ೨೬೬

'ನಾಗರಾಜ – ನರ ಸುರ ನಮಿತೆ'. ಪಾತಾಳ, ಮರ್ತ್ಯ, ಸ್ವರ್ಗ ಈ ಮೂರೂ ಲೋಕದ ಜನರಿಂದ ವಂದಿತೆ – ಈ ಸರಸ್ವತಿ

### ೨೬೮

ಇಲ್ಲಿ ಬರುವ ಶಾರದೆ (ಸರಸ್ವತಿ) ಇತರ ದೇವತೆಗಳಾದ ಲಕ್ಷ್ಮೀ, ಪಾರ್ವತಿ, ದುರ್ಗ ಇವರುಗಳನ್ನೂ ಅಂತರ್ಗತ ಮಾಡಿಕೊಂಡವಳು. ಈ ಮೂವರೂ ಆದಿಶಕ್ತಿ ಸ್ವರೂಪಿಣಿಯರು.

### ೨೬೯

ವಾರಿಜೋದ್ಭವನ ಪಾದಾರವಿಂದಾರ್ಚಿತೆ. ಪತಿ, ಬ್ರಹ್ಮನ ಪಾದಾರವಿಂದವನ್ನು ಪೂಜಿಸಿದವಳು ಎಂಬ ಅರ್ಥವಿರಬಹುದು.

ಭವಹೇಯ ವಿಹಾರಿಣಿ – ಸಂಹಾರದ ಹೇಯತೆಯನ್ನು ನಿವಾರಿಸುವಾಕೆ.

೨೭೦

'ಎನ್ನ ಪಾಲಿಸೊ ಕರುಣಾಕರಾ ಪನ್ನಗಶಯನ....' ಎಂಬುದು ಪುರಂದರದಾಸರ ಒಂದು ರಚನೆ, ಅದೇ ಧಾಟಿಯಲ್ಲಿ ಈ ಹಾಡು ಹೊಮ್ಮಿದೆ.

೨೭೧

ಬಾಲಕ ಮಾರ್ಕಂಡೇಯನನ್ನು ಕಾಲನಿಂದ ಪಾರುಮಾಡಿದ್ದುದು. ಈ ಋಷಿಕುಮಾರ ಅಲ್ಪಾಯುಷಿ. ಶಿವನನ್ನು ತಪಶ್ಚರ್ಯದಿಂದ ಒಲಿಸಿಕೊಂಡು ಮೃತ್ಯುವನ್ನು ದೂರ ಮಾಡಿದ.

ಭೀಮನು ಕಾರಣಾಂತರದಿಂದ ತನ್ನ ಗದೆಯನ್ನು ಮೇಲಕ್ಕೆಸೆದು, ಅದು ತನ್ನ ತಲೆಯ ಮೇಲೆ ಬಿದ್ದರೂ ಬಾಧೆಯಾಗದಂತೆ ಶಿವಸ್ತುತಿ ಮಾಡಿ ಆ ಗದಾಪ್ರಹಾರದಿಂದ ಪಾರಾದ ಸಂದರ್ಭ, ಎರಡನೆಯದು. ಮೂರನೆಯದಾದ, ಕನ್ನನೆಂಬವನು ಬರೆದೋಲೆಯ ಕಥೆಯ ಮೂಲ ತಿಳಿಯದು.

೨೭೪

ಸೃಷ್ಟಿ ಮೂರಕೆ ನೀನೆ ಅಧ್ಯಕ್ಷ. ಸೃಷ್ಟಿ, ಸ್ಥಿತಿ, ಲಯವೆಂಬೀ ಮೂರು ಸೃಷ್ಟಿಕ್ರಿಯೆಗಳಾಗಿವೆ.

೨೭೭

'ರಾಮನ ರಾಣಿಗೆ ಇರವ ತೋರಿಸಿದವನೇ' ಈ ಕಥಾನಕದ ಮೂಲ ತಿಳಿಯದು.

೨೯೫

'ಏನು ಧನ್ಯಳೋ ಲಕುಮಿ ಎಂಥ ಮಾನ್ಯಳೊ' ಎಂಬುದರ ಅನುಕರಣ ಈ ಹಾಡಿನಲ್ಲಿದೆ – ವಿಚಾರದಲ್ಲಿಯೂ ಸಹ.

೩೧೯

ಇಲ್ಲಿಯೂ ಪುರಂದರದಾಸರ 'ಚಿಂತೆಯಾತಕೊ ಮನುಜ ಭ್ರಾಂತಿಯಾತಕೊ ಕಂತುಪಿತನ' .. ಹಾಡಿನ ಸ್ಪಷ್ಟ ಅನುಕರಣವಿದೆ.

## ೩೨೩

ಇದು ದಕ್ಷಿಣ ಕನ್ನಡದ ವಿಶಿಷ್ಟ ಜಾನಪದ ಧಾಟಿ. ದಂಗೈನಿ– ಕರೆಯಿರಿ. ಇತರ ವಿಶಿಷ್ಟ ಶಬ್ದಗಳಿಗೂ 'ಕಠಿಣ ಶಬ್ದಗಳ ಅರ್ಥ' ಎಂಬಲ್ಲಿ ನೋಡಿರಿ.

## ೩೩೨

೧೮ ಕಾಲುಗಳು ; ೧೦ ತೋಳುಗಳು ; ೨೧ ಕಣ್ಣಾಲಿಗಳು ; ೧೦ ಶಿರಸಂಗಗಳು ಮುಂತಾಗಿ ವರ್ಣಿತವಾದ ಈ ದೈವತವು ಪರಿಚಿತವಿರುವ ಪುರಾಣಗಳಲ್ಲಿ ಇಲ್ಲ. ಸುಲಭವಾಗಿ ಅರ್ಥೈಸಲಾಗದ ಕೀರ್ತನೆಯಿದು.

## ೩೩೮

ಇದೊಂದು ಅಪರೂಪದ ಬಂಧ. ಮೊದಲ ಶಬ್ದ ಯಾ ಅಕ್ಷರವನ್ನು ಪುನರುಚ್ಚರಿಸುವುದು. ಮುಂದಿನ ೪೦೧ ನೆಯ ಹಾಡಿನಲ್ಲಿಯೂ ಇದರ ಬಗೆಯಿದೆ.

## ೩೪೯

ಪುರಂದರದಾಸರ 'ಯಾದವ ನೀ ಬಾ ಯದುಕುಲನಂದನ ಮಾಧವ ಮದುಸೂದನ ಬಾರೊ' ಎಂಬ ಹಾಡಿನ ಪ್ರೇರಣೆ ಇಲ್ಲಿದೆ.

## ೩೬೭

ಇಲ್ಲಿಯ ಉಕ್ತಿ ಸೂಕ್ಷ್ಮತೆಯನ್ನು ಗಮನಿಸಬೇಕು.

'ಉಡುವರಿವೆ ಇಲ್ಲ ಉಂಬರನ್ನಾವು ಇಲ್ಲ ಕಾಸು ಕೈಯೊಳಗಿಲ್ಲ ಆಸೆ ದೇಹದೊಳಿಲ್ಲ ಹಿತದಿಂದಲಿರಲೊಂದು ಮನೆ ತನಗಿಲ್ಲ'

## ೩೮೨

ಕೆಲವೊಂದು ಕೆಲಸಗಳು ನಿಷ್ಪ್ರಯೋಜಕ ಎನ್ನುವ ಧರತಿ ಇಲ್ಲಿದೆ. ಕೆಲವು ಗಾದೆಯ ಮಾತುಗಳಾಗಿ ಪರಿಚಿತ. ಇನ್ನು ಹಲವು ನಾವೀನ್ಯದಿಂದ ಕೂಡಿವೆ :

# ಅನುಬಂಧ–೩

## ಅಂಕಿತನಾಮ ಸೂಚಿ

# ಅನುಬಂಧ–೪

## ಕೆಲವು ಸಂಖ್ಯಾವಿಶಿಷ್ಟ ಪದಗಳು

| | | |
|---|---|---|
| ಅವಸ್ಥಾತ್ರಯ | – | ಜಾಗೃತಿ, ಸ್ವಪ್ನ ಮತ್ತು ಸುಷುಪ್ತಿ |
| ಅಷ್ಟದಿಕ್ಪಾಲಕರು | – | ಇಂದ್ರ, ಅಗ್ನಿ, ಯಮ, ವರುಣ, ನಿರುತಿ, ವಾಯು, ಕುಬೇರ, ಈಶಾನ |
| ಅಷ್ಟಮೂರ್ತಿ (ಶಿವ) | – | ಪಂಚಭೂತಗಳು, ಸೂರ್ಯಚಂದ್ರರು ಮತ್ತು ಋತ್ವಿಜ |
| ಅಷ್ಟವಸುಗಳು | – | ಆವ, ಧ್ರುವ, ಸೋಮ, ಧವ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ |
| ಅಷ್ಟವಿಧ ಪೂಜೆ | – | ಅಕ್ಷತೆ, ಜಲ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ ಇವುಗಳ ಅರ್ಪಣೆ |
| ಅಷ್ಟ ವಿಧ ಭಕ್ತಿ ಕ್ರಿಯೆ | – | ಸ್ಮರಣ, ಕೀರ್ತನ, ವಂದನ, ಪಾದಸೇವನ, ಅರ್ಚನ, ದಾಸ್ಯ, ಸಖ್ಯ, ಆತ್ಮನಿವೇದನ |
| ಅಷ್ಟಾಂಗ ಯೋಗ | – | ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ. |
| ಈಷಣತ್ರಯ | – | ಲೋಕೇಷಣ, ದಾರೇಷಣ, ಪುತ್ರೇಷಣ |
| ಗುಣತ್ರಯ | – | ಸತ್ವ, ರಜಸ್, ತಮಸ್ |
| ತಾಪತ್ರಯ | – | ಆಧ್ಯಾತ್ಮಿಕ, ಆದಿದೈವಿಕ ಮತ್ತು ಆದಿಭೌತಿಕ |
| ತ್ರಿಕರಣ | – | ಕಾಯಾ, ವಾಚಾ, ಮನಸಾ. |
| ಪಂಚತತ್ವ | – | ಭೂತ, ಪೃಥ್ವಿ, ಅಪ್, ತೇಜಸ್, ವಾಯು, ಆಕಾಶ |
| ವೈರಾಗ್ಯತ್ರಯ | – | ಶ್ಮಶಾನವೈರಾಗ್ಯ, ಪ್ರಸೂತವೈರಾಗ್ಯ, ಪುರಾಣವೈರಾಗ್ಯ |

| | |
|---|---|
| ಸಪ್ತ ಋಷಿಗಳು (೧) – | ಅತ್ರಿ, ಅಗಸ್ತ್ಯ, ಕಶ್ಯಪ, ಗೌತಮ, ಭರದ್ವಾಜ, ವಿಶ್ವಾಮಿತ್ರ, ವಸಿಷ್ಠ (ಇನ್ನೊಂದು ಲೆಕ್ಕದಲ್ಲಿ) |
| ಸಪ್ತ ಋಷಿಗಳು (೨) – | ಮರೀಚಿ, ಅತ್ರಿ, ಆಂಗೀರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ |
| ಸಪ್ತ ಗುಣಗಳು – | ಶ್ರದ್ಧೆ, ಶಕ್ತಿ, ಭಕ್ತಿ, ವಿಜ್ಞಾನ, ಅಲುಬ್ಧತೆ, ಕ್ಷಮೆ, ತ್ಯಾಗ |
| ಸಾಷ್ಟಾಂಗ (ನಮಸ್ಕಾರ ಮಾಡುವಾಗ)– | ಎದೆ, ಶಿರಸ್ಸು, ಕಣ್ಣು, ಮನಸ್ಸು, ಮಾತು, ಕಾಲು, ಕೈ, ಕಿವಿ |

# ಅನುಬಂಧ–೫

## ಕೀರ್ತನೆಗಳ ಅಕಾರಾದಿ ಸೂಚಿ

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೧೯. | ಪಾಲಿಸು ಗಣನಾಥ ನೀ | ೨೬೩ |
| ೨೨೦. | ಪಾಲಿಸೊ ಪಂಕಜನೇತ್ರ | ೧೧ |
| ೨೨೧. | ಪಾಲಿಸೊ ಸುಬ್ರಹ್ಮಣ್ಯ ಪಾಲಿಸೋ | ೨೪೭ |
| ೨೨೨. | ಪಾಲಿಸೊ ಪಾರ್ವತಿಯ ಪ್ರಾಣೇಶ | ೧೨೨ |
| ೨೨೩. | ಪಾಲಿಸು ಶ್ರೀ ಹರಿಯೆ | ೪೦೩ |
| ೨೨೪. | ಪಾಹಿ  ಪಾರ್ವತಿ ಪಾಲಿಸೆನ್ನ ಮಾತೆ | ೨೯೧ |
| ೨೨೫. | ಪಾಹಿಮಾಂ ಕಾರ್ತಿಕೇಯ | ೨೩೧ |
| ೨೨೬. | ಪಾಹಿಮಾಂ ಪರಮೇಶ | ೨೭೮ |
| ೨೨೭. | ಪಾಹಿ ಸರಸ್ವತಿ ಪಾಲಿಸೆನ್ನ ಮಾತೆ | ೨೬೬ |
| ೨೨೮. | ಪುಣ್ಯ ಮಾಡುವರೆ | ೧೭೫ |
| ೨೨೯. | ಪೂಜೆಯ ಕೈಗೊಳ್ಳೊ ಮೂಜಗದೊಡೆಯ | ೪೮ |
| ೨೩೦. | ಪೂರ್ಣಚಂದ್ರನ ನೋಡಬನ್ನಿರೆ | ೩೭೮ |
| ೨೩೧. | ಪೊರೆ ದಯದಿ ಮಾಧವ | ೩೩೫ |
| ೨೩೨. | ಪೊರೆಯೋ ಶಂಕರ | ೨೯೦ |
| ೨೩೩. | ಫಾಲಲೋಚನೆ ನನ್ನ | ೨೭೯ |
| ೨೩೪. | ಬಂದೆನಯ್ಯ ಶ್ರೀ ಕೃಷ್ಣಮೂರ್ತಿ | ೩೩೬ |
| ೨೩೫. | ಬಪ್ಪ ಶುಭಾಶುಭ ತಪ್ಪದಾದರೆ | ೪೦೮ |
| ೨೩೬. | ಬರಲಿಲ್ಲವೆನುತ ನೀ ಹೊರಗಿಕ್ಕಬೇಡ | ೭೬ |
| ೨೩೭. | ಬರಿದ ಚಿಂತಿಸಬೇಡ ಮನವೆ ಭಯಗೊಂಡು | ೮೮ |
| ೨೩೮. | ಬರಿದೆ ದೂರುವಿರೇತಕೆ | ೧೪೯ |
| ೨೩೯. | ಬಲ್ಲರೊಳು ಸಲ್ಲದೈ ಖುಲ್ಲ ಮಾತುಗಳ | ೮೯ |
| ೨೪೦. | ಬಲ್ಲಿವನಾದರೀ ತಳ್ಳಿಬೇಡ. ಅಲ್ಲದ ಪಥವಿದರಾಸೆಯ ಬಿಡು | ೯೩ |
| ೨೪೧. | ಬಾ ಬಾ ಬಾ ಗುಹನೆ | ೨೦೬ |
| ೨೪೨. | ಬಾ ಬಾ ಬಾ ಬಾರೊ ಕೃಷ್ಣ | ೩೩೭ |
| ೨೪೩. | ಬಾರೆನ್ನ ಪ್ರಾಣ ಶ್ರೀ ಗುರು | ೧೬೫ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೯೪. | ಮುನಿಜನ ಮಾನಿತ ಸ್ಕಂದ | ೨೨೮ |
| ೨೯೫. | ಯಾಕಿಂತು ಬಳಲುವೆಯೊ | ೩೯೦ |
| ೨೯೬. | ಯಾಕಿಂತು ಮನಸೋತೆ | ೩೬೯ |
| ೨೯೭. | ಯಾತರ ಭಯವಿದೆ ಹರಿಯ | ೧೫ |
| ೨೯೮. | ಯಾದವ ಯದುಕುಲ ಬಾಲನೆ | ೩೪೮ |
| ೨೯೯. | ಯಾರ ಕೃತಕವು ಇದು ವಿಚಾರವನು ಮಾಡಿ | ೯೫ |
| ೩೦೦. | ಯಾರ ಭಯವೇನಿಹುದು ಶ್ರೀವೆಂಕಟೇಶ | ೫೧ |
| ೩೦೧. | ಯಾರಿಗೆ ದೂರುವೆನು ಗಿರಿಯ ರಾಯ | ೭೭ |
| ೩೦೨. | ಯಾರಿಗೆ ದೂರುವೆನು ವೆಂಕಟರಾಯ | ೯೬ |
| ೩೦೩. | ಯಾರು ಇಕ್ಕುವರೆಂದು ಹಾರೈಸುವೆ | ೯೭ |
| ೩೦೪. | ಯಾರು ಬಲ್ಲರು ವೆಂಕಟೇಶ ನಿನ್ನೊಳಿಹ | ೯೮ |
| ೩೦೫. | ಯಾರೆನ್ನ ಕಾಯುವರು | ೩೪೯ |
| ೩೦೬. | ಯಾವ ದಾರಿಯೆನಗೆ | ೧೫೫ |
| ೩೦೭. | ಯಾವ ಭಯವು ನಮಗೆ | ೨೮೧ |
| ೩೦೮. | ಯಾವಾಗ ಬರುವನಂತೆ ನಿನ್ನಯ ರಮಣ | ೩೫೦ |
| ೩೦೯. | ರಕ್ಷಿಸು ಕುಮಾರ ಸ್ವಾಮಿಯೆ | ೨೦೩ |
| ೩೧೦. | ರಕ್ಷಿಸೋ ಎನ್ನ ರಕ್ಷಿಸು | ೫೦ |
| ೩೧೧. | ರಜತಪೀಠವೆ ಭೂ ವೈಕುಂಠ | ೩೧ |
| ೩೧೨. | ರಾಜರ ಭಾಗ್ಯವಿದು | ೩೮ |
| ೩೧೩. | ರಾಮಕೃಷ್ಣ ನಮೋ | ೧೫೬ |
| ೩೧೪. | ರಾಮನಾಥ ಸ್ವಾಮಿ ಪಾಲಿಸೋ | ೩೫೧ |
| ೩೧೫. | ರುಗ್ಮಭೂಷಣ ಪಾಲಿಸೆನ್ನನು | ೪೧೩ |
| ೩೧೬. | ಲಕ್ಷುಮಿ ನಾರಾಯಣ | ೧೫೭ |
| ೩೧೭. | ಲೇಸ ಪಾಲಿಸು ಜಗದೀಶನೆ | ೨೮೨ |
| ೩೧೮. | ಲೋಕಕ್ಕೆ ನೀ ತಾಯಿ ಲೋಕಕ್ಕೆ ನೀ ತಂದೆ | ೬೧ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೩೧೯. | ವಂದಿಪೆ ಶ್ರೀವರನೆ ಸುಂದರನೆ | ೩೫೨ |
| ೩೨೦. | ವಂದಿಸುವೆ ಮುನಿವೃಂದ ವಂದಿತ ಸ್ಕಂದ | ೨೩೪ |
| ೩೨೧. | ವಂದಿಸುವೆನು ನಿತ್ಯದೊಳು | ೯೯ |
| ೩೨೨. | ವನದೊಳಗತ್ರಿಯ ಮುನಿವರ ತರುಣಿ | ೩೯೩ |
| ೩೨೩. | ವರ ಮಂತ್ರಾಲಯದೊಳು | ೪೨ |
| ೩೨೪. | ವರದರಾಜ ಪಾಲಿಸೆನ್ನ | ೧೬ |
| ೩೨೫. | ವಲ್ಲಿದೇವಿಯ ವಲ್ಲಭಗೆ | ೨೪೧ |
| ೩೨೬. | ವಾಣಿ ಪಲ್ಲವಪಾಣಿ | ೧೯೧ |
| ೩೨೭. | ವಾಣಿ ಬ್ರಹ್ಮನ ರಾಣಿ | ೧೧೯ |
| ೩೨೮. | ವಾಣಿ ವೀಣಾಪಾಣಿ | ೨೨ |
| ೩೨೯. | ವಾದಿರಾಜರ ಪದವ ಸ್ಮರಿಸುವೆ | ೩೯ |
| ೩೩೦. | ವಾಸುದೇವರ ಜಯ ಜಯ | ೩೫೩ |
| ೩೩೧. | ವಿಠಲನಾಮದ ಸ್ಮರಣೆಯನನುದಿನ | ೩೫೪ |
| ೩೩೨. | ವಿಶ್ವಾಧೀಶರ ನಮಿಪೆ | ೪೫ |
| ೩೩೩. | ವಿಷ್ಣುತೀರ್ಥರೆ ಪಾಲಿಸಿ | ೩೩ |
| ೩೩೪. | ವಿಷ್ಣುಮೂರ್ತಿಯೆ ಪಾಹೆ | ೧೭ |
| ೩೩೫. | ವೀರಭದ್ರೇಶ್ವರನೆ ಪಾಲಿಸು | ೨೮೩ |
| ೩೩೬. | ವೃಂದಾವನದೇವಿ ನಮೋ | ೩೭೧ |
| ೩೩೭. | ವೃಂದಾವನ ಲಕ್ಷ್ಮಿ ಜಯ ಜಯ | ೩೭೨ |
| ೩೩೮. | ವೃಂದಾವನಾಚಾರ್ಯರ | ೪೧ |
| ೩೩೯. | ವೆಂಕಟಾಚಲ ನಿವಾಸ ಸಲಹಯ್ಯ | ೫೨ |
| ೩೪೦. | ವೆಂಕಟೇಶ ಎನ್ನ ಮುಂದೆ ನಿಂತಿದ್ದಂತಿದೆ | ೫೮ |
| ೩೪೧. | ವೆಂಕಟೇಶ ನಿನ್ನ ನಂಬಿದೆ ಎನ್ನ | ೫೯ |
| ೩೪೨. | ವೇದವೇದ್ಯರ ವಂದಿಸುವೆನು | ೪೦ |
| ೩೪೩. | ವೇದವ್ಯಾಸ ಮೂರುತೀ | ೧೮ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು